# ಕನ್ನಡದಲ್ಲಿ ಕೃಷಿವಿಜ್ಞಾನ ಸಾಹಿತ್ಯ ಮತ್ತು ಕೃಷಿಕರ ಮೇಲೆ ಅದರ ಪ್ರಭಾವ- ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ
ಮಹಾಪ್ರಬಂಧ

ಸಂಶೋಧಕರು

...ಬಾಲಕೃಷ್ಣ



ಮಾರ್ಗದರ್ಶಕರು

ಡಾ. ಟಿ.ಎಸ್. ಚನ್ನೇಶ್



ವಿಜ್ಞಾನಗಳ ಇತಿಹಾಸ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ

ಮಾರ್ಚ್ ೨೦೦೭

# ಕನ್ನಡದಲ್ಲಿ ಕೃಷಿವಿಜ್ಞಾನ ಸಾಹಿತ್ಯ ಮತ್ತು ಕೃಷಿಕರ ಮೇಲೆ ಅದರ ಪ್ರಭಾವ- ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

ಜೆ. ಬಾಲಕೃಷ್ಣ

ಮಾರ್ಗದರ್ಶಕರು

ಡಾ. ಟಿ.ಎಸ್. ಚನ್ನೇಶ್





ವಿಜ್ಞಾನಗಳ ಇತಿಹಾಸ ವಿಭಾಗ

ಕನ್ನಡ ವಿಶ್ವವಿದ್ಯಾಲಯ

ಹಂಪಿ, ವಿದ್ಯಾರಣ್ಯ

ಜುಲೈ, ೨೦೦೭

# ಘೋಷಣಾ ಪತ್ರ

**ಕನ್ನಡದಲ್ಲಿ ಕೃಷಿವಿಜ್ಞಾನ ಸಾಹಿತ್ಯ ಹಾಗೂ ಕೃಷಿಕರ ಮೇಲೆ ಅದರ ಪ್ರಭಾವ-ಒಂದು ಅಧ್ಯಯನ** ಮಹಾಪ್ರಬಂಧವು ನನ್ನ ಸ್ವಂತ ಸಂಶೋಧನೆ ಮತ್ತು ಮೂಲ ಕೆಲಸ. ಈ ಸಂಶೋಧನೆಯನ್ನು ಡಾ. ಟಿ.ಎಸ್. ಚನ್ನೇಶ್, ನಂ.೨೪, ಸಿದ್ಧಿವಿನಾಯಕ ಬಡಾವಣೆ, ವಿರೂಪಾಕ್ಷಪುರ, ಬೆಂಗಳೂರು-೫೬೦೦೯೭, ಇವರ ಮಾರ್ಗದರ್ಶನದಲ್ಲಿ ೨೦೦೩ರಿಂದ ೨೦೦೬ರ ಅವಧಿಯಲ್ಲಿ ಕೈಗೊಳ್ಳಲಾಯಿತು. ಈ ಸಂಶೋಧನೆಯ ವಸ್ತುವಿಷಯಗಳು ಮತ್ತು ಫಲಿತಾಂಶಗಳನ್ನು ಬೇರೆಲ್ಲೂ, ಬೇರಾವುದೇ ಪದವಿ ಅಥವಾ ಡಿಪ್ಲಮೊ ಪಡೆಯಲು ಸಲ್ಲಿಸಿರುವುದಿಲ್ಲ.

**ಜೆ. ಬಾಲಕೃಷ್ಣ**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಅಧ್ಯಯನ ವಿಭಾಗ
ಕೃಷಿ ವಿಶ್ವವಿದ್ಯಾನಿಲಯ ಹೆಬ್ಬಾಳ
ಬೆಂಗಳೂರು-೫೬೦೦೨೪

# ಪರಿವಿಡಿ

# ಕೋಷ್ಟಕಗಳ ಪಟ್ಟಿ

# ಚಿತ್ರಗಳ ಪಟ್ಟಿ

# ೧. ಪರಿಚಯ

ಸಾಹಿತ್ಯ ಎಂದರೆ ವಿಶಾಲವಾದ ಅರ್ಥದಲ್ಲಿ ಒಂದು ಭಾಷೆಯಲ್ಲಿರುವ ಗ್ರಂಥಗಳ ಸಮೂಹ, ವಿಶಿಷ್ಟ ಅರ್ಥದಲ್ಲಿ ಭಾಷಾಮಾಧ್ಯಮದ ಮೂಲಕ ಸೃಷ್ಟಿಯಾಗುವ ಕಲಾ ಕೃತಿ. ಒಂದು ಭಾಷೆಯ ಸಾಹಿತ್ಯವನ್ನು ಶುದ್ಧಸಾಹಿತ್ಯ ಕೃತಿಗಳೆಂದೂ ಶಾಸ್ತ್ರ ಸಾಹಿತ್ಯ ಕೃತಿಗಳೆಂದೂ ಎರಡು ಭಾಗ ಮಾಡಬಹುದು. ಶುದ್ಧಸಾಹಿತ್ಯ, ಮಾತಿನ ಕಲೆ. ಶಾಸ್ತ್ರಸಾಹಿತ್ಯ ವೈಜ್ಞಾನಿಕ ನಿರೂಪಣೆ. ಸಾಮಾನ್ಯವಾಗಿ ಸಾಹಿತ್ಯ ಹೃದಯ ಸಂಬಂಧಿಯಾದದ್ದು; ಶಾಸ್ತ್ರ ಬುದ್ಧಿಪ್ರಧಾನವಾದದ್ದು. ಒಂದರ ಗುರಿ ಆನಂದಾನುಭೂತಿ; ಇನ್ನೊಂದರ ಉದ್ದೇಶ ಜ್ಞಾನಪ್ರಸಾರ. ಸಾಹಿತ್ಯಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆಯಷ್ಟೇ ವೈಜ್ಞಾನಿಕ ಪರಂಪರೆಯೂ ಮುಖ್ಯವಾದದ್ದು. ಈ ಪರಂಪರೆಯ ವಿವಿಧ ಮುಖಗಳನ್ನು ಜನಸಾಮಾನ್ಯರಿಗೂ ಅಧಿಕೃತವಾಗಿ ತಿಳಿಯಪಡಿಸುವುದು ಇತರೆ ಪರಂಪರೆಗಳಷ್ಟೇ ಅವಶ್ಯಕವಾದದ್ದು.

ಮನುಷ್ಯನ ಪ್ರತಿಯೊಂದು ಅನುಭವಕ್ಕೂ ಚಟುವಟಿಕೆಗೂ ಒಂದು ಚರಿತ್ರೆ ಇದ್ದೇ ಇರುತ್ತದೆ. ಹಾಗೆಯೇ ಸಾಹಿತ್ಯಕ್ಕೂ ಒಂದು ಚರಿತ್ರೆ ಇರುತ್ತದೆ. ಯಾವ ಸಾಹಿತ್ಯವಾದರೂ ಕೇವಲ ಸಮಕಾಲೀನ ಸಾಹಿತ್ಯವಾಗಿ ಇರಲಾರದು. ಕೆಲವು ಸಾಹಿತ್ಯಗಳ ಚರಿತ್ರೆಯನ್ನು ತಿಳಿಯಲು ಅಗತ್ಯವಾದ ಆಧಾರಗಳು ದೊರೆಯುವುದಿಲ್ಲ. ಆಧಾರಗಳು ಇಲ್ಲದ ಮಾತ್ರಕ್ಕೆ ಚರಿತ್ರೆಯೇ ಇಲ್ಲವೆಂದು ಅರ್ಥವಲ್ಲ. ಮಾತು ಕಾಲದೇಶಗಳ ಕಟ್ಟಿಗೆ ಒಳಗಾದದ್ದು, ಆಡಿದಾಗಲೆ ಅದರ ಅಸ್ತಿತ್ವ ಮುಗಿದುಹೋಗುತ್ತದೆ. ಅದನ್ನು ಉಳಿಸಿಕೊಳ್ಳುವ ಮಾರ್ಗ ಇದುವರೆಗೆ ಇದ್ದದ್ದು ಎರಡೇ: ಒಂದು ನೆನಪು; ಇನ್ನೊಂದು ಬರವಣಿಗೆ. ಮಾತಿನ ಮಾಧ್ಯಮದಲ್ಲಿ ಸೃಷ್ಟಿಗೊಳ್ಳುವ ಕಲಾಕೃತಿಯಾಗಲಿ, ಶಾಸ್ತ್ರ ನಿರೂಪಣೆಯಾಗಲಿ ಹೀಗೆಯೇ ಉಳಿದುಬರಬೇಕು. ಕೇವಲ ತಲೆಮಾರುಗಳ ನೆನಪಿನಲ್ಲಿ ಉಳಿದು ಬಂದ ಸಾಹಿತ್ಯದ ಚರಿತ್ರೆಯನ್ನು ಕ್ರಮವಾಗಿ ನಿರೂಪಿಸುವುದು ಸಾಧ್ಯವಿಲ್ಲ. ಬರವಣಿಗೆಯಲ್ಲಿ ಬಂದ ಸಾಹಿತ್ಯದ ಬೆಳವಣಿಗೆಯನ್ನು ಹಂತಹಂತವಾಗಿ ಗುರುತಿಸುವುದು ಸುಲಭವಾಗುತ್ತದೆ. ಆದುದರಿಂದ ಸಾಹಿತ್ಯಚರಿತ್ರೆಗೆ ಮುಖ್ಯ ಆಧಾರ ಒಂದು ಭಾಷೆಯಲ್ಲಿರುವ ಗ್ರಂಥಸಮುದಾಯ. ಇಂಥ ಒಂದು ಗ್ರಂಥ ಸಮುದಾಯದ ಚರಿತ್ರೆಯ ನಿರೂಪಣೆಯೇ ಸಾಹಿತ್ಯ ಚರಿತ್ರೆ (ನಾಯಕ. ೧೯೭೪). ಇದು ಶುದ್ಧಸಾಹಿತ್ಯಕ್ಕೆ ಅನ್ವಯಿಸುವಂತೆ ಶಾಸ್ತ್ರ ಸಾಹಿತ್ಯಕ್ಕೂ ಅನ್ವಯಿಸುತ್ತದೆ.

ಪ್ರತಿಯೊಂದು ಕೃತಿಯೂ ಒಂದು ಗೊತ್ತಾದ ಕಾಲದಲ್ಲಿ, ಗೊತ್ತಾದ ಜಾಗದಲ್ಲಿ ಲೇಖಕನ ಪರಿಸರ ಪ್ರಜ್ಞೆಗಳಿಗೆ ಅನುಗುಣವಾಗಿ ಸಿದ್ಧಗೊಂಡಿರುತ್ತದೆ. ಸಾಹಿತ್ಯ ಮತ್ತು ಸಮಾಜ–ಸಂಸ್ಕೃತಿಗಳ ನಡುವಿನ ಸಂಬಂಧ ಸಂಕೀರ್ಣವಾದುದು. ಚರಿತ್ರೆಯೊಳಗೆ ನಡೆಯುವ ಅನೇಕ ಸಾಂಸ್ಕೃತಿಕ ಚಲನೆಗಳಿಗೆ ಸ್ಪಂದಿಸುತ್ತ ಅವನ್ನು ವಿಶಿಷ್ಟ ರೀತಿಯಲ್ಲಿ ಕಾಣಿಸುವುದರಲ್ಲಿ ಸಾಹಿತ್ಯದ ಮಹತ್ವವಿದೆ. ಈ ಕಾಣಿಸುವಿಕೆಯು ಸಾಹಿತ್ಯಕ್ಕಿರುವ ಸಾಧ್ಯತೆಗಳಲ್ಲಿ ಬಹಳ ಮುಖ್ಯವಾದುದು (ರಹಮತ್ ತರೀಕೆರೆ, ೨೦೦೨). ಗೊತ್ತಾದ ಕಾಲದ, ನಿರ್ದಿಷ್ಟ ಸಮಾಜದ ವಿನ್ಯಾಸವನ್ನು ಪರಂಪರಾಗತವಾದ ಅನೇಕ ವಿಷಯಗಳು ರೂಪಿಸುತ್ತವೆ. ಸಾಂದರ್ಭಿಕ ಜೀವನ ವ್ಯವಸ್ಥೆ, ಒಪ್ಪಿರುವ ಮೌಲ್ಯಗಳು, ಆಚಾರ ವ್ಯವಹಾರಗಳು, ವಿಧಿ ವಿಧಾನಗಳು, ಜೀವನ ವಿಧಾನಗಳು ಮುಖ್ಯವೆನ್ನಿಸುತ್ತವೆ. ಒಂದು ಅರ್ಥದಲ್ಲಿ ಇವುಗಳ ಸಮೂಹವನ್ನು ಸಂಸ್ಕೃತಿ ಎಂದು ನಿರ್ದೇಶಿಸಬಹುದು (ನಾಯಕ, ೧೯೭೪).

ಕೃಷಿಯನ್ನು ಮತ್ತು ಸಂಸ್ಕೃತಿಯನ್ನು ಬೇರೆಬೇರೆಯಾಗಿ ನೋಡುವುದು ಸಾಧ್ಯವೇ ಇಲ್ಲ. ಎಲ್ಲ ಸಂಸ್ಕೃತಿ ಮತ್ತು ನಾಗರಿಕತೆಗಳ ಮೂಲ ಸೆಲೆಯೇ ಕೃಷಿ. ಗೆಡ್ಡೆಗೆಣಸು ಸಂಗ್ರಹಿಸುವ ಮತ್ತು ಬೇಟೆಯಾಡುತ್ತಿದ್ದ ಮಾನವ ಕ್ರಮೇಣ ಕೃಷಿಗಾಗಿ ಒಂದೆಡೆ ನೆಲೆಯೂರಿದಾಗ ನಾಗರಿಕತೆ ಪ್ರಾರಂಭವಾಯಿತು. ಈ ರೀತಿ ಕೃಷಿಗಾಗಿ ಒಂದೆಡೆ ನೆಲಯೂರಿದುದರಿಂದಾಗಿ ನಂತರದ ಆರ್ಥಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಯ ಮೇಲೂ ಮಹತ್ತರ ಪರಿಣಾಮಗಳು ಬೀರತೊಡಗಿದವು (ಬ್ರಿಜೆಟ್ ಮತ್ತು ರೇಮಂಡ್, ೧೯೮೩). ಹಾಗಾಗಿ ಕೃಷಿ ಸಾಹಿತ್ಯ ಚರಿತ್ರೆಯ ಅಧ್ಯಯನಕ್ಕೆ ಪೂರಕವಾಗಿ ಕೃಷಿ ಚರಿತ್ರೆಯ ಅಧ್ಯಯನವೂ ಅವಶ್ಯಕವಾದುದು.

ಕನ್ನಡದಲ್ಲಿ ಕೃಷಿ ಸಾಹಿತ್ಯ ಚರಿತ್ರೆ ಕೃಷಿಯ ಚರಿತ್ರೆಯಷ್ಟು ಪ್ರಾಚೀನವಲ್ಲ. ಕೃಷಿಗೆ ಸುಮಾರು ೯೦೦೦ – ೧೦೦೦೦ ವರ್ಷಗಳ ಚರಿತ್ರೆಯಿದೆ. ಆದರೆ ಕನ್ನಡದ ಕೃಷಿ ಸಾಹಿತ್ಯಕ್ಕೆ ಸುಮಾರು ಒಂದು ಶತಮಾನದ ಚರಿತ್ರೆಯಷ್ಟೇ ಇದೆ. ಕೃಷಿ ಸಾಹಿತ್ಯವನ್ನು ಶಾಸ್ತ್ರ ಅಥವಾ ವೈಜ್ಞಾನಿಕ ಸಾಹಿತ್ಯವೆಂದು ಪರಿಗಣಿಸುವುದಾದಲ್ಲಿ, ಕನ್ನಡದ ವೈಜ್ಞಾನಿಕ ಸಾಹಿತ್ಯದ ಚರಿತ್ರೆಯೂ ದೀರ್ಘವಾಗಿಲ್ಲ. ೧೯೧೭ರಿಂದೀಚೆಗಷ್ಟೇ ಕನ್ನಡದಲ್ಲಿ ಆಧುನಿಕ ವೈಜ್ಞಾನಿಕ ಸಾಹಿತ್ಯವನ್ನು ಕಾಣಬಹುದು. ಆದರೆ ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ ಬರದಿರಲು ಕಾರಣಗಳೂ ಹಲವಾರು. ದಾಸ್ಯದಲ್ಲಿದ್ದ ನಮಗೆ ಆಧುನಿಕ ವಿಜ್ಞಾನದ ಅಧ್ಯಯನಕ್ಕೆ ಆಸ್ಪದ ದೊರೆತದ್ದು ಬಹಳ ತಡವಾಗಿ. ಪಾಶ್ಚಾತ್ಯ ಶಿಕ್ಷಣ ಪದ್ಧತಿಯನ್ನು ಭಾರತಕ್ಕೆ ತಂದ ಬ್ರಿಟಿಷರು ನಮಗೆ ವೈಜ್ಞಾನಿಕ ಶಿಕ್ಷಣವನ್ನು ಒದಗಿಸುವ ಬಗ್ಗೆ ಆಸಕ್ತಿ ತೋರಲಿಲ್ಲ. ಅವರು ನೀಡಿದ ಶಿಕ್ಷಣದ ಉದ್ದೇಶ ತಮಗೆ ಬೇಕಾದ ಗುಮಾಸ್ತರನ್ನೂ, ಆಡಳಿತಗಾರರನ್ನೂ ತಯಾರು ಮಾಡುವುದಷ್ಟೇ ಆಗಿತ್ತು. ಆದರೆ ನಮ್ಮ ದೇಶದ ನೈಸರ್ಗಿಕ ಸಂಪತ್ತಿನ

ಪೂರ್ಣ ಪ್ರಯೋಜನ ಪಡೆಯುವುದಕ್ಕಾಗಿ ಆಧುನಿಕ ವಿಧಾನಗಳನ್ನು ಬಳಸಬೇಕಾಗಿ ಬಂದು, ಅದಕ್ಕೆ ಅವಶ್ಯವೆನಿಸುವ ತಂತ್ರಜ್ಞರನ್ನೂ ಇಲ್ಲಿಯೇ ತಯಾರುಮಾಡಬೇಕಾಗಿ ಬಂದುದರಿಂದ ಅಲ್ಪ ಪ್ರಮಾಣದಲ್ಲಿಯಾದರೂ ವೈಜ್ಞಾನಿಕ ಶಿಕ್ಷಣವನ್ನು ಪ್ರಾರಂಭಿಸಲೇ-ಬೇಕಾಯಿತು. ಹೀಗಾಗಿ ನಮ್ಮ ಜನತೆಗೆ ಆಧುನಿಕ ವಿಜ್ಞಾನದ ಸಂಪರ್ಕ ಒದಗಿ ಬಂದದ್ದು ಬಹಳ ನಿಧಾನವಾಗಿ ಮತ್ತು ಬಹು ಕಡಿಮೆ ಪ್ರಮಾಣದಲ್ಲಿ. ಆದುದರಿಂದ ಇತ್ತೀಚಿನವರೆಗೂ ಜನಪ್ರಿಯ ವಿಜ್ಞಾನ ಸಾಹಿತ್ಯಕ್ಕೆ ಜನತೆಯಿಂದ ಬೇಡಿಕೆ ಬರುವ ಸಂಭವವೇ ಇರಲಿಲ್ಲ (ಲಕ್ಷ್ಮಣರಾವ್, ೧೯೭೦). ಆದರೂ ಸುಬ್ಬರಾಯಪ್ಪನವರ (೧೯೮೬) ಅಭಿಪ್ರಾಯದಂತೆ ಕರ್ನಾಟಕದಲ್ಲಿ ವೈಜ್ಞಾನಿಕ ವಿಚಾರಶೀಲತೆ ಬಹುಮುಖವಾಗಿತ್ತು. ಅದರ ಮುಖ್ಯ ಸೂಚಕವಾಗಿ ಈಗಲೂ ಮೈಸೂರು, ಧಾರವಾಡ, ಮೂಡಬಿದರೆ, ಶೃಂಗೇರಿ, ಬೆಂಗಳೂರು, ಚೆನ್ನೈ ಮತ್ತಿತರ ಸ್ಥಳಗಳ ಪ್ರಾಚ್ಯ ವಸ್ತುಭಂಡಾರಗಳಲ್ಲಿ ನೂರಾರು ವೈಜ್ಞಾನಿಕ ಹಸ್ತಪ್ರತಿಗಳಿವೆ. ನೂರಾರು ವರ್ಷಗಳ ಹಿಂದೆ ಬರೆದ ಇಂತಹ ಅಮೂಲ್ಯ ಗ್ರಂಥಗಳಲ್ಲಿರುವ ಅನೇಕ ವೈಜ್ಞಾನಿಕ ವಿಚಾರಗಳ ಆಳವಾದ ಸಂಶೋಧನೆಯಾಗಿಲ್ಲ.

ಮೈಸೂರು ವಿಶ್ವವಿದ್ಯಾನಿಲಯವು ೧೯೧೬ರಲ್ಲಿ ಸ್ಥಾಪಿತವಾಯಿತು. ಆಗ ಇಡೀ ಮೈಸೂರು ರಾಜ್ಯಕ್ಕೆ ಸೆಂಟ್ರಲ್ ಕಾಲೇಜು ಮಾತ್ರ ವಿಜ್ಞಾನದ ಕಾಲೇಜಾಗಿತ್ತು ಹಾಗೂ ಅಲ್ಲಿ ಬೆರಳೆಣಿಕೆಯಷ್ಟು ವಿದ್ಯಾರ್ಥಿಗಳು ಮಾತ್ರ ವ್ಯಾಸಂಗ ಮಾಡುತ್ತಿದ್ದರು. ವಿಜ್ಞಾನದ ಮಾತಿರಲಿ, ಯಾವುದಕ್ಕೇ ಆಗಲಿ, ವಿದ್ಯಾವಂತರೆನಿಸಿಕೊಂಡವರು ಕನ್ನಡವನ್ನು ಬಳಸಿದರೆ ಅವಮಾನವೆಂದು ಜನ ಭಾವಿಸಿದ್ದ ಕಾಲವದು. ಅಂತಹ ಸನ್ನಿವೇಶದಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಭೌತವಿಜ್ಞಾನ ಪ್ರಾಧ್ಯಾಪಕರಾಗಿದ್ದ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಮತ್ತು ಮೈಸೂರು ಸರ್ಕಾರದ ಪವನಶಾಸ್ತ್ರ ವೀಕ್ಷಣಾಲಯದ ಮುಖ್ಯಸ್ಥರಾಗಿದ್ದ ನಂಗಪುರಂ ವೆಂಕಟೇಶ ಅಯ್ಯಂಗಾರ್‌ರವರು ವಿಜ್ಞಾನವನ್ನು ಕನ್ನಡ ಭಾಷೆಯ ಮೂಲಕ ಜನತೆಯಲ್ಲಿ ಹರಡುವ ಅವಶ್ಯಕತೆಯನ್ನು ಮನಗಂಡು 'ಕರ್ನಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ೧೯೧೮ರಲ್ಲಿ 'ವಿಜ್ಞಾನ' ಎಂಬ ಒಂದು ಮಾಸಪತ್ರಿಕೆಯನ್ನು ಹೊರಡಿಸುವ ಸಾಹಸ ಮಾಡಿದರು. ಪತ್ರಿಕೆಗೆ ಸಾಮಗ್ರಿಯನ್ನೊದಗಿಸುವುದರಲ್ಲಿ ಎಷ್ಟೇ ಕಷ್ಟಗಳಿದ್ದರೂ ಅವುಗಳನ್ನೆದುರಿಸಿ ಮಾಸಪತ್ರಿಕೆಯನ್ನು ನಡೆಸಿಕೊಂಡು ಬರಲು ಅಗತ್ಯವಾದ ಶ್ರದ್ಧೆ, ಉತ್ಸಾಹಗಳು ಸಂಪಾದಕರಲ್ಲಿದ್ದುವಾದರೂ ವಿಜ್ಞಾನಕ್ಕೇ ಮೀಸಲಾದ ಪತ್ರಿಕೆಯೊಂದು ಅಭಿವೃದ್ಧಿ ಹೊಂದಲು ಕಾಲವಿನ್ನೂ ಪಕ್ವವಾಗಿರಲಿಲ್ಲ. ಜನತೆಯಿಂದ ಅದಕ್ಕೆ ಆಸರೆ ದೊರೆಯಲಿಲ್ಲ. ಹನ್ನೆರಡು ಸಂಚಿಕೆಗಳ ಒಂದು ಸಂಪುಟ ಮುಗಿಸಿ ಪತ್ರಿಕೆಯನ್ನು ನಿಲ್ಲಿಸಬೇಕಾಯಿತು (ಲಕ್ಷ್ಮಣರಾವ್, ೧೯೭೦). 'ಕರ್ನಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ'ಯು ಭೀಮರಾಯರ 'ವ್ಯವಸಾಯಶಾಸ್ತ್ರದ ಕೆಲವು ಮುಖ್ಯ ತತ್ವಗಳು' ಎಂಬ

ಪುಸ್ತಕವನ್ನು ೧೯೧೯ರಲ್ಲಿ ಪ್ರಕಟಿಸಿತ್ತು. ಕರ್ನಾಟಕ ವಿಜ್ಞಾನ ಪ್ರಚಾರಿಣಿ ಸಮಿತಿಯು ೧೯೧೭ರಲ್ಲಿ ಜನಪ್ರಿಯ ವಿಜ್ಞಾನ ಸಾಹಿತ್ಯದ ಪ್ರಕಟಣೆಯ ಪ್ರಯತ್ನ ನಡೆಸುವುದಕ್ಕೆ ಮೊದಲೇ ೧೯೧೫ರಲ್ಲಿ ಮೈಸೂರು ವ್ಯವಸಾಯ ಇಲಾಖೆಯಿಂದ ಕೃಷಿಕರಿಗಾಗಿ 'ಮೈಸೂರು ವ್ಯವಸಾಯದ ಕ್ಯಾಲೆಂಡರ್' ಅಥವಾ ಪಂಚಾಂಗ ಎಂಬ ವಾರ್ಷಿಕ ಪುಸ್ತಕವನ್ನು ಪ್ರಕಟಿಸಲಾಗಿತ್ತು. ಅದು ಪಂಚಾಂಗ ಮತ್ತು ವಾರ್ಷಿಕ ಪುಸ್ತಕವಲ್ಲದೆ ರೈತರ ವ್ಯವಸಾಯ ಕೈಪಿಡಿಯೂ ಆಗಿತ್ತು. ಅದರಲ್ಲಿ ವ್ಯವಸಾಯಕ್ಕೆ ಸಂಬಂಧಪಟ್ಟ ಸಂಶೋಧನೆಗಳ ಫಲಿತಗಳನ್ನು ಜನಪ್ರಿಯವಾಗುವಂತೆ ತಿಳಿಸುವ ಅನೇಕ ಲೇಖನಗಳಿತ್ತು. ಅಷ್ಟೆಲ್ಲ ಪ್ರಯತ್ನಗಳಾಗಿದ್ದರೂ ಭಾರತ ದಾಸ್ಯಮುಕ್ತವಾದ ನಂತರವೂ ಕನ್ನಡದಲ್ಲಿ ಕೃಷಿ ಸಾಹಿತ್ಯ ಗಮನೀಯವಾಗಿ ಕಂಡುಬರಲಿಲ್ಲ. ಅದಕ್ಕೆ ಕಾರಣಗಳೇ ಬೇರೆಯವು.

ಭಾರತದಲ್ಲಿ ಈ ಮೊದಲು ಕೃಷಿ ಒಂದು ಉದ್ಯಮವಾಗಿರಲಿಲ್ಲ ಹಾಗೂ ಯಾವುದೇ ಆರ್ಥಿಕ ಲಾಭಕ್ಕಾಗಿ ಕೃಷಿಯನ್ನು ಕೈಗೊಳ್ಳುತ್ತಿರಲಿಲ್ಲ. ಕೃಷಿ ಜೀವನಾಧಾರದ ಬದುಕಿನ ಒಂದು ವಿಧಾನವಾಗಿತ್ತು. ಕೃಷಿಯ ಬಗೆಗಿನ ಜ್ಞಾನ ಪಾರಂಪರಿಕವಾಗಿ ತಲತಲಾಂತರಗಳಿಂದ ಮೌಖಿಕವಾಗಿ ಹರಿದು ಬರುತ್ತಿತ್ತು. ರೈತನೊಬ್ಬನಿಗೆ ತನ್ನ ವ್ಯವಸಾಯದ ಬದುಕಿನಲ್ಲಿ ತನಗೆ ತಿಳಿದಿರದಿದ್ದುದು ಏನೂ ಇರುತ್ತಿರಲಿಲ್ಲ. ಆ ಹಂತದಲ್ಲಿ ಅವನ ಅರಿವನ್ನು ಹೆಚ್ಚಿಸುವ ಯಾವುದೇ ಬಾಹ್ಯ ಜ್ಞಾನ ಪರಿಕರದ ಅವಶ್ಯಕತೆ ಇರಲಿಲ್ಲ. ಮೌಖಿಕ ಜ್ಞಾನ ಪರಂಪರೆಯ ಅರಿವಷ್ಟೇ ಇದ್ದ, ಬಹುಪಾಲು ಅನಕ್ಷರಸ್ಥರಾಗಿದ್ದ ಅವರಿಗೆ ಶಿಷ್ಟ ಲಿಖಿತ ಸಾಹಿತ್ಯರೂಪದಲ್ಲಿ ಕೃಷಿಜ್ಞಾನ ಲಭಿಸಬಹುದು ಎಂಬ ಕಲ್ಪನೆಯೂ ಇರಲಿಕ್ಕಿಲ್ಲ. ಬದುಕಿನ ಹಲವಾರು ಅಂಶಗಳು ಜನಪದದಲ್ಲಿ ಹಾಸುಹೊಕ್ಕಾಗಿರುವಂತೆ ಕೃಷಿಯ ಬಗೆಗಿನ ಅನುಭವ ಹಾಗೂ ಪಾರಂಪರಿಕ ಜ್ಞಾನವೂ ಸಹ ಜನಪದದಲ್ಲಿ ಹಾಸುಹೊಕ್ಕಾಗಿತ್ತು. ಇಂದು ನಾವು 'ಜಾನಪದ' ಎಂದು ಪರಿಕಲ್ಪಿಸುವ ಸಂಗತಿಗಳೆಲ್ಲವೂ ಕೃಷಿ ಸಂಸ್ಕೃತಿಯ ಸಾಮುದಾಯಿಕ ಸಮಾಜವೊಂದರ ಕ್ರಿಯಾಚರಣೆಗಳಾಗಿರುತ್ತವೆ (ಶಿವರಾಮ ಶೆಟ್ಟಿ, ೨೦೦೦). ಕೃಷಿ ಜಾನಪದದ ಅತ್ಯುತ್ತಮ ಉದಾಹರಣೆ ಕೃಷಿ ಗಾದೆಗಳು. ಅವು ತಲೆತಲಾಂತರಗಳ ಅನುಭವದ ಮೂಸೆಯಿಂದ ಮೂಡಿಬಂದ ಉಕ್ತಿಗಳಷ್ಟೇ ಅಲ್ಲ, ಕೃಷಿಯ ಸಾಂಪ್ರದಾಯಿಕ ಜ್ಞಾನವನ್ನು ಪಸರಿಸುವ ಮೌಖಿಕ ಮಾಧ್ಯಮವೂ ಆಗಿದೆ.

ಭಾರತದಲ್ಲಿ ಮೊದಲಿನಿಂದಲೂ ಕೃಷಿಕರು ಅನಕ್ಷರಸ್ಥರು. ಅವರಿಗೆ ಮೂಲಭೂತವಾಗಿ ಶಿಕ್ಷಣ ನೀಡುವ ಪ್ರಯತ್ನಗಳು ನಡೆಯುತ್ತಿದ್ದವೇ ಹೊರತು ಅವರಿಗೆ ಅವರದೇ ಕಸುಬಿನ, ಜೀವನ ವಿಧಾನದ ಬಗೆಗಿನ ಸಾಹಿತ್ಯ ನೀಡಬೇಕೆಂದು ಯಾರಿಗೂ ಅನ್ನಿಸಿರಲಿಲ್ಲ. ಅಲ್ಲದೆ

ಯಾವುದೇ ಸಾಹಿತ್ಯ ಪ್ರಕಟವಾಗಿದ್ದರೂ ಸಹ ಅದು ವಿಜ್ಞಾನಿಗಳ ಅಥವಾ ಕೃಷಿ ಇಲಾಖೆಯ ಅಧಿಕಾರಿಗಳ ಕರಪತ್ರ, ವೈಜ್ಞಾನಿಕ ಲೇಖನಗಳಾಗಿದ್ದವು.

ಕೃಷಿಯ ಲಿಖಿತ ಸಾಹಿತ್ಯ ಬರುವುದಕ್ಕೂ ಮೊದಲು ಕೃಷಿ ಮಾಹಿತಿಯ ಸಂವಹನಕ್ಕಾಗಿ ಕೃಷಿ ಇಲಾಖೆಯ ಅಧಿಕಾರಿಗಳು ಹಳ್ಳಿಗಳಿಗೆ ಭೇಟನೀಡಿ, ಸಭೆಗಳನ್ನು ನಡೆಸಿ ಹೊಸ ಕೃಷಿ ವಿಧಾನಗಳನ್ನು ಅನುಸರಿಸುವಂತೆ ಹಳ್ಳಿಗರನ್ನು ಒಲೈಸುತ್ತಿದ್ದರು ಅಥವಾ ಹತ್ತಿರದ ಸರ್ಕಾರಿ ಕೃಷಿಕ್ಷೇತ್ರಗಳಿಗೆ ಭೇಟ ನೀಡುವಂತೆ ಆಹ್ವಾನಿಸುತ್ತಿದ್ದರು. ರೈತ ಅನಕ್ಷರಸ್ಥನಾಗಿದ್ದುದರಿಂದ ಆತನಿಗೆ ಅಧಿಕಾರಿಗಳು ಹೇಳುತ್ತಿದ್ದುದರಲ್ಲಿ ಅಥವಾ ತಾನು ತನ್ನ ಹೊಲದಲ್ಲಿ ಅಥವಾ ಇತರರ ಹೊಲಗಳಲ್ಲಿ ಕಣ್ಣಾರೆ ಕಾಣುತ್ತಿದ್ದುದರಲ್ಲಿ ನಂಬಿಕೆ ಇರುತ್ತಿತ್ತು.

ಕ್ಷೇತ್ರ ಭೇಟಗಳಿಗೆ ಹೊರಡುವ ಅಂತಹ ಕೃಷಿ ಅಧಿಕಾರಿಗಳ ಸಲಕರಣೆಗಳು ಸಾಮಾನ್ಯವಾಗಿ ಒಂದು ಎತ್ತಿನಗಾಡಿ, ಒಂದು ಜೊತೆ ಎತ್ತುಗಳು, ನೇಗಿಲು ಮತ್ತು ಇತರ ಸಲಕರಣೆಗಳು, ಅವುಗಳ ಪ್ರಾತ್ಯಕ್ಷಿಕೆಗಾಗಿ ವ್ಯಕ್ತಿಯೊಬ್ಬ, ಲಾಟೀನು, ಗ್ರಾಮಾಫೋನ್, ಅಧಿಕಾರಿಗಳ ಉಪಯೋಗಕ್ಕಾಗಿ ಆಯ್ದ ಮಾಹಿತಿ ಪುಸ್ತಕಗಳು, ಪ್ರದರ್ಶನಕ್ಕಾಗಿ ಪೋಸ್ಟರುಗಳು, ಉಚಿತ ವಿತರಣೆಗಾಗಿ ಮಾದರಿ ಬೀಜಗಳು, ಗಂಧಕ, ಅಮೋನಿಯಂ ಸಲ್ಫೇಟ್ ಮುಂತಾದವು ಇರುತ್ತಿದ್ದವು. ಅಂತಹ 'ಮಾಹಿತಿ ಸಂವಹನ' ಗಾಡಿಗಳು ಮೊದಲೇ ರೆವೆನ್ಯೂ ಅಧಿಕಾರಿಗಳ ಮೂಲಕ ಹಳ್ಳಿಗಳಿಗೆ ತಾವು ಬರುವ ವಿಷಯ ತಿಳಿಸಿ ಪೂರ್ವ ನಿರ್ಧಾರಿತ ಹಾದಿಯಲ್ಲಿ ಹೋಗಿಬರುತ್ತಿದ್ದರು. ಪ್ರಮುಖ ಹಳ್ಳಿಗಳಿಗೆ ಭೇಟನೀಡಿ ಅಲ್ಲಿ ಕೆಲದಿನಗಳು ಮೊಕ್ಕಾಂ ಹೂಡಿ ರೈತರೊಂದಿಗೆ ಚರ್ಚೆ, ಸಭೆಗಳನ್ನು ನಡೆಸಿ, ಅವರ ಹೊಲಗದ್ದೆಗಳಿಗೆ ಭೇಟನೀಡಿ ಪ್ರಾತ್ಯಕ್ಷಿಕೆಗಳನ್ನು ನೀಡುತ್ತಿದ್ದರು. ಆ ರೀತಿ ವರ್ಷದಲ್ಲಿ ಸುಮಾರು ಎಂಟು ತಿಂಗಳುಗಳ ಕಾಲ, ಪ್ರತಿ ತಿಂಗಳು ಸುಮಾರು ಹನ್ನೆರಡರಿಂದ ಹದಿಮೂರು ಹಳ್ಳಿಗಳಿಗೆ ಭೇಟ ನೀಡುತ್ತಿದ್ದರು (ಆರ್.ಜಿ.ಅಲನ್, ೧೯೪೦).

ಕೃಷಿ ಸಾಹಿತ್ಯ ವಿಕಾಸದ ಅಧ್ಯಯನಕ್ಕೆ ಪೂರಕವಾಗಿ ಕೃಷಿ ಚರಿತ್ರೆಯ ಅಧ್ಯಯನವೂ ಅತ್ಯಂತ ಅವಶ್ಯಕ. ಏಕೆಂದರೆ ಕೃಷಿ ಸಾಹಿತ್ಯ ವಿಕಾಸ ಸಂಪೂರ್ಣ ಅವಲಂಬಿತವಾಗಿರುವುದು ಕೃಷಿ ಕ್ಷೇತ್ರದ ಅಭಿವೃದ್ಧಿಯ ಮೇಲೆ. ಕೃಷಿ ಇಂದು ಬದುಕಿನ ಒಂದು ವಿಧಾನವಾಗಷ್ಟೇ ಉಳಿದಿಲ್ಲ. ಎಲ್ಲ ಕ್ಷೇತ್ರಗಳ ವಾಣಿಜ್ಯೀಕರಣವಾಗಿರುವಂತೆ ಕೃಷಿ ಕ್ಷೇತ್ರದ ವಾಣಿಜ್ಯೀಕರಣವೂ ಆಗಿದೆ. ಜಾಗತೀಕರಣವೆಂಬ ಕತ್ತಿಯು ಸಂಸ್ಕೃತಿಗಳನ್ನು ಬೇರು ಸಹಿತ ಕಿತ್ತೊಗೆದಿದೆ ಎಂದು ಪಾಣಿನಿ (೧೯೯೯) ಹೇಳಿದ್ದಾರೆ. ಈ ಮೊದಲು ಗ್ರಾಮೀಣ ಬದುಕಿನಲ್ಲಿ ಹಣಕ್ಕೆ ಸ್ಥಾನವೇ ಇರಲಿಲ್ಲ. ಈ ಪರಿಸ್ಥಿತಿಯ ಬಗ್ಗೆ ದ್ವಾರಕೀನಾಥ್‌ರವರು (೨೦೦೬) ಈ ರೀತಿ ಹೇಳುತ್ತಾರೆ:

ಕೆಲದಶಕಗಳ ಹಿಂದೆ ಗ್ರಾಮೀಣ ಬದುಕು ಬಹಳ ಸರಳವಾಗಿತ್ತು ಹಾಗೂ ಕೃಷಿಯ ಹಾಗೂ ಕೌಟುಂಬಿಕ ಅವಶ್ಯಕತೆಗಳು ಕೆಲ ಮೂಲಭೂತ ಅವಶ್ಯಕತೆಗಳನ್ನೊಳಗೊಂಡಂತೆ ತೀರಾ ಸೀಮಿತವಾಗಿದ್ದವು. ಬಹುಪಾಲು ಈ ಅವಶ್ಯಕತೆಗಳನ್ನು ಸ್ಥಳೀಯವಾಗಿಯೇ ನೀಗಿಸಿಕೊಳ್ಳಲಾಗುತ್ತಿತ್ತು. ಸಾಂಪ್ರದಾಯಿಕವಾಗಿ, ಈ ಸೇವೆಗಳಿಗೆ ಸಂದಾಯವನ್ನು ಕೃಷಿ ಉತ್ಪನ್ನಗಳ ರೂಪದಲ್ಲಿಯೇ ಕುಯಿಲಿನ ಸಮಯದಲ್ಲಿ ಪಾವತಿಸಲಾಗುತ್ತಿತ್ತು. ಈಗ ಇದೆಲ್ಲಾ ಬದಲಾಗಿದೆ. ಕೃಷಿ ಕುಟುಂಬಗಳ ಅವಶ್ಯಕತೆಗಳು ಹೆಚ್ಚುತ್ತಿರುವಂತೆ, ನಗರ ಬದುಕಿನ ಶೈಲಿಯನ್ನು ಅನುಕರಿಸುವುದರಿಂದಾಗಿ ಕೃಷಿ ಅವಶ್ಯಕತೆಗಳನ್ನೂ ಸಹ ಖರೀದಿಸಿದ ಪರಿಕರಗಳಿಂದಾಗಿ ಪೂರೈಸಿಕೊಳ್ಳಬೇಕಾದ ಸ್ಥಿತಿ ಬಂದಿದೆ. ಅದರ ಜೊತೆಗೆ ಗ್ರಾಮೀಣ ಬದುಕಿನಲ್ಲಿದ್ದ 'ವಸ್ತುವಿನಿಮಯ' (**Barter System**) ರೂಪದ ಸಂದಾಯಪದ್ಧತಿ ಸಂಪೂರ್ಣ ಕಣ್ಮರೆಯಾಗಿ ಅದರ ಸ್ಥಾನವನ್ನು ಹಣದ ವ್ಯವಹಾರ ಆಕ್ರಮಿಸಿದೆ. ಹಾಗಾಗಿ, ಇಂದು ಯಾವುದೇ ರೈತ ಸಾಕಷ್ಟು ಹಣದ ಆದಾಯವಿಲ್ಲದೆ ಬದುಕಲಾರ. ಅದಕ್ಕಾಗಿ ಮಾರುಕಟ್ಟೆಗಾಗಿ ಏನನ್ನಾದರೂ ಬೆಳೆಯಲೇ ಬೇಕಾಗಿರುವುದು ಇಂದು ಎಲ್ಲ ರೈತರಿಗೆ ಅನಿವಾರ್ಯವಾಗಿದೆ.

ಶತಶತಮಾನಗಳಿಂದ ನಿರಂತರವಾಗಿ ಸಾಗಿದ್ದ ಸಂಸ್ಕೃತಿಯ ಗತಿ ಹಾಗೂ ದಿಕ್ಕು ಶರವೇಗದ ವಿಜ್ಞಾನ ಹಾಗೂ ತಂತ್ರಜ್ಞಾನದ ಅಭಿವೃದ್ಧಿಯಿಂದಾಗಿ ತುಂಡರಿಸಿದೆ. ಅಂದು ಪ್ರಕೃತಿಯ ವಿಕೋಪಗಳನ್ನಷ್ಟೇ ಎದುರಿಸಬೇಕಾಗಿದ್ದ ರೈತ ಇಂದು ಪರಿಸರ ಮಾಲಿನ್ಯ, ಬಹುರಾಷ್ಟ್ರೀಯ ಸಂಸ್ಥೆಗಳ ಮೇಲಿನ ಅವಲಂಬತೆ, ಪೇಟೆಂಟ್ ಮತ್ತು ಬೌದ್ಧಿಕ ಆಸ್ತಿ ಹಕ್ಕು, ರೈತ ವಿರೋಧಿ ಕೃಷಿ ನೀತಿಗಳು, ದಿನದಿನಕ್ಕೆ ಕಾಣಿಸಿಕೊಳ್ಳುತ್ತಿರುವ ಹೊಸ ಹೊಸ ರೋಗ ಮತ್ತು ಪೀಡೆಗಳು ಮುಂತಾದ ಸಮಸ್ಯೆಗಳನ್ನು ಎದುರಿಸಬೇಕಾಗಿದೆ.

ಕೃಷಿ ಕ್ಷೇತ್ರದಲ್ಲಿನ ಬದಲಾವಣೆ ಅರವತ್ತರ ದಶಕದಲ್ಲಾದ 'ಹಸಿರುಕ್ರಾಂತಿ'ಯಿಂದ ಪ್ರಾರಂಭವಾಯಿತು. ಸ್ವಾತಂತ್ರ್ಯೋತ್ತರದ ಮೊದಲ ವರ್ಷಗಳಲ್ಲಿ ಆಹಾರ ಧಾನ್ಯಗಳ ತೀವ್ರ ಕೊರತೆ ಕಾಡತೊಡಗಿತು. ಭಾರತ ತೀವ್ರ ಕ್ಷಾಮ ಎದುರಿಸಬೇಕಾಗಬಹುದೆಂಬ ಭೀತಿ ಸರ್ಕಾರವನ್ನು ಕಾಡತೊಡಗಿತು. ಅದರಿಂದಾಗಿ ಆಹಾರ ಧಾನ್ಯಗಳ ಉತ್ಪಾದನೆ ಹೆಚ್ಚಿಸಲು ಸರ್ಕಾರ ಸಮಗ್ರ ವಿಧಾನಗಳ ಹಲವಾರು ಕಾರ್ಯಕ್ರಮಗಳನ್ನು ಕೈಗೊಂಡಿತು. ಇದರಲ್ಲಿ ಬೇಸಾಯದ ವಿಧಾನಗಳ ಆಧುನೀಕರಣವೂ ಒಂದು. ಭಾರತೀಯ ರೈತ ಜೀವನಾಧಾರದ ಕೃಷಿಯಿಂದ 'ಹೆಚ್ಚುವರಿ ಕೃಷಿ' ನಡೆಸಬೇಕಾದ ಅನಿವಾರ್ಯ ಸಂದರ್ಭ ಬಂದೊದಗಿತು. ಅಧಿಕ ಇಳುವರಿ ತಳಿಗಳು, ರಸಗೊಬ್ಬರಗಳು ಹಾಗೂ ಕೀಟ ಮತ್ತು ರೋಗನಾಶಕ ರಾಸಾಯನಿಕಗಳನ್ನು ಬಳಸಿ ಹೆಚ್ಚಿನ ಇಳುವರಿ ಪಡೆಯಬಹುದೆನ್ನುವ ತರ್ಕದಿಂದ 'ಆಧುನಿಕ' ಕೃಷಿ ಪದ್ಧತಿಗಳನ್ನು ಬಿರುಸಿನಿಂದ ಜಾರಿಗೆ ತರಲಾಯಿತು. ಈ ಕಾರ್ಯಕ್ರಮದನ್ವಯ ೧೯೬೩ರಲ್ಲಿ ಭಾರತ ಸರ್ಕಾರ ಮೆಕ್ಸಿಕೋದಿಂದ ೨೫೦ ಟನ್

ಅಧಿಕ ಇಳುವರಿ ತಳಿಯ ಬಿತ್ತನೆ ಬೀಜಗಳನ್ನು ಆಮದುಮಾಡಿಕೊಂಡಿತು (ಬ್ರೆಟ್ ವಲ್ಲಾಬ್, ೧೯೯೬). ಇದೇ ರೀತಿ ಮುಂದೆಯೂ ಭಾರತ ಬಿತ್ತನೆ ಬೀಜಗಳನ್ನು ಆಮದು ಮಾಡಿಕೊಳ್ಳುವ ಅವಶ್ಯಕತೆ ಬರಲಿಲ್ಲ. ತನ್ನದೇ ತಳಿ ಸಂವರ್ಧನಾ ಕಾರ್ಯಕ್ರಮಗಳಿಂದ ಬಿತ್ತನೆ ಬೀಜದ ಉತ್ಪಾದನೆ ತಾನೇ ಮಾಡಿಕೊಳ್ಳತೊಡಗಿತು. ಸಾಂಪ್ರದಾಯಿಕ ವಿಧಾನಗಳಲ್ಲಿ ನೂರಾರು ವರ್ಷಗಳಿಂದ ಬೇಸಾಯಮಾಡಿಕೊಂಡು ಬಂದಿದ್ದ ರೈತರು ಆಧುನಿಕ ವಿಧಾನಗಳಿಗೆ ವರ್ಗಾಯಿಸಿಕೊಳ್ಳಬೇಕಾಯಿತು.

ಹಸಿರು ಕ್ರಾಂತಿಯ ಪ್ರಾರಂಭವು ಕೃಷಿ ಸಂವಹನೆಗೆ ಇನ್ನೂ ಹೆಚ್ಚು ಒತ್ತು ಕೊಟ್ಟಿತು. ಸಂವಹನೆಯ ವಿಧಾನ ಮತ್ತು ಧ್ಯೇಯೋದ್ದೇಶಗಳು ಆಧುನಿಕ ಕೃಷಿಯ ಆದ್ಯತೆಗಳನುಸಾರ ಬದಲಾಗುತ್ತಾ ಹೋಯಿತು. ಕಳೆದ ಶತಮಾನದ ಐದನೇ ದಶಕದ ಈ ಸಂದಿಗ್ಧ ಹಂತದಲ್ಲಿ ಕೃಷಿ ಸಂವಹನೆ ಒಂದು ಸಾಂಸ್ಥಿಕ ರೂಪ ತಳೆಯಿತು (ವಿಠಲ, ೨೦೦೨). ಈ ಸಂವಹನೆಯ ಅವಶ್ಯಕತೆಯ ಬಗೆಗೆ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಮೊಟ್ಟಮೊದಲ ಕುಲಪತಿಗಳಾದ ಡಾ.ಕೆ.ಸಿ.ನಾಯಕ್ 'ಆಧುನಿಕ ವ್ಯವಸಾಯ' (ಗೊದ್ದು ವೀರೇಶ್, ೧೯೭೧) ಪುಸ್ತಕದ ಮುನ್ನುಡಿಯಲ್ಲಿ ಈ ಮುಂದಿನಂತೆ ಹೇಳಿದ್ದಾರೆ:

> **ಇಂದಿನ ಯಾಂತ್ರಿಕ ಬೇಸಾಯದ ತಳಹದಿಯ ಮೇಲೆ ಭಾರತದ ಬೇಸಾಯ ಪದ್ಧತಿಯನ್ನು ಬದಲಿಸಬೇಕಾದರೆ ಬೇಸಾಯಗಾರ ಮತ್ತು ಜನ ಸಾಮಾನ್ಯರಲ್ಲಿ ಆ ಬಗ್ಗೆ ತಿಳಿವಳಿಕೆ ಬೆಳೆಸುವುದು ಬಹಳ ಮುಖ್ಯ. ಜ್ಞಾನದ ಆಸ್ಫೋಟ ಮತ್ತು ಅದ್ಭುತ ವೈಜ್ಞಾನಿಕ ಹಾಗೂ ತಾಂತ್ರಿಕ ಪ್ರಗತಿಯ ಈ ದಿವಸಗಳಲ್ಲಿ ಜನಸಾಮಾನ್ಯರಿಗೆ ಅವುಗಳೊಡನೆ ಹೆಜ್ಜೆಯಿಟ್ಟು ಸಾಗುವುದು ಸುಲಭವಾಗಿಲ್ಲ. ನೋಬೆಲ್ ಪಾರಿತೋಷಕ ವಿಜೇತ ಡಾ. ಬೋರ್ಲಾಗ್ ಮತ್ತು ಫಿಲಿಪ್ಪಾಯಿನ್ಸ್ ಅಂತರರಾಷ್ಟ್ರೀಯ ಭತ್ತ ಸಂಶೋಧನ ಸಂಸ್ಥೆಯ ಡಾ. ಚಾಂಡ್ಲರರು ಆಧುನಿಕ ಯಂತ್ರ ತಂತ್ರ ವಿಜ್ಞಾನಗಳ ಸಹಾಯದಿಂದ ಬೇಸಾಯದ ಹುಟ್ಟುವಳಿಯಲ್ಲಿ ಭಾರೀ ದೊಡ್ಡ ಬದಲಾವಣೆಯನ್ನು ತರಲು ಶಕ್ಯವೆಂದಿರುವವರು. ಆದುದರಿಂದ ಆಧುನಿಕ ಬೇಸಾಯದ ವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರು ಪೇಟೆ ಪಟ್ಟಣಗಳ ಹಾಗೂ ಹಳ್ಳಿಗಾಡುಗಳ ಜನರಿಗೆ ವಿವರಿಸಿ ಹೇಳುವುದು ಅವರ ಕರ್ತವ್ಯ**

ಹೇಗೆ ಎರಡನೇ ಹಂತದಲ್ಲಿ 'ಗ್ರೀನ್ ರೆವೊಲ್ಯೂಶನ್' (ಹಸಿರು ಕ್ರಾಂತಿ) ನಡೆಯಿತೋ, ಅದೇ ರೀತಿ ಕೃಷಿರಂಗದಲ್ಲಿ ಮಹತ್ತರ ಬದಲಾವಣೆಗಳನ್ನು ತರುವ 'ಜೀನ್ ರೆವೊಲ್ಯೂಶನ್' ಪ್ರಾರಂಭವಾಗಿದೆ. ಅಂದರೆ ಜೀವವಿಜ್ಞಾನದ ವಿವಿಧ ಶಿಸ್ತುಗಳಾದ ಆನುವಂಶಿಕತೆ ಹಾಗೂ ವಂಶವಾಹಿ ವಿಜ್ಞಾನ, ಜೈವಿಕ ರಾಸಾಯನಶಾಸ್ತ್ರ, ಅಣುಸೂಕ್ಷ್ಮಜೀವಿಶಾಸ್ತ್ರ ಇತ್ಯಾದಿಗಳ ಸಂಗಮದಿಂದ ರೂಪುಗೊಂಡ ಹೊಸ ವಿಜ್ಞಾನ

'ಜೈವಿಕ ತಂತ್ರಜ್ಞಾನ'. ಇದು ಕೃಷಿ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆಗಳನ್ನು ತರಲಾರಂಭಿಸಿದೆ. ಹೇಗೆ ಹಸಿರುಕ್ರಾಂತಿಯ ಸಮಯದಲ್ಲಿ ಹಸಿವು ನೀಗಿಸಲು 'ಅಧಿಕ ಇಳುವರಿ ತಳಿ'ಗಳಿಂದ ಮಾತ್ರ ಸಾಧ್ಯ ಎನ್ನಲಾಗುತ್ತಿತ್ತೋ, ಈಗ ಅದೇ ರೀತಿ ಹಸಿವು ನೀಗಿಸಲು 'ಕುಲಾಂತರಿ ಸಸ್ಯ ತಳಿ'ಗಳಿಂದ ಮಾತ್ರ ಸಾಧ್ಯ ಎನ್ನಲಾಗುತ್ತಿದೆ.

ಕೃಷಿ ಇಂದು ಹೆಚ್ಚುಹೆಚ್ಚು 'ಮಾಹಿತಿ ದಾಹದ ಕಸುಬು' ಆಗುತ್ತಿದೆ (Shree Padre and others, ೨೦೦೩). 'ನಾವು ವಿದ್ಯುನ್ಮಾನ ಯುಗವನ್ನು ಪ್ರವೇಶಿಸುತ್ತಿದ್ದೇವೆ ಎಂದು ಹಲವಾರು ಬಾರಿ ಹೇಳುತ್ತಿದ್ದರೂ, ಮುದ್ರಣ ಮಾಧ್ಯಮ ಕೊನೆಗೊಳ್ಳುವ ಯಾವ ಸೂಚನೆಗಳೂ ಕಾಣುತ್ತಿಲ್ಲ. ಮುಂದಿನ ಇನ್ನೂ ಹಲವಾರು ದಶಕಗಳ ಕಾಲ ವೃತ್ತ ಪತ್ರಿಕೆಗಳು, ಪತ್ರಿಕೆಗಳು ಮತ್ತು ಪುಸ್ತಕಗಳು ಮಾಹಿತಿ, ಜ್ಞಾನ ಮತ್ತು ಮನರಂಜನೆಯ ಮಾಧ್ಯಮಗಳಾಗಿ ಉಳಿಯುವುದರಲ್ಲಿ ಸಂದೇಹವಿಲ್ಲ' ಎಂದು ಸಂವಹನ ಮತ್ತು ಸಮಾಜದ ಬಗೆಗಿನ ಯುನೆಸ್ಕೊ ವರದಿಯಲ್ಲಿ (UNESCO, ೧೯೮೨) ತಿಳಿಸಿದೆ. ಅದೇ ಕಾರಣಕ್ಕಾಗಿಯೇ ಕಳೆದ ಒಂದೆರಡು ದಶಕಗಳಿಂದ ಕೃಷಿ ಪತ್ರಿಕೋದ್ಯಮ ಹಾಗೂ ಕೃಷಿವಿಜ್ಞಾನ ಸಾಹಿತ್ಯ ರಚನೆ ಬೃಹತ್ ಪ್ರಮಾಣದಲ್ಲಿ ಬೆಳೆಯುತ್ತಿದೆ. ಇಂದು ಸರ್ಕಾರಿ, ಅರೆಸರ್ಕಾರಿ ಸಂಸ್ಥೆಗಳು, ವಿಶ್ವವಿದ್ಯಾನಿಲಯಗಳು, ಸ್ವಯಂಸೇವಾ ಸಂಸ್ಥೆಗಳು, ವ್ಯಾಪಾರಿ ಸಂಸ್ಥೆಗಳು ಕೃಷಿವಿಜ್ಞಾನ ಸಾಹಿತ್ಯವನ್ನು ಪ್ರಕಟಿಸುತ್ತಿವೆ. ಕೃಷಿ ಸಂಶೋಧನೆಗೆ ಬೆಂಬಲ ನೀಡುವುದರ ಜೊತೆಗೆ ರೈತರಿಗೆ ಕೃಷಿಯ ಹೊಸ ತಂತ್ರಜ್ಞಾನಗಳ ಬಗೆಗೆ, ಪರಿಸರದ ಬಗೆಗೆ, ಜಾಗತಿಕ ಕೃಷಿ ಆಗುಹೋಗುಗಳ ಬಗೆಗೆ ಅರಿವು ನೀಡಲು ಪ್ರಯತ್ನಿಸುತ್ತಿದೆ. ಕೃಷಿ ಮತ್ತು ಕೃಷಿ ಪರಿಕರಗಳ ಉದ್ಯಮ ಇಂದು ಬೃಹದಾಕಾರವಾಗಿ ಬೆಳೆದಿರುವುದರಿಂದ ಹಾಗೂ ಜಾಗತೀಕರಣದಿಂದಾಗಿ ಹಲವಾರು ಬಹುರಾಷ್ಟ್ರೀಯ ಕಂಪೆನಿಗಳು ಇದರಲ್ಲಿ ಪಾತ್ರವಹಿಸುತ್ತಿರುವುದರಿಂದ ಸಾಹಿತ್ಯ ಪ್ರಸರಣೆಯ ನೆಪದಲ್ಲಿ ಹಲವಾರು ಪತ್ರಿಕೆಗಳು ಪ್ರಾರಂಭಗೊಂಡು ಜಾಹೀರಾತಿನ ಮೂಲಕ ಹಣಗಳಿಕೆಯ ವಿಧಾನಗಳನ್ನು ಕಂಡುಕೊಳ್ಳುತ್ತಿವೆ.

೨೦೦೧ರ ಜನಗಣತಿಯಂತೆ ಕರ್ನಾಟಕದ ಸಾಕ್ಷರತೆ ಶೇ.೬೭.೦೪ರಷ್ಟಿದೆ. ೨೦೦೦ರಲ್ಲಿ ಕರ್ನಾಟಕದಲ್ಲಿ ಒಟ್ಟು ೧೪೫೫ ಪತ್ರಿಕೆಗಳು ಪ್ರಕಟವಾಗುತ್ತಿದ್ದವು ಅವುಗಳಲ್ಲಿ ೨೯೦ ದೈನಿಕಗಳು ಹಾಗೂ ೨೦ ಕೃಷಿ ಪತ್ರಿಕೆಗಳು (ನೋಮೇಶ್ ಕುಮಾರ್, ೨೦೦೩).

ಕನ್ನಡದಲ್ಲಿ ಕೃಷಿವಿಜ್ಞಾನ ಸಾಹಿತ್ಯ ನಿರ್ಮಾಣಕ್ಕೆಂದು ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯದಲ್ಲಿ ಪ್ರತ್ಯೇಕ ವಿಭಾಗವನ್ನು ತೆರೆಯಲಾಗಿದೆ. ಸ್ವಾತಂತ್ರ್ಯಾನಂತರ ೧೯೬೪ರಲ್ಲಿ ಸ್ಥಾಪನೆಗೊಂಡ ಶಿಕ್ಷಣ ಆಯೋಗದಿಂದ ೧೯೬೮ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ ಅಂಗೀಕೃತವಾಯಿತು. ಇದರ ಮೇರೆಗೆ ಭಾರತದ ೧೪ ಮುಖ್ಯ ಪ್ರಾದೇಶಿಕ ಭಾಷೆಗಳ ಬೆಳವಣಿಗೆಯೂ ಹಿಂದಿ ಭಾಷೆಯೊಂದಿಗೆ ಬೆಳೆಯಬೇಕು. ರಾಜ್ಯ ಭಾಷೆಗಳೆಲ್ಲವೂ

ಸಂಪದ್ಭರಿತವಾಗಿ ಬೆಳೆದು ಆಧುನಿಕ ಕಾಲದ ಜ್ಞಾನ ಪ್ರಸಾರ ಸಾಧನಗಳಾಗುವಂತೆ ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಗಳ ಸಹಯೋಗದೊಂದಿಗೆ ಸಂಯೋಜಿತ ಯತ್ನ ನಡೆಸಬೇಕು ಎಂದು ಸಂಸತ್ತು ನಿರ್ಧಾರ ಕೈಗೊಂಡಿತು. ಈ ನಿರ್ಧಾರದೊಂದಿಗೆ ಕೇಂದ್ರವು ಒಂದೊಂದು ರಾಜ್ಯಕ್ಕೂ ೪ನೇ ಪಂಚವಾರ್ಷಿಕ ಯೋಜನಾವಧಿಯಲ್ಲಿ ಪ್ರಾದೇಶಿಕ ಭಾಷೆಯ ವೈಜ್ಞಾನಿಕ ಸಾಹಿತ್ಯ ಬೆಳವಣಿಗೆಗಾಗಿ ಒಂದೊಂದು ವಿಭಾಗಗಳನ್ನು ತೆರೆಯಲು ಯೋಜಿಸಿತು. ಹೀಗಾಗಿ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದಲ್ಲಿ ಈ ಯೋಜನೆಯಡಿಯಲ್ಲಿ ಕನ್ನಡದಲ್ಲಿ ಕೃಷಿವಿಜ್ಞಾನ ಸಾಹಿತ್ಯ ನಿರ್ಮಾಣಕ್ಕಾಗಿ ೧೯೬೯-೭೦ರಲ್ಲಿ ಕನ್ನಡ ಅಧ್ಯಯನ ವಿಭಾಗವನ್ನು ತೆರೆಯಲಾಯಿತು. ಈ ವಿಭಾಗವು ೧೯೭೦ರಿಂದೀಚೆಗೆ ೨೭೦ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದೆ. ಅಲ್ಲದೆ ಕನ್ನಡದಲ್ಲಿ ಕೃಷಿವಿಜ್ಞಾನ ಸಾಹಿತ್ಯ ರಚಿಸುವವರು, ರೈತರು, ವಿದ್ಯಾರ್ಥಿಗಳು ಹಾಗೂ ಅಧ್ಯಾಪಕರಿಗೆ ನೆರವಾಗಲೆಂದು ಇಲ್ಲಿಯವರೆಗೆ ಕೃಷಿವಿಜ್ಞಾನದ ವಿವಿಧ ವಿಷಯಗಳ ೧೨ ಪಾರಿಭಾಷಿಕ ಶಬ್ದಕೋಶಗಳನ್ನು ಹಾಗೂ ಒಂದು ಸಮಗ್ರ ಕೃಷಿವಿಜ್ಞಾನ ಪಾರಿಭಾಷಿಕ ಪದಕೋಶವನ್ನು ವಿಭಾಗದ ಸಹಯೋಗದೊಂದಿಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಪ್ರಕಟಿಸಿದೆ (ಇದಿನಬ್ಬ [ಪ್ರ.ಸಂ.], ೨೦೦೪). ಇದೇ ವಿಭಾಗವು ಕನ್ನಡದ ಮೊಟ್ಟಮೊದಲ ಜೀವತಂತ್ರಜ್ಞಾನ ಅರ್ಥವಿವರಣಾ ಕೋಶ(ಇಂಗ್ಲಿಶ್-ಕನ್ನಡ)ವನ್ನು ಸಹ ಪ್ರಕಟಿಸಿದೆ (ಬಾಲಕೃಷ್ಣ, ೨೦೦೪).

ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್, ಬೆಂಗಳೂರು ಇವರು ೨೦೦೫ರಲ್ಲಿ ಪ್ರಕಟಿಸಿರುವ 'ಕನ್ನಡ ಜನಪ್ರಿಯ ವಿಜ್ಞಾನ ಪುಸ್ತಕಗಳ ಸೂಚಿ'ಯಲ್ಲಿ (Annotated Bibliography of Popular Science Books in Kannada, 2005) ೧೮೮೮ರಿಂದ ೧೯೯೬ರ ಸೆಪ್ಟೆಂಬರ್‌ವರೆಗೆ ಪ್ರಕಟವಾಗಿರುವ ಒಟ್ಟು ೪೦ ವಿವಿಧ ಅಧ್ಯಯನ ಕ್ಷೇತ್ರಗಳ ವಿಜ್ಞಾನ ಮತ್ತು ತಂತ್ರಜ್ಞಾನದ ೩೪೪೮ ಪುಸ್ತಕಗಳನ್ನು ಪಟ್ಟಿಮಾಡಲಾಗಿದ್ದು ಅದರಲ್ಲಿ ಕೃಷಿ ಮತ್ತು ಪಶುವೈದ್ಯ ಮತ್ತು ಪಶುಸಂಗೋಪನೆಗೆ ಸಂಬಂಧಿಸಿದಂತೆ ೫೧೯ ಪುಸ್ತಕಗಳನ್ನು ಪಟ್ಟಿಮಾಡಲಾಗಿದೆ.

ಇಡೀ ವಿಶ್ವದಾದ್ಯಂತ ಬೀಸುತ್ತಿರುವ ಜಾಗತೀಕರಣ, ಉದಾರೀಕರಣದ ಗಾಳಿ ಭಾರತೀಯ ಕೃಷಿ ಕ್ಷೇತ್ರದ ಮೇಲೂ ಬೀಸುತ್ತಿದೆ. ಇದರಿಂದಾಗಿ ಸ್ಥಳೀಯ ತಳಿಗಳು ಹಾಗೂ ಅವುಗಳ ಒಡೆತನ, ಸ್ಥಳೀಯ ಕೃಷಿಜ್ಞಾನ ಹಾಗೂ ಬೌದ್ಧಿಕ ಹಕ್ಕಿನ ವ್ಯಾಖ್ಯಾನಗಳು ಬದಲಾಗುತ್ತಿವೆ. ಇವೆಲ್ಲವುದರ ಜೊತೆಗೆ ಹಸಿರುಕ್ರಾಂತಿಯ ಅನುಭವಗಳಿಂದ ಬೇಸತ್ತವರು, ಜಾಗತೀಕರಣ ಹಾಗೂ ಉದಾರೀಕರಣವನ್ನು ವಿರೋಧಿಸುತ್ತಿರುವವರು ಪರಿಸರಸ್ನೇಹಿ ಕೃಷಿ ಪದ್ಧತಿಗಳಾದಂತಹ ಸಹಜ ಕೃಷಿ, ಸಾವಯವ ಕೃಷಿ, ಸುಸ್ಥಿರ ಕೃಷಿ ಇತ್ಯಾದಿಗಳನ್ನು ಪ್ರೋತ್ಸಾಹಿಸುತ್ತಿದ್ದಾರೆ.

ಈ ಗೊಂದಲಮಯ ಪರಿಸ್ಥಿತಿಯಲ್ಲಿ ಕೃಷಿವಿಜ್ಞಾನ ಸಾಹಿತ್ಯ ವಿಶೇಷವಾದ ರೂಪು ಪಡೆದುಕೊಳ್ಳತೊಡಗಿದೆ. ಯಾವುದನ್ನು ಅನುಸರಿಸಬೇಕು, ಯಾರನ್ನು ಬೆಂಬಲಿಸಬೇಕು ಎನ್ನುವುದು ಅರ್ಥವಾಗದ ರೈತ ಇಂದು ಗೊಂದಲಮಯದ ಬಿಕ್ಕಟ್ಟಿನ ಸ್ಥಿತಿಯಲ್ಲಿದ್ದಾನೆ. ಇಂತಹ ಪರಿಸ್ಥಿತಿಯಲ್ಲಿ ರಚಿತವಾಗುವ ಕೃಷಿವಿಜ್ಞಾನ ಸಾಹಿತ್ಯದ ಅಧ್ಯಯನ ಹಾಗೂ ಅದು ಪಡೆದುಕೊಳ್ಳುವ ರೂಪ ಮತ್ತು ದಿಕ್ಕನ್ನು ಈ ಅಧ್ಯಯನದಲ್ಲಿ ಗುರುತಿಸಲಾಗುತ್ತದೆ.

ಕೆಲವು ಉದಾಹರಣೆಗಳನ್ನು ಬಿಟ್ಟಲ್ಲಿ ಕನ್ನಡದ ಕೃಷಿವಿಜ್ಞಾನ ಸಾಹಿತ್ಯದ ಉಗಮ ಹಾಗೂ ಬೆಳವಣಿಗೆಯನ್ನು ೨೦ನೇ ಶತಮಾನದಲ್ಲಿ ಮಾತ್ರ ಗುರುತರವಾಗಿ ಬೆಳೆದುಬಂದಿರುವುದನ್ನು ಗಮನಿಸಬಹುದು. ಹಾಗಾಗಿ ಈ ಮುಂದಿನ ಉದ್ದೇಶಗಳೊಂದಿಗೆ ಈ ಸಂಶೋಧನೆಯನ್ನು ಕೈಗೊಳ್ಳಲಾಗಿದೆ:

ಅ. ಕನ್ನಡದಲ್ಲಿ ಕೃಷಿವಿಜ್ಞಾನ ಸಾಹಿತ್ಯದ ಪ್ರಾರಂಭ ಹಾಗೂ ಬೆಳೆದು ಬಂದ ಹಾದಿಯನ್ನು ೧೯ನೇ ಶತಮಾನದ ಅಂತ್ಯದಿಂದ ವಿವಿಧ ಹಂತಗಳಲ್ಲಿ ಗುರುತಿಸುವುದು.

ಆ. ೨೧ನೇ ಶತಮಾನದಲ್ಲಿ ಕನ್ನಡ ಕೃಷಿವಿಜ್ಞಾನ ಸಾಹಿತ್ಯ ಪಡೆದುಕೊಳ್ಳುತ್ತಿರುವ ರೂಪು, ನಿಲುವು ಹಾಗೂ ಮುನ್ನಡೆಯುತ್ತಿರುವ ದಿಕ್ಕಿನ ಅಧ್ಯಯನ.

ಇ. ಕರ್ನಾಟಕದ ಕೃಷಿಕರ ಬದುಕಿನ ಮೇಲೆ ಕನ್ನಡ ಕೃಷಿವಿಜ್ಞಾನ ಸಾಹಿತ್ಯದ ಪ್ರಭಾವದ ಅಧ್ಯಯನ.

# ೨. ಪೂರಕ ಸಾಹಿತ್ಯಾವಲೋಕನ

ಕನ್ನಡದಲ್ಲಿ ಕೃಷಿ ವಿಜ್ಞಾನ ಸಾಹಿತ್ಯದ ಅಧ್ಯಯನಕ್ಕೆ ಪೂರಕವಾಗಿರುವ, ೧೯ನೇ ಶತಮಾನದ ಅಂತ್ಯದಿಂದ ಇಲ್ಲಿಯವರೆಗಿನ ಎಲ್ಲ ಕನ್ನಡ ಮತ್ತು ಇಂಗ್ಲಿಶ್ ಸಾಹಿತ್ಯದ ಅವಲೋಕನವನ್ನು ಮಾಡಲಾಗಿದೆ. ಲಭಿಸಿದ ಸಾಹಿತ್ಯವನ್ನು ಅಧ್ಯಯನದ ಉದ್ದೇಶಗಳ ಆಧಾರವಾಗಿ ಮತ್ತು ಪೂರಕವಾಗಿ ಈ ಕೆಳಗಿನಂತೆ ವಿಂಗಡಿಸಿ ಮಂಡಿಸಲಾಗಿದೆ.

## ೨.೧ ಕೃಷಿಯ ವಿಕಾಸ

### ೨.೧.೧ ಪ್ರಾಚೀನ ಕೃಷಿ

ಕೃಷಿಗೆ ಸುಮಾರು ಹತ್ತುಸಾವಿರ ವರ್ಷಗಳ ಚರಿತ್ರೆಯಿದೆ. ಕಾಡಿನಲ್ಲಿ ಆಹಾರ ಸಂಗ್ರಹಿಸುತ್ತಿದ್ದ ಮಾನವ ಕ್ರಮೇಣ ಪ್ರಾಣಿಗಳನ್ನು ಸಾಕಲು ಪ್ರಾರಂಭಿಸಿ ಬಿತ್ತಿ ಬೆಳೆತೆಗೆಯಬಹುದೆಂಬುದನ್ನು ಕಲಿತ. ಅನಂತರ ಕೃಷಿ ಕೆಲಸ ಸುಗಮವಾಗಲು ಸಲಕರಣೆಗಳನ್ನು ಕಂಡುಹಿಡಿದ ಮತ್ತು ಹೆಚ್ಚು ಹೆಚ್ಚು ಇಳುವರಿ ನೀಡಬಲ್ಲ ಬೆಳೆಗಳನ್ನು ಆಯ್ದುಕೊಂಡ.

ಕೃಷಿ ವಿಕಾಸ ಮತ್ತು ನಾಗರಿಕತೆ ರೂಪುಗೊಂಡಿರುವುದು ಜೊತೆಜೊತೆಯಲ್ಲಿಯೇ ನಡೆದಿದೆ ಅಥವಾ ಕೃಷಿಯಿಂದಲೇ ನಾಗರಿಕತೆ ರೂಪುಗೊಂಡಿದೆ. ನಗರೀಕರಣವು ಕೃಷಿಯ ಬೆಳೆವಣಿಗೆಯ ನಂತರವೇ ಆಗಿರಬಹುದಾದ ಸಂಗತಿ.

ಕ್ರಿ.ಪೂ. ೩೦೦೦ ವರ್ಷಗಳ ಹಿಂದೆಯೇ ಸಿಂಧು ನಾಗರಿಕತೆ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ದಕ್ಷಿಣ ಭಾರತದಲ್ಲಿದ್ದ ನವಶಿಲಾಯುಗದ ವಸತಿಸ್ಥಾನಗಳನ್ನು ಸಂಶೋಧಕರು ಗುರುತಿಸಿದ್ದಾರೆ. ಅವುಗಳಲ್ಲಿ ಕರ್ನಾಟಕದಲ್ಲಿನ ಮುಖ್ಯ ಸ್ಥಳಗಳೆಂದರೆ ಈಗಿನ ಉತ್ತರ ಕರ್ನಾಟಕದಲ್ಲಿರುವ ಕೊಡೇಕಲ್, ಉತ್ತನೂರು, ಕುಪ್ಗಲ್ ಮತ್ತು ಪಲ್ಲವಾಯ್. ಆ ಸ್ಥಳಗಳಲ್ಲಿ ದೊರಕಿರುವ ಶಿಲಾ ಕೊಡಲಿಗಳು ಕಾಳು ಪುಡಿಮಾಡುವ ಗುಂಡುಕಲ್ಲುಗಳಿಂದ ಅವರು ಆಗಲೇ ಬೇಸಾಯದ ಬದುಕನ್ನು ನಡೆಸುತ್ತಿದ್ದರೆಂದು ಊಹಿಸಲಾಗಿದೆ. ಉತ್ತನೂರಿನಲ್ಲಿ ಸುಟ್ಟ ಸಗಣಿಯ ರಾಶಿಗಳು ಕಂಡುಬಂದಿರುವುದರಿಂದ ಕೃಷಿಯೊಂದಿಗೆ ಜಾನುವಾರು ಸಾಕಣೆಯೂ ಜೊತೆಜೊತೆಯಲ್ಲಿಯೇ ನಡೆಯುತ್ತಿತ್ತೆಂದು ಹೇಳಲಾಗುತ್ತದೆ. ಆ ಬೂದಿಯ ರಾಶಿಯಲ್ಲಿ ದನಗಳ ಗೊರಸಿನ ಗುರುತುಗಳೂ ಸಹ ಕಂಡುಬಂದಿವೆ (ಇರ್ಫನ್ ಹಬೀಬ್, ೨೦೦೧: ಬ್ರಿಜೆಟ್ ಮತ್ತು ರೇಮಂಡ್ ಅಲ್ಚಿನ್, ೧೯೮೩).

ಕೃಷಿಗೆ ಪೂರಕವಾಗಿರುವ ಕೆರೆಗಳ ಚರಿತ್ರೆಯನ್ನು ಅಧ್ಯಯನ ಮಾಡಿದಲ್ಲಿ ಕೃಷಿಯ ಚರಿತ್ರೆಯನ್ನೂ ತಿಳಿಯಬಹುದು. ಕ್ರಿ.ಪೂ. ೧೦೦೦ ವರ್ಷಗಳ ಹಿಂದೆಯೇ ಕರ್ನಾಟಕದಲ್ಲಿ ಬೃಹತ್‌ಶಿಲಾಯುಗದ ಜನರು ಜಲಸಂಗ್ರಹಾಗಾರಗಳನ್ನು ನಿರ್ಮಿಸಿದ್ದರೆಂದು ಸಂಶೋಧಕರು ತಿಳಿಸಿದ್ದಾರೆ. ಆದೋನಿ, ಬನವಾಸಿ, ಚಂದ್ರವಳ್ಳಿ ಮತ್ತು ತಾಳಗುಂದದಲ್ಲಿ ದೊರೆತಿರುವ ಶಾಸನಗಳು ಕೆರೆಗಳ ನಿರ್ಮಾಣಗಳ ಬಗ್ಗೆ ತಿಳಿಸುತ್ತವೆ. ಕೋಲಾರ ಜಿಲ್ಲೆಯ ಪ್ರಖ್ಯಾತ ಬೇತಮಂಗಲದ ಕೆರೆ ಸುಮಾರು ೧೦೦೦ ವರ್ಷಗಳ ಹಿಂದೆಯೇ ನಿರ್ಮಿಸಲಾಗಿದೆಯೆಂದು ಅಲ್ಲಿ ದೊರೆತಿರುವ ಎರಡು ಶಾಸನಗಳು ಹೇಳುತ್ತವೆ. ಚಿತ್ರದುರ್ಗದ ಬಳಿಯಿರುವ ಚಂದ್ರವಳ್ಳಿಯ ಕೆರೆಯನ್ನು ಮೊದಲ ಕದಂಬ ದೊರೆ ಮಯೂರ ವರ್ಮ (ಕ್ರಿ.ಶ. ೩೫೦) ನಿರ್ಮಿಸಿದನೆಂದು ಅಲ್ಲಿನ ಶಾಸನ ಹೇಳುತ್ತದೆನ್ನುತ್ತಾರೆ ಸಂಶೋಧಕರು (ದೀಕ್ಷಿತ್ ಮತ್ತು ಇತರರು, ೧೯೯೩).

ಕೃಷಿಸಂಬಂಧಿ ಚಟುವಟಿಕೆಗಳಿಗೆ ಋಗ್ವೇದದಲ್ಲಿ ಬೇಕಾದಷ್ಟು ಮಹತ್ವ ಹಾಗೂ ಪ್ರಸ್ತಾಪಗಳಿವೆ. ನೇಗಿಲಿನ ಬಳಕೆ, ಬೀಜಗಳ ಬಿತ್ತುವಿಕೆ, ಪೈರನ್ನು ಕುಯ್ಯುವುದು, ಧಾನ್ಯವನ್ನು ವಿಂಗಡಿಸುವುದು, ಕಾಲುವೆಗಳ ಮುಖಾಂತರ ಕೃಷಿಕ್ಷೇತ್ರಕ್ಕೆ ನೀರು ಹಾಯಿಸುವುದು, ಇತ್ಯಾದಿಗಳೆಲ್ಲಾ ಋಗ್ವೇದದ ಹಲವಾರು ಕಡೆಗಳಲ್ಲಿ ಪ್ರಸ್ತಾಪಿಸಲಾಗಿದೆ. ಗಿಡಗಳನ್ನು ಬೆಳೆಸುವ ಪ್ರವೃತ್ತಿಯನ್ನು ಮತ್ಸ್ಯಪುರಾಣ, ಅಗ್ನಿಪುರಾಣ, ವರಾಹಪುರಾಣ, ಪದ್ಮಪುರಾಣ ಇತ್ಯಾದಿಗಳಲ್ಲಿ ಪ್ರಶಂಸಿಸಲಾಗಿದೆ. ಮಣ್ಣಿನ ಸತ್ವವನ್ನು ಹೆಚ್ಚಿಸಲು ಗೊಬ್ಬರವನ್ನು ಸೇರಿಸುವ ಪದ್ಧತಿ ಅಥರ್ವವೇದದಷ್ಟು ಹಳೆಯದು. ಸಸ್ಯಸಮೃದ್ಧಿಗೆ ಇದು ಪೂರಕವೆಂದು ಅಲ್ಲಿ ಹೇಳಲಾಗಿದೆ (ರಾಮಕೃಷ್ಣ, ೧೯೯೭).

ಪರಾಶರನ ಸೂತ್ರರೂಪದಲ್ಲಿರುವ 'ವೃಕ್ಷಾಯುರ್ವೇದ' ಗ್ರಂಥವು ಕ್ರಿ.ಪೂ. ಅಥವಾ ಕ್ರಿ.ಶ. ಒಂದನೆಯ ಶತಮಾನಕ್ಕೆ ಸೇರಿದ್ದೆಂಬುದನ್ನು ಎನ್.ಎನ್. ಸರ್ಕಾರ್ ಎಂಬುವರು ೧೯೫೦ರ ಜರ್ನಲ್ ಆಫ್ ದಿ ಏಷ್ಯಾಟಿಕ್ ಸೊಸೈಟಿ ಎಂಬ ನಿಯತಕಾಲಿಕದಲ್ಲಿ ನಿರೂಪಿಸಿದ್ದಾರೆ (ಉಲ್ಲೇಖ ರಾಮಕೃಷ್ಣ, ೧೯೯೭). ಬೀಜೋತ್ಪತ್ತಿ ಕಾಂಡ, ವನಸ್ಪತಿ ಕಾಂಡ, ವಾನಸ್ಪತ್ಯ ಕಾಂಡ, ವೀರೂಧವಲ್ಲೀ ಕಾಂಡ ಗುಲ್ಮಕ್ಷುಪಕಾಂಡ ಮತ್ತು ಚಿಕಿತ್ಸಿಕಕಾಂಡವೆಂಬ ಆರು ಕಾಂಡಗಳಿವೆಯೆಂದು ಹೇಳಲಾಗುವ ಈ ಗ್ರಂಥದಲ್ಲಿ ಕೊನೆಯ ಕಾಂಡವಾದ ಚಿಕಿತ್ಸಿಕಕಾಂಡವು ಕಾಣೆಯಾಗಿದೆ. ಈ ಗ್ರಂಥದಲ್ಲಿ ಕೃಷಿ ಮತ್ತು ವೃಕ್ಷಗಳಿಗೆ ಸಂಬಂಧಿಸಿದಂತೆ ಸಸ್ಯಗಳ ಸಂರಚನಾ ವಿಧಾನ, ಮಣ್ಣಿನ ಸ್ವಭಾವ ಮತ್ತು ಗುಣಗಳು. ಕಾಡುಗಳ ಲಕ್ಷಣ ಮತ್ತು ವಿಂಗಡಣೆ. ಹೂವುಗಳ ಭಾಗಗಳೂ ಹಾಗೂ ಅವುಗಳ ಕ್ರಿಯೆ. ಹೂವುಗಳ ವಿಂಗಡಣೆ. ಹಣ್ಣುಗಳ ಲಕ್ಷಣ. ಕ್ರಿಯೆ ಮತ್ತು ವಿಂಗಡಣೆ. ಗಿಡಗಳ ಎಂಟು ಅಂಗಗಳ ಬಗೆಗಿನ ಚರ್ಚೆ (ಬೇರು. ಕಾಂಡ. ತೊಗಟೆ. ಕೇಂದ್ರ ಮರದ್ರವ್ಯ. ಜೀವರಸ.

ವಿಸರ್ಜನೆಗಳು, ಜಿಡ್ಡು ಉತ್ಪನ್ನಗಳು, ಬೆನ್ನುನಾರು, ಮುಳ್ಳು) ಮತ್ತು ಬೀಜಗಳು ಹಾಗೂ ಅಂಕುರಿಸುವ ಸಸಿಗಳು– ಈ ವಿಷಯಗಳನ್ನು ಕುರಿತ ವಿವರಣೆಗಳಿವೆ. ಚರಕ ಮತ್ತು ಸುಶ್ರುತರೂ ಸಹ ಮಣ್ಣನ್ನು ವಿಧವಿಧವಾಗಿ ವಿಂಗಡಿಸಿ ಯಾವ ಮಣ್ಣು ಎಂತಹ ಗಿಡ–ಮರಗಳಿಗೆ ಅಥವಾ ಬೇರೆ ಬೆಳೆಗಳಿಗೆ ಉಪಯುಕ್ತವೆಂಬುದನ್ನು ನಮೂದಿಸಿದ್ದಾರೆ (ರಾಮಕೃಷ್ಣ, ೧೯೯೭).

ಕನ್ನಡದ 'ಲೋಕೋಪಕಾರ' (ಕ್ರಿ.ಶ. ೧೦೨೫) ಮತ್ತು 'ರತ್ತಮತ'(ಕ್ರಿ.ಶ. ೧೩೦೦)ಗಳಲ್ಲಿಯೂ ಕೃಷಿ ಹಾಗೂ ನೀರಾವರಿಯ ಬಗ್ಗೆ ಹೇಳಲಾಗಿದೆ. ೧೨ನೇ ಶತಮಾನದ ನಾಗವರ್ಮನ 'ಅಭಿದಾನ ವಸ್ತುಕೋಶ'ದಲ್ಲಿ ಮತ್ತು ೧೫ನೇ ಶತಮಾನದ ಆದಿಭಾಗದ ಮಂಗರಾಜನ 'ಅಭಿನವಾಭಿದಾನ'ದಲ್ಲಿ ವಿವಿಧ ಕೃಷಿ ಜಲರಚನೆಗಳ ಬಗೆಗಿನ ಉಲ್ಲೇಖವಿದೆ (ದೀಕ್ಷಿತ್ ಮತ್ತು ಇತರರು, ೧೯೯೩).

### ೨.೧.೨. ಕೃಷಿ ಗಾದೆಗಳು

ಕೃಷಿಯೇ ಜನರ ಬದುಕಾಗಿದ್ದಾಗ ಹಾಗೂ ಜೀವನಾಧಾರವಾಗಿದ್ದಾಗ ಕೃಷಿಯ ಬಗೆಗಿನ ಜ್ಞಾನ, ತಲೆಮಾರಿನಿಂದ ತಲೆಮಾರಿಗೆ ದೊರಕುತ್ತಿದ್ದ ಭೂಮಿಯ ಹಾಗೆ ಪಿತ್ರಾರ್ಜಿತವಾಗಿಯೇ ದೊರಕುತ್ತಿತ್ತು. ಆಗ ಅವರಿಗೆ ಬಾಹ್ಯ ಜ್ಞಾನ ಪರಿಕರದ ಅವಶ್ಯಕತೆ ಇರಲಿಲ್ಲ. ಮೌಖಿಕ ಜ್ಞಾನ ಪರಂಪರೆಯ ಅರಿವಷ್ಟೇ ಇದ್ದ, ಬಹುಪಾಲು ಅನಕ್ಷರಸ್ಥರಾಗಿದ್ದ ಅವರಿಗೆ ಶಿಷ್ಟ ಲಿಖಿತ ಸಾಹಿತ್ಯರೂಪದಲ್ಲಿ ಕೃಷಿಜ್ಞಾನ ಲಭಿಸಬಹುದು ಎಂಬ ಕಲ್ಪನೆಯೂ ಇರಲಿಕ್ಕಿಲ್ಲ. ಬದುಕಿನ ಹಲವಾರು ಅಂಶಗಳು ಜನಪದದಲ್ಲಿ ಹಾಸುಹೊಕ್ಕಾಗಿರುವಂತೆ ಕೃಷಿಯ ಬಗೆಗಿನ ಅನುಭವ ಹಾಗೂ ಪಾರಂಪರಿಕ ಜ್ಞಾನವೂ ಸಹ ಮೌಖಿಕ ಜನಪದದಲ್ಲಿ ಹಾಸುಹೊಕ್ಕಾಗಿತ್ತು. ಇಂದು ನಾವು 'ಜಾನಪದ' ಎಂದು ಪರಿಕಲ್ಪಿಸುವ ಸಂಗತಿಗಳೆಲ್ಲವೂ ಕೃಷಿ ಸಂಸ್ಕೃತಿಯ ಸಾಮುದಾಯಿಕ ಸಮಾಜವೊಂದರ ಕ್ರಿಯಾಚರಣೆಗಳಾಗಿರುತ್ತವೆ (ಶಿವರಾಮ ಶೆಟ್ಟಿ, ೨೦೦೦).

ಮಾನವ ಸಮುದಾಯದ ವಿಧವಿಧವಾದ ಅಭಿವ್ಯಕ್ತಿಗಳ ಮೂಲಕ ಸಮುದಾಯದ ಚಿಂತನೆ, ಆಶಯ, ಮಿಡಿತ ತುಡಿತಗಳನ್ನು ನಾವು ಅರ್ಥಮಾಡಿಕೊಳ್ಳಬಹುದಾಗಿದೆ. ಹಾಗೆ ಅರ್ಥಮಾಡಿಕೊಳ್ಳುವುದರ ಮೂಲಕ ಮಾನವ ಸಮುದಾಯ ಸಾಗಿಬರುತ್ತಿರುವ ಜಾಡನ್ನು ಗುರ್ತಿಸಬಹುದಾಗಿದೆ. ಜನಪದ ಸಾಹಿತ್ಯದ ಒಂದು ಪ್ರಮುಖವಾದ ಅಂಗ ಗಾದೆ. ಗಾದೆಗಳಲ್ಲಿ ಅವುಗಳ ಸಾಹಿತ್ಯಕ ಅಥವಾ ಸ್ವಾರಸ್ಯಕರ ಅಂಶಗಳನ್ನು ತಿಳಿದುಕೊಳ್ಳುವುದು ಒಂದು ಹಂತದ ಕೆಲಸವಾದರೆ, ಗಾದೆಗಳು ಪ್ರಸಾರದಲ್ಲಿರುವ ಪರಿಸರದ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವುದು ಮತ್ತೊಂದು ಪ್ರಮುಖವಾದ ಕೆಲಸವಾಗುತ್ತದೆ. ಆ ಮೂಲಕ

ಆ ಸಂಸ್ಕೃತಿಯ ಇತಿಮಿತಿಗಳನ್ನು ನಾವು ಕಾಣಬಹುದಾಗಿದೆ. ಗಾದೆಯನ್ನು ಒಬ್ಬ ಗೊತ್ತಾದ ವ್ಯಕ್ತಿ ಒಂದು ಗೊತ್ತಾದ ಕಾಲದಲ್ಲಿ ಸೃಷ್ಟಿಸಿದ್ದಾನೆ ಎಂದು ಹೇಳುವುದು ಆಗದ ಮಾತು. ಗಾದೆ ಒಂದು ಸಾಮೂಹಿಕ ಸೃಷ್ಟಿ. ಸಾಂದರ್ಭಿಕವಾಗಿ ಹುಟ್ಟಿಕೊಳ್ಳುವ ಗಾದೆ ಕ್ರಮೇಣ ಸಮುದಾಯದ ಸ್ವತ್ತಾಗಿ ಪರಂಪರಾಗತವಾಗಿ ಬೆಳೆಯುತ್ತ ಹೋಗುವ ಒಂದು ಕ್ರಿಯೆ. ಜಾನಪದ ವಿದ್ವಾಂಸ ಎ.ಕೆ. ರಾಮಾನುಜನ್ ಹೇಳುವಂತೆ 'ಗಾದೆಯೆಂದರೆ ಹಳೆಯ ಮಾತು. ಜನರಾಡಿ ಪಳಗಿಸಿದ ಮಾತು. ಲೋಕೋಕ್ತಿ.' ಇಂಥ ಗಾದೆಗಳನ್ನು ವಿಶ್ಲೇಷಣೆಗೆ ಅಥವಾ ವಿಮರ್ಶೆಗೆ ಒಳಪಡಿಸುವಾಗ ಅದರ ವಾಚ್ಯಾರ್ಥ ಅಥವಾ ಸಾಹಿತ್ಯಾರ್ಥವನ್ನಷ್ಟೇ ಗಮನಿಸಿದರೆ ಸಾಲದು. ಅವುಗಳೊಳಗೆ ಅಡಗಿರುವ ಆಯಾ ಜನಾಂಗದ ಜೀವನ ದೃಷ್ಟಿಯನ್ನೂ ಕಾಣಲು ಪ್ರಯತ್ನಪಡುವುದು ಸರಿಯಾದ ಅಭ್ಯಾಸವಾದೀತೆಂದು ನಾವು ಭಾವಿಸಬಹುದು. ಈ ಅರ್ಥದಲ್ಲೇ 'ಒಂದು ರಾಷ್ಟ್ರದ ಪ್ರತಿಭೆ, ವಿವೇಕ ಮತ್ತು ಅಂತಸ್ತನ್ನು ಅಲ್ಲಿನ ಗಾದೆಗಳಲ್ಲಿ ಕಂಡುಕೊಳ್ಳಬಹುದಾಗಿದೆ' ಎಂಬ ಫ್ರಾನ್ಸಿಸ್ ಬೇಕನ್ನನ ಮಾತನ್ನು ನಾವು ಗಮನಿಸಬೇಕಾಗುತ್ತದೆ.

ಕೃಷಿ ಜಾನಪದದ ಅತ್ಯುತ್ತಮ ಉದಾಹರಣೆ ಕೃಷಿ ಗಾದೆಗಳು. ಅವು ತಲೆತಲಾಂತರಗಳ ಅನುಭವದ ಮೂಸೆಯಿಂದ ಮೂಡಿಬಂದ ಉಕ್ತಿಗಳಷ್ಟೇ ಅಲ್ಲ, ಕೃಷಿಯ ಸಾಂಪ್ರದಾಯಿಕ ಜ್ಞಾನವನ್ನು ಪಸರಿಸುವ ಮೌಖಿಕ ಮಾಧ್ಯಮವೂ ಆಗಿದೆ.

## ೨.೨ ಲಿಖಿತ ಸಾಹಿತ್ಯ ಮತ್ತು ಅದರ ಸಂವಹನ

ಲಿಖಿತ ಸಾಹಿತ್ಯಕ್ಕೆ ಅತ್ಯವಶ್ಯಕವಿರುವುದು ಅಕ್ಷರಜ್ಞಾನ ಮತ್ತು ಸಾಹಿತ್ಯದ ಸಂವಹನ ಕ್ರಿಯೆ. ಸಾಕ್ಷರತೆಯೆಂದರೆ ಲಿಖಿತ ರೂಪದಲ್ಲಿನ ಚಿಹ್ನೆಗಳ ವ್ಯಕ್ತಿಯೊಬ್ಬನ ಗ್ರಹಿಕೆಯ ಸಾಮರ್ಥ್ಯ (ರೊಡಾಲ್ಫೊ ಎನ್. ಸಾಕೆಡೊ, ೧೯೬೮). ಗ್ರಾಮಸ್ಥರಿಗೆ ಅದು ಮುದ್ರಿತ ಸಮುದಾಯ ಮಾಧ್ಯಮಗಳಿಗೆ ನೇರ ಲಭ್ಯತೆಯನ್ನು ಒದಗಿಸುತ್ತದೆ. ಸಾಕ್ಷರತೆ ಕೆಲವೊಂದು ಮಾನಸಿಕ ಸಾಮರ್ಥ್ಯಗಳನ್ನು (ಪ್ರತಿವಾಸ್ತವಿಕವಾಗಿ ಚಿಂತಿಸುವ ಮತ್ತು ಚಿಹ್ನಾಗ್ರಹಿಕೆ ಮುಂತಾದುವು) ಅನಾವರಣಗೊಳಿಸುತ್ತದೆ ಹಾಗೂ ಅದರಿಂದಾಗಿ ಆಧುನಿಕತೆಯತ್ತ ಸಾಗುವ ಹಾದಿ ಸುಗಮವಾಗಬಹುದು. ಸಾಕ್ಷರ ವ್ಯಕ್ತಿ ಸ್ವತಃ ತಾನೇ ಕಲಿಯುವ ಸಾಮರ್ಥ್ಯ ಪಡೆದಿರುತ್ತಾನೆ. ಓದುವ ತನ್ನ ಸಾಮರ್ಥ್ಯದ ಮೂಲಕ ವ್ಯಕ್ತಿಯೊಬ್ಬ ಮುದ್ರಣ ಮಾಧ್ಯಮದಿಂದ ತನ್ನ ದಿನನಿತ್ಯದ ಅನುಭವಗಳ ಜಗತ್ತನ್ನೂ ಮೀರಿದ ವಿಸ್ತೃತ ಅನುಭವಗಳನ್ನು ಪಡೆಯಲು ಸಾಧ್ಯವಾಗುವುದು ಸಾಕ್ಷರತೆಯ ಬಹುಮುಖ್ಯ ಪ್ರಭಾವಗಳಲ್ಲೊಂದು. ಮೆಂಡೇಜ್ ಮತ್ತು ವೈಸಾನನ್ (೧೯೬೪) ಹೇಳುವಂತೆ ಚಿಹ್ನೆಗಳ ಗ್ರಹಿಕೆಯ ಅಧಿಪತ್ಯ ಮಾನವ ಅನುಭವಗಳ ಮಿತಿಯನ್ನು ಸಾಮಾಜಿಕ ಅವಕಾಶದ ಆಯಾಮದಾಚೆಗೂ ತಲುಪಿಸುತ್ತದೆ.

## ೨.೨.೧. ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ

ಕೃಷಿವಿಜ್ಞಾನ ಒಂದು ಅನ್ವಯಿಕ ವಿಜ್ಞಾನ. ಅದು ಪ್ರಯೋಗಾಲಯದ ಸಂಶೋಧನೆಗಳಿಗಷ್ಟೇ ಸೀಮಿತವಾಗಿಲ್ಲ. ಬಹುಪಾಲು ಎಲ್ಲ ಶುದ್ಧ, ಅನ್ವಯಿಕ ಹಾಗೂ ಸಾಮಾಜಿಕ ವಿಜ್ಞಾನಗಳ ಸಂಗಮವದು– ಜೀವಶಾಸ್ತ್ರದ ಎಲ್ಲ ವಿಭಾಗಗಳು, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ಮನಶಾಸ್ತ್ರ, ಸಾಂಸ್ಕೃತಿಕ ಮತ್ತು ಜಾನಪದ ಅಧ್ಯಯನ ಶಾಸ್ತ್ರಗಳನ್ನೊಳಗೊಂಡಿರುತ್ತದೆ. ಕೃಷಿ ಸಾಹಿತ್ಯವೂ ವಿಜ್ಞಾನ ಸಾಹಿತ್ಯವೇ ಆಗಿರುವುದರಿಂದ ಕನ್ನಡದ ವೈಜ್ಞಾನಿಕ ಸಾಹಿತ್ಯದ ಚರಿತ್ರೆಯ ಅವಲೋಕನವೂ ಅತ್ಯವಶ್ಯಕ.

ಆಲ್ಡಸ್ ಹಕ್ಸ್ಲೀ (೧೯೬೩) ಹೇಳುವಂತೆ, ಮಾನವನ ಸಾರ್ವಜನಿಕ ಅನುಭವಗಳನ್ನು ಪರಿಶೋಧಿಸುವ, ವ್ಯವಸ್ಥಿತವಾಗಿ ರೂಪಿಸುವ ಮತ್ತು ಸಂವಹಿಸಲು ಬಳಸುವ ಸಲಕರಣೆಯೇ ವಿಜ್ಞಾನ. ಅವರ ಅಭಿಪ್ರಾಯದಂತೆ ಸಾಹಿತ್ಯವೂ ಸಹ ಅಂತಹುದೇ ಅನುಭವಗಳೊಂದಿಗೆ ವ್ಯವಹರಿಸುತ್ತದೆ, ಆದರೆ ಹೆಚ್ಚಾಗಿ ಮಾನವನ ಖಾಸಗಿ ಅನುಭವಗಳೊಂದಿಗೆ. ವಿಜ್ಞಾನಿ ಮಾನವನ ಸಾರ್ವಜನಿಕ ಅನುಭವಗಳನ್ನು ಗಮನಿಸಿ ಅವುಗಳನ್ನು ತನ್ನ ವೈಜ್ಞಾನಿಕ ಪರಿಭಾಷೆಯಲ್ಲಿ ಮೂರ್ತರೂಪಗೊಳಿಸಿ, ತರ್ಕಬದ್ಧವಾಗಿ ತನ್ನ ಪರಿಕಲ್ಪನೆಗಳನ್ನು ಅವಲೋಕನ ಮತ್ತು ಪ್ರಯೋಗಗಳಿಂದ ರುಜುವಾತುಗೊಳಿಸಲು ಪ್ರಯತ್ನಿಸುತ್ತಾನೆ. ಸಾಹಿತಿಯೂ ಸಹ ಪ್ರಕೃತಿ, ಸಂಸ್ಕೃತಿ ಮತ್ತು ಭಾಷಾಜಗತ್ತಿನಲ್ಲಿನ ಮಾನವನ ಖಾಸಗಿ ಮತ್ತು ಸಾರ್ವಜನಿಕ ಅನುಭವಗಳನ್ನು ಗಮನಿಸಿ ಪರಿವ್ಯಕ್ತಗೊಳಿಸಲು ಪ್ರಯತ್ನಿಸುತ್ತಾನೆ. ವಿಜ್ಞಾನ ಮತ್ತು ಸಾಹಿತ್ಯ ಈ ರೀತಿಯ ನಿಕಟ ಸಂಬಂಧ ಹೊಂದಿರುವುದು ಪರಸ್ಪರ ಬೆಳವಣಿಗೆಗೆ ಪೂರಕವಾಗಿವೆ.

ಆದರೂ ಅವುಗಳ ನಿಕಟತೆಯನ್ನು ಇನ್ನಷ್ಟು ಹೆಚ್ಚಿಸುವುದನ್ನು ಪ್ರಜ್ಞಾಪೂರ್ವಕವಾಗಿ, ಬಲವಂತವಾಗಿ ಮಾಡಬೇಕಿದೆ. ನಮ್ಮ ಶಿಕ್ಷಣದ ಜೊತೆಗೆ, ಎಲ್ಲ ಸಂದರ್ಭದಲ್ಲೂ ವಿಜ್ಞಾನ ಮತ್ತು ಸಾಹಿತ್ಯ ಸ್ಪಂದನವಿಲ್ಲದೆ ವಿದ್ಯಾರ್ಥಿಗಳಿಗೆ, ವಾಚಕರಿಗೆ ಸಾಕಷ್ಟು ವಂಚಿಸಿದೆ. ಈ ಕಾರಣದಿಂದಾಗಿಯೇ ಅನೇಕ ಸಾಹಿತ್ಯಾಸಕ್ತರಲ್ಲಿ, ಸಾಹಿತ್ಯಭ್ಯಾಸಿಗಳಿಗೆ ವಿಜ್ಞಾನದ ವಿಚಾರಗಳು ತಮಗರ್ಥವಾಗದ ಕ್ಲಿಷ್ಟ, ಬೇಡವಾದವು ಅನ್ನಿಸಿದ್ದರೆ– ವಿಜ್ಞಾನದ ಅಭ್ಯಾಸಿಗಳಿಗೆ ಸಾಹಿತ್ಯ ಸತ್ಯದಿಂದ ದೂರವಾದ ಕೇವಲ ಕಾಲ್ಪನಿಕ ಕಟ್ಟುಕತೆಯಷ್ಟರ ಮಟ್ಟಿಗೆ ಅನ್ನಿಸಿಬಿಟ್ಟಿದೆ. ಸಾಹಿತ್ಯ, ಕಲೆ ಮತ್ತು ವಿಜ್ಞಾನಗಳ ಹುಟ್ಟು ಬೇರೆ ಬೇರೆ ಕಾಲದಲ್ಲಿ, ಒಂದನ್ನೊಂದು ಅವಲಂಬಿತವಾಗದಂತಹ ಸಂದರ್ಭದಲ್ಲಿ ಆಗಿದ್ದಲ್ಲಿ ಒಂದಕ್ಕೊಂದು ವಂಚಿಸುವ ಸಮರ್ಥನೆ ಇದ್ದೀತು. ಅದೂ ಅಲ್ಲದೆ ಅವುಗಳ ಸೃಷ್ಟಿಯ ಹಾಗೂ ಉಪಯೋಗಿಸುವ ಸಂದರ್ಭಗಳ ಪರಿಕರಗಳು ಸಂಪೂರ್ಣ ಸ್ವತಂತ್ರವಾಗಿಯೇ ಇರಬೇಕು ಎನ್ನುವ ಮನೋಭಾವ ಉಳ್ಳದ್ದಾಗಿದ್ದರೆ ಈ ಮಾತು ನಿಜ. ಬಹಳ ವೇಳೆ ಇವುಗಳು ಒಂದನ್ನೊಂದು ಅವಲಂಬಿತವಾಗಿರುವಂತಹ ಸನ್ನಿವೇಶಗಳನ್ನು ಶ್ರೇಷ್ಠ ಬರಹಗಾರರೂ, ಕಲಾವಿದರೂ

ಮತ್ತು ವಿಜ್ಞಾನಿಗಳೂ ಅನುಭವಿಸಿದ್ದರೂ, ಅಪೇಕ್ಷಿಸಿದ್ದರೂ ಸಹ ಬರುಬರುತ್ತಾ ಅವುಗಳ ನಡುವಿನ ಸಂಬಂಧ ಅಷ್ಟು ಹತ್ತಿರವಾದಂತಿಲ್ಲ. ಈ ಕಾರಣದಿಂದಾಗಿಯೇ ಇಂದಿನ ಜ್ಞಾನಾರ್ಜನೆಯ ಸನ್ನಿವೇಶದಲ್ಲಿ ಸಣ್ಣಪುಟ್ಟ ಕಾರಣದಿಂದಾಗಿ ತೊಡಕುಂಟಾಗುವುದು. ಆದರೆ ಪರಿಸ್ಥಿತಿಯ ಅವಶ್ಯಕತೆಯೇ ಬೇರೆ. ಎಲ್ಲಾ ಜ್ಞಾನ ಅನಿವಾರ್ಯತೆಯೂ ಜೀವನವನ್ನು ವಿವಿಧ ಜ್ಞಾನ ಶಿಸ್ತುಗಳ ಮಧ್ಯೆ ಅರಳಿಸುವಂತಾಗಬೇಕಾಗಿದೆ (ಚನ್ನೇಶ್, ೨೦೦೪).

'ಸಂವಹನವಿಲ್ಲದೆ ವಿಜ್ಞಾನದ ಅಸ್ಥಿತ್ವವೇ ಇಲ್ಲ' ಎನ್ನುತ್ತಾರೆ 'ಸೈನ್ಸ್' ಪತ್ರಿಕೆಯ ಸಂಪಾದಕ ಫಿಲಿಪ್ ಅಬೆಲ್ಸನ್. 'ವಿಜ್ಞಾನದ ಸಾಂಸ್ಥಿಕ ಉದ್ದೇಶವೇ ಪ್ರಮಾಣಿತ ಜ್ಞಾನದ ವಿಸ್ತರಣೆ' ಎನ್ನುತ್ತಾರೆ ವಿಜ್ಞಾನ ಸಮಾಜಶಾಸ್ತ್ರಜ್ಞ ರಾಬರ್ಟ್ ಮರ್ಟನ್(ಉಲ್ಲೇಖ ಲಾರೆನ್ಸ್ ಬುಶ್ ಮತ್ತು ವಿಲಿಯಂ ಬಿ. ಲೇಸಿ, ೧೯೮೩). ಈ ಪ್ರಕ್ರಿಯೆಗೆ ಬೇಕಾಗಿರುವುದು ಒಂದು ಕ್ಷಿಪ್ರ ಹಾಗೂ ಸೂಕ್ತ ಸಂವಹನ ಮಾಧ್ಯಮ. ಸಂವಹನ ಮತ್ತು ವಿಜ್ಞಾನ ಒಂದಕ್ಕೊಂದು ಬೆಸೆದುಕೊಂಡಿದೆ, ಏಕೆಂದರೆ ಸಂಶೋಧನೆ ಮತ್ತು ಪ್ರಸರಣೆ ಜೊತೆಜೊತೆಯಲ್ಲಿಯೇ ಸಾಗುತ್ತವೆ ಹಾಗೂ ವಿಜ್ಞಾನದ ಅಂತಿಮ ಅನುಕೂಲದ ಲಭ್ಯತೆಗೆ ಹಾದಿಮಾಡಿಕೊಡುವುದು ಸಂವಹನ ಮಾತ್ರ.

೧೯೧೭ರಿಂದೀಚೆಗಷ್ಟೇ ಕನ್ನಡದಲ್ಲಿ ಆಧುನಿಕ ವೈಜ್ಞಾನಿಕ ಸಾಹಿತ್ಯವನ್ನು ಕಾಣಬಹುದು. ಆದರೆ ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ ಬರದಿರಲು ಕಾರಣಗಳೂ ಹಲವಾರು. ದಾಸ್ಯದಲ್ಲಿದ್ದ ನಮಗೆ ಆಧುನಿಕ ವಿಜ್ಞಾನದ ಅಧ್ಯಯನಕ್ಕೆ ಆಸ್ಪದ ದೊರೆತದ್ದು ಬಹಳ ತಡವಾಗಿ. ಪಾಶ್ಚಾತ್ಯ ಶಿಕ್ಷಣ ಪದ್ಧತಿಯನ್ನು ಭಾರತಕ್ಕೆ ತಂದ ಬ್ರಿಟಿಷರು ನಮಗೆ ವೈಜ್ಞಾನಿಕ ಶಿಕ್ಷಣವನ್ನು ಒದಗಿಸುವ ಬಗ್ಗೆ ಆಸಕ್ತಿ ತೋರಲಿಲ್ಲ. ಅವರು ನೀಡಿದ ಶಿಕ್ಷಣದ ಉದ್ದೇಶ ತಮಗೆ ಬೇಕಾದ ಗುಮಾಸ್ತರನ್ನೂ, ಆಡಳಿತಗಾರರನ್ನೂ ತಯಾರು ಮಾಡುವುದಷ್ಟೇ ಆಗಿತ್ತು. ಆದರೆ ನಮ್ಮ ದೇಶದ ನೈಸರ್ಗಿಕ ಸಂಪತ್ತಿನ ಪೂರ್ಣ ಪ್ರಯೋಜನ ಪಡೆಯುವುದಕ್ಕಾಗಿ ಆಧುನಿಕ ವಿಧಾನಗಳನ್ನು ಬಳಸಬೇಕಾಗಿ ಬಂದು, ಅದಕ್ಕೆ ಅವಶ್ಯವೆನಿಸುವ ತಂತ್ರಜ್ಞರನ್ನೂ ಇಲ್ಲಿಯೇ ತಯಾರುಮಾಡಬೇಕಾಗಿ ಬಂದುದರಿಂದ ಅಲ್ಪ ಪ್ರಮಾಣದಲ್ಲಿಯಾದರೂ ವೈಜ್ಞಾನಿಕ ಶಿಕ್ಷಣವನ್ನು ಪ್ರಾರಂಭಿಸಲೇ- ಬೇಕಾಯಿತು. ಹೀಗಾಗಿ ನಮ್ಮ ಜನತೆಗೆ ಆಧುನಿಕ ವಿಜ್ಞಾನದ ಸಂಪರ್ಕ ಒದಗಿ ಬಂದದ್ದು ಬಹಳ ನಿಧಾನವಾಗಿ ಮತ್ತು ಬಹು ಕಡಿಮೆ ಪ್ರಮಾಣದಲ್ಲಿ. ಆದುದರಿಂದ ಇತ್ತೀಚಿನವರೆಗೂ ಜನಪ್ರಿಯ ವಿಜ್ಞಾನ ಸಾಹಿತ್ಯಕ್ಕೆ ಜನತೆಯಿಂದ ಬೇಡಿಕೆ ಬರುವ ಸಂಭವವೇ ಇರಲಿಲ್ಲ (ಲಕ್ಷ್ಮಣರಾವ್, ೧೯೭೦). ಆದರೂ ಸುಬ್ಬರಾಯಪ್ಪನವರ (೧೯೮೬) ಅಭಿಪ್ರಾಯದಂತೆ ಕರ್ನಾಟಕದಲ್ಲಿ ವೈಜ್ಞಾನಿಕ ವಿಚಾರಶೀಲತೆ ಬಹುಮುಖವಾಗಿತ್ತು. ಅದರ ಮುಖ್ಯ ಸೂಚಕವಾಗಿ ಈಗಲೂ ಮೈಸೂರು, ಧಾರವಾಡ, ಮೂಡಬಿದರೆ, ಶೃಂಗೇರಿ, ಬೆಂಗಳೂರು, ಚೆನ್ನೈ ಮತ್ತಿತರ ಸ್ಥಳಗಳ ಪ್ರಾಚ್ಯ ವಸ್ತುಭಂಡಾರಗಳಲ್ಲಿ ನೂರಾರು ವೈಜ್ಞಾನಿಕ

ಹಸ್ತಪ್ರತಿಗಳಿವೆ. ನೂರಾರು ವರ್ಷಗಳ ಹಿಂದೆ ಬರೆದ ಇಂತಹ ಅಮೂಲ್ಯ ಗ್ರಂಥಗಳಲ್ಲಿರುವ ಅನೇಕ ವೈಜ್ಞಾನಿಕ ವಿಚಾರಗಳ ಆಳವಾದ ಸಂಶೋಧನೆಯಾಗಿಲ್ಲ.

ಮೈಸೂರು ವಿಶ್ವವಿದ್ಯಾನಿಲಯವು ೧೯೧೬ರಲ್ಲಿ ಸ್ಥಾಪಿತವಾಯಿತು. ಆಗ ಇಡೀ ಮೈಸೂರು ರಾಜ್ಯಕ್ಕೆ ಸೆಂಟ್ರಲ್ ಕಾಲೇಜು ಮಾತ್ರ ವಿಜ್ಞಾನದ ಕಾಲೇಜಾಗಿತ್ತು ಹಾಗೂ ಅಲ್ಲಿ ಬೆರಳೆಣಿಕೆಯಷ್ಟು ವಿದ್ಯಾರ್ಥಿಗಳು ಮಾತ್ರ ವ್ಯಾಸಂಗ ಮಾಡುತ್ತಿದ್ದರು. ವಿಜ್ಞಾನದ ಮಾತಿರಲಿ, ಯಾವುದಕ್ಕೇ ಆಗಲಿ, ವಿದ್ಯಾವಂತರೆನಿಸಿಕೊಂಡವರು ಕನ್ನಡವನ್ನು ಬಳಸಿದರೆ ಅವಮಾನವೆಂದು ಜನ ಭಾವಿಸಿದ್ದ ಕಾಲವದು. ಅಂತಹ ಸನ್ನಿವೇಶದಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಭೌತವಿಜ್ಞಾನ ಪ್ರಾಧ್ಯಾಪಕರಾಗಿದ್ದ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಮತ್ತು ಮೈಸೂರು ಸರ್ಕಾರದ ಪವನಶಾಸ್ತ್ರ ವೀಕ್ಷಣಾಲಯದ ಮುಖ್ಯಸ್ಥರಾಗಿದ್ದ ನಂಗಪುರಂ ವೆಂಕಟೇಶ ಅಯ್ಯಂಗಾರ್‌ರವರು ವಿಜ್ಞಾನವನ್ನು ಕನ್ನಡ ಭಾಷೆಯ ಮೂಲಕ ಜನತೆಯಲ್ಲಿ ಹರಡುವ ಅವಶ್ಯಕತೆಯನ್ನು ಮನಗಂಡು 'ಕರ್ಣಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ೧೯೧೭ರಲ್ಲಿ 'ವಿಜ್ಞಾನ' ಎಂಬ ಒಂದು ಮಾಸಪತ್ರಿಕೆಯನ್ನು ಹೊರಡಿಸುವ ಸಾಹಸ ಮಾಡಿದರು. ಪತ್ರಿಕೆಗೆ ಸಾಮಗ್ರಿಯನ್ನೊದಗಿಸುವುದರಲ್ಲಿ ಎಷ್ಟೇ ಕಷ್ಟಗಳಿದ್ದರೂ ಅವುಗಳನ್ನೆದುರಿಸಿ ಮಾಸಪತ್ರಿಕೆಯನ್ನು ನಡೆಸಿಕೊಂಡು ಬರಲು ಅಗತ್ಯವಾದ ಶ್ರದ್ಧೆ, ಉತ್ಸಾಹಗಳು ಸಂಪಾದಕರಲ್ಲಿದ್ದುವಾದರೂ ವಿಜ್ಞಾನಕ್ಕೇ ಮೀಸಲಾದ ಪತ್ರಿಕೆಯೊಂದು ಅಭಿವೃದ್ಧಿ ಹೊಂದಲು ಕಾಲವಿನ್ನೂ ಪಕ್ವವಾಗಿರಲಿಲ್ಲ. ಜನತೆಯಿಂದ ಅದಕ್ಕೆ ಆಸರೆ ದೊರೆಯಲಿಲ್ಲ. ಹನ್ನೆರಡು ಸಂಚಿಕೆಗಳ ಒಂದು ಸಂಪುಟ ಮುಗಿಸಿ ಪತ್ರಿಕೆಯನ್ನು ನಿಲ್ಲಿಸಬೇಕಾಯಿತು (ಲಕ್ಷ್ಮಣರಾವ್, ೧೯೭೦).

'ಕರ್ಣಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ'ಯ ಚಟುವಟಿಕೆ 'ವಿಜ್ಞಾನ' ಪತ್ರಿಕೆಯ ನಿರ್ವಹಣೆಗೆ ಮಾತ್ರ ಮೀಸಲಾಗಿರಲಿಲ್ಲ. ಸಮಿತಿಯ ಆಶ್ರಯದಲ್ಲಿ, ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ, ವಿಜ್ಞಾನ ವಿಷಯಗಳನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲಾಗುತ್ತಿತ್ತು.

'ಕರ್ಣಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ'ಯು ಅನಿವಾರ್ಯ ಕಾರಣಗಳಿಂದಾಗಿ ತನ್ನ ಕಾರ್ಯಚಟುವಟಿಕೆಗಳನ್ನು ನಿಲ್ಲಿಸಿದ ನಂತರವೂ ಸಮಿತಿಯ ಪ್ರಮುಖ ಕಾರ್ಯಕರ್ತರಾಗಿದ್ದ ವೆಂಕಟನಾರಾಯಣಪ್ಪನವರು ಮತ್ತು ವೆಂಕಟೇಶ ಅಯ್ಯಂಗಾರ್‌ರವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಮತ್ತು ಮೈಸೂರಿನ ಯುವರಾಜರೂ ಆಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಅವರಿಂದ ಧನಸಹಾಯ ಪಡೆದು ಅವರ ಹೆಸರಿನಲ್ಲಿ ಒಂದು 'ವೈಜ್ಞಾನಿಕ ಗ್ರಂಥಮಾಲೆ'ಯನ್ನು ಪ್ರಾರಂಭಿಸಿದರು. ಆ ಗ್ರಂಥಮಾಲೆಯ ಮೊದಲ ಪ್ರಕಟಣೆ ೧೯೩೧ರಲ್ಲಿ ನಂಗಪುರಂ ವೆಂಕಟೇಶ ಅಯ್ಯಂಗಾರ್‌ರವರ ಫ್ರೆಂಚ್ ವಿಜ್ಞಾನ

ಲೇಖಕ ಕೆಮಿಲ್ ಫ್ಲಮೇರಿಯೊ ಅವರ 'ಅಸ್ಟ್ರಾನಮಿ ಫಾರ್ ವಿಮೆನ್' ಎಂಬ ಪುಸ್ತಕದ ಕನ್ನಡಾನುವಾದ 'ಜ್ಯೋತಿರ್ವಿನೋದಿನಿ' ಎಂಬ ಕೃತಿ ಪ್ರಕಟವಾಯಿತು. ೧೯೩೯ರಲ್ಲಿ ವೆಂಕಟನಾರಾಯಣಪ್ಪನವರು ವಿಶ್ವವಿದ್ಯಾನಿಲಯದಿಂದ ನಿವೃತ್ತರಾದನಂತರ 'ಜೀವ ವಿಜ್ಞಾನ'ವೆಂಬ ೩೫೦ ಪುಟಗಳ ಪುಸ್ತಕವನ್ನು ಒರೆದು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯಲ್ಲಿ ಪ್ರಕಟಿಸಿದರು (ಲಕ್ಷ್ಮಣರಾವ್, ೧೯೭೦).

ಕನ್ನಡ ವಿಜ್ಞಾನ ಸಾಹಿತ್ಯದ ಬೆಳವಣಿಗೆಯಲ್ಲಿ ಮಹತ್ತರ ಪಾತ್ರವಹಿಸಿದ ಮತ್ತೊಬ್ಬರೆಂದರೆ ಡಾ.ಶಿವರಾಮ ಕಾರಂತರು. ಕಾರಂತರು ಸ್ವತಃ ವಿಜ್ಞಾನಿಯಲ್ಲ, ಶಾಲಾ ಕಾಲೇಜುಗಳಲ್ಲಿ ಕ್ರಮಬದ್ಧವಾಗಿ ವಿಜ್ಞಾನವನ್ನು ವ್ಯಾಸಂಗ ಮಾಡಿದವರೂ ಅಲ್ಲ. ಆದರೆ ಕನ್ನಡ ವಿಜ್ಞಾನ ಸಾಹಿತ್ಯ ಕ್ಷೇತ್ರದಲ್ಲಿ ಅವರ ಕೊಡುಗೆ ಅಪಾರ. ಇಂಗ್ಲಿಶ್‌ನಲ್ಲಿ ಹೇರಳವಾಗಿ ದೊರೆಯುವ ಜನಪ್ರಿಯ ವಿಜ್ಞಾನ ಸಾಹಿತ್ಯವನ್ನು ಆಳವಾಗಿ ಅಭ್ಯಾಸಮಾಡಿ ತಾವು ಪಡೆದ ಜ್ಞಾನವನ್ನು ಕನ್ನಡ ಭಾಷೆಯ ಮೂಲಕ ಕನ್ನಡಿಗರಿಗೆ ನೀಡುವ ಪ್ರಯತ್ನ ಮಾಡಿದರು. ೧೯೩೧ರಲ್ಲಿ ಅವರು ಹೊರತಂದ 'ಬಾಲ ಪ್ರಪಂಚ'ವೆಂಬ ಮೂರು ಸಂಪುಟಗಳ ಮಕ್ಕಳ ವಿಶ್ವಕೋಶದಲ್ಲಿ ವಿಜ್ಞಾನವನ್ನು ಕುರಿತು ಲೇಖನಗಳಿಗೆ ಗಣನೀಯ ಸ್ಥಾನವನ್ನು ಕೊಟ್ಟಿದ್ದಾರೆ. ತರುವಾಯ ೧೯೫೫-೬೫ರ ಒಂದು ದಶಕದಲ್ಲಿ ವಿಜ್ಞಾನಕ್ಕೇ ಮೀಸಲಾದ ನಾಲ್ಕು ಸಂಪುಟಗಳ 'ವಿಜ್ಞಾನ ಪ್ರಪಂಚ'ವೆಂಬ ವೈಜ್ಞಾನಿಕ ವಿಶ್ವಕೋಶವನ್ನು ಪ್ರಕಟಿಸಿದ್ದಾರೆ.

ಜನಪ್ರಿಯ ವಿಜ್ಞಾನ ಸಾಹಿತ್ಯದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ ಸಂಘಸಂಸ್ಥೆಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯವನ್ನೂ, ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘದ ಆಶ್ರಯದಲ್ಲಿ ೧೯೧೯ರಲ್ಲಿ ಪ್ರಾರಂಭವಾದ 'ಪ್ರಬುದ್ಧ ಕರ್ಣಾಟಕ' ಪತ್ರಿಕೆಯನ್ನು ಮೊದಲು ಹೆಸರಿಸಬೇಕು. ಈ ಪತ್ರಿಕೆ ಪ್ರಾರಂಭದಲ್ಲಿ ಕೇವಲ ಸಾಹಿತ್ಯಕ್ಕೆ ಮೀಸಲಾದ ಪತ್ರಿಕೆಯಾಗಿತ್ತು. ಆದರೆ ವೈಜ್ಞಾನಿಕ ಸಾಹಿತ್ಯವೂ ಜೊತೆಯಲ್ಲಿಯೇ ಬೆಳೆಯದೇ ಹೋದಲ್ಲಿ, ಭಾಷೆಯ ಮತ್ತು ಸಾಹಿತ್ಯದ ಸರ್ವತೋಮುಖ ಪ್ರಗತಿ ಸಾಧ್ಯವಿಲ್ಲವೆಂಬುದನ್ನು ಬಹುಬೇಗನೆ ಅರಿತುಕೊಂಡು ೧೯೨೩ರಲ್ಲಿಯೇ, ಅಂದರೆ ತನ್ನ ಐದನೆಯ ಸಂಪುಟದ ಮೊದಲ ಸಂಚಿಕೆಯಲ್ಲಿಯೇ ವೈಜ್ಞಾನಿಕ ಲೇಖನಗಳಿಗೆ ತನ್ನ ಬಾಗಿಲು ತೆರೆಯಿತು. ಅಲ್ಲಿಂದ ಮುಂದೆ ಕ್ರಮೇಣ ವಿಜ್ಞಾನ ಲೇಖನಗಳು ಹೆಚ್ಚು ಹೆಚ್ಚಾಗಿ ಬರಲು ಪ್ರಾರಂಭಿಸಿದುದರಿಂದ ೧೯೬೩ರ ವೇಳೆಗೆ 'ಪ್ರಬುದ್ಧ ಕರ್ಣಾಟಕ'ವು ಆರು ತಿಂಗಳಿಗೊಮ್ಮೆ ಒಂದು ವಿಜ್ಞಾನ ವಿಶೇಷಾಂಕವನ್ನು ಪ್ರಕಟಿಸಬೇಕಾಯಿತು. ೧೯೬೯ರಲ್ಲಿ 'ಪ್ರಬುದ್ಧ ಕರ್ಣಾಟಕ'ವು ತನ್ನ ಚಿನ್ನದ ಹಬ್ಬವನ್ನಾಚರಿಸಿದ ಸಂದರ್ಭದಲ್ಲಿ ಹೊರತಂದ ಚಿನ್ನದ ಸಂಚಿಕೆಯ ವಿಜ್ಞಾನ ವಿಭಾಗವು ಕನ್ನಡ ವಿಜ್ಞಾನ ಸಾಹಿತ್ಯದ ಬೆಳವಣಿಗೆಯ ಮಾರ್ಗದಲ್ಲಿ ಒಂದು ಪ್ರಮುಖ ಮೈಲಿಗಲ್ಲು.

೧೯೬೬ರ ಕೊನೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಾರಂಭವಾಯಿತು. ವಿಶ್ವವಿದ್ಯಾನಿಲಯದ ಎಲ್ಲ ಹಂತಗಳಲ್ಲಿಯೂ ಕನ್ನಡವನ್ನು ಶಿಕ್ಷಣ ಮಾಧ್ಯಮವನ್ನಾಗಿ ಬಳಸಬೇಕೆಂಬ ನೀತಿಗನುಗುಣವಾಗಿ ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗವನ್ನು ಸ್ಥಾಪಿಸಲಾಯಿತು. ವಿಜ್ಞಾನ ಮತ್ತು ಮಾನವಿಕ ಶಾಸ್ತ್ರಗಳಿಗೆ ಸಂಬಂಧಿಸಿದಂತೆ ಪಠ್ಯಪುಸ್ತಕಗಳನ್ನು ಮತ್ತು ಸಂದರ್ಭ ಗ್ರಂಥಗಳನ್ನು ಹೊರತರುವುದೇ ಈ ವಿಭಾಗದ ಮುಖ್ಯ ಉದ್ದೇಶವಾಗಿದೆ. ಮಾನವಿಕ ಮತ್ತು ವೈಜ್ಞಾನಿಕ ಸಾಹಿತ್ಯ ನಿರಂತರವಾಗಿ ಭಾಷಾಂತರಗಳನ್ನು ಅವಲಂಬಿಸಿಕೊಂಡಿರುವುದು ಸಾಧ್ಯವಿಲ್ಲ. ಹೊಸ ಮೌಲಿಕ ಅಥವಾ ಸ್ವತಂತ್ರ ಗ್ರಂಥಗಳನ್ನು ರಚಿಸಲು ಅನುವಾಗುವಂತೆ ವಿಷಯ ಸಂಪತ್ತನ್ನು ಸಮೃದ್ಧಗೊಳಿಸಿಕೊಂಡಿರುವ ಅಧ್ಯಾಪಕವರ್ಗ ಕನ್ನಡ ಭಾಷೆಯ ಜಾಯಮಾನಕ್ಕೆ ಅನುಗುಣವಾದ ನಿರೂಪಣ ಪದ್ಧತಿಯನ್ನೂ ಅಳವಡಿಸಿಕೊಳ್ಳಬೇಕಾಗುತ್ತದೆನ್ನುವ ದೃಷ್ಟಿಯಿಂದ ೧೯೭೦ರಲ್ಲಿ ಕನ್ನಡ ಭಾಷೆಯ ಬಳಕೆಯ ವಿಚಾರದಲ್ಲಿ 'ಬೇಸಿಗೆ ಶಿಬಿರ'ವೊಂದನ್ನು ಏರ್ಪಡಿಸಿ ಅದರಲ್ಲಿ ವಿಜ್ಞಾನ ಪಠ್ಯಪುಸ್ತಕ ಬರಹಗಾರರು ಒಂದುಗೂಡಿ ವಿಜ್ಞಾನ ಪಠ್ಯಪುಸ್ತಕ ರಚನೆ ಮತ್ತು ಬೋಧನೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಚರ್ಚಿಸಿದರು. ಈ ಶಿಬಿರ ತುಂಬ ಉಪಯುಕ್ತವೆಂದು ಕಂಡುಬಂದುದರಿಂದ ೧೯೭೧, ೧೯೭೨, ೧೯೭೩ ಮತ್ತು ೧೯೭೪ರಲ್ಲಿ ಈ ಬಗೆಯ ಶಿಬಿರಗಳನ್ನು ನಡೆಸಲಾಯಿತು (ನಾಯಕ [ಸಂ], ೧೯೭೫).

ನಮ್ಮ ಸುತ್ತಮುತ್ತಲಿನ ಸ್ಥಾವರ ಜಂಗಮಗಳ ವೈಜ್ಞಾನಿಕ ಪರಿಚಯ ಜನಪ್ರಿಯ ವಿಜ್ಞಾನಕ್ಕೆ ಮೊದಲನೆಯ ಮೆಟ್ಟಿಲು ಎಂದು ಬಿ.ಜಿ.ಎಲ್. ಸ್ವಾಮಿಯವರು ಭಾವಿಸಿದ್ದರು (ಸ್ವಾಮಿ, ೧೯೭೮). ಅವರ 'ಹಸುರು ಹೊನ್ನು' ಮತ್ತು 'ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕ' ಇದರ ಉದಾಹರಣೆಗಳು. 'ಹಸುರು ಹೊನ್ನು', 'ಕಾಲಾನುಕಾಲದಿಂದ ನಮ್ಮ ಬದುಕಿನೊಂದಿಗೆ ಒಂದಲ್ಲ ಒಂದು ರೀತಿಯಲ್ಲಿ ಒಡನಾಡಿಗಳಾಗಿ ಬೆಳೆದುಬಂದಿರುವ ಕೆಲವು ಗಿಡಮರಗಳ ಪರಿಚಯ ಮಾಡಿಕೊಡುವುದು ಈ ಬರವಣಿಗೆಯ ಪ್ರಯತ್ನ'ವಾದರೂ (ಸ್ವಾಮಿ, ೧೯೭೬) ಅದರ ಸಾಹಿತ್ಯಕ ಮೌಲ್ಯವೂ ಹಿರಿದಾದುದು. ಇಂದಿನ ರೈತನ ವ್ಯವಸಾಯದಲ್ಲಿರುವ ಹಲವಾರು ಬೆಳೆಗಳ ಮೂಲ ದಕ್ಷಿಣ ಅಮೆರಿಕ ಎಂಬುದನ್ನು 'ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕ' ಕೃತಿ ವಿವರಿಸುತ್ತದೆ. ಮೆಣಸಿನಕಾಯಿ, ಮುಸಿಕಿನ ಜೋಳ, ಟೊಮೇಟೋ, ನೆಲಗಡಲೆ, ಗೋಡಂಬಿ, ತಿಂಗಳ ಹುರುಳಿಕಾಯಿ, ಚಪ್ಪರದ ಬದನೆ, ಆಲೂಗಡ್ಡೆ, ಸಿಹಿಗೆಣಸು, ಮರಗೆಣಸು, ಪಪಾಯ, ಅನಾನಸ್, ಸಪೋಟ, ಸೀಬೆ ಮುಂತಾದುವು ಇಂದು ರೈತನ ಸ್ಥಿತಿಗತಿಯನ್ನು ನಿರ್ಧರಿಸುವಂತಹ ಬೆಳೆಗಳಾಗಿವೆ ಹಾಗೂ ಇವುಗಳಲ್ಲಿ ಹಲವಾರು ಬೆಳೆಗಳು ನಮ್ಮ ದಿನನಿತ್ಯದ ಆಹಾರದ ಅವಿಭಾಜ್ಯ ಭಾಗವಾಗಿವೆ.

ಕೃಷಿ ಪದವೀಧರರಾದ ಡಿ.ಎಸ್. ಮುರಿಗಪ್ಪ ಶ್ರೇಷ್ಠಿಯವರು ೧೯೫೮ರಲ್ಲಿ ರಚಿಸಿದ **ಜೇನು** ಕೃತಿಯಲ್ಲಿ (ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ) ವಿಜ್ಞಾನ ಮತ್ತು ಸಾಹಿತ್ಯದ ಸಮಾಗಮವನ್ನು ಕಾಣಬಹುದು. ಜೇನಿನ ಬದುಕಿನ ಬಗೆಗಿನ ಅತ್ಯಂತ ಸುಂದರ ಕಾವ್ಯಮಯ ವರ್ಣನೆಯ ಈ ಕೃತಿಯಲ್ಲಿನ ರಾಣಿ ಜೇನು ಗಂಡು ಜೇನುನೊಣಗಳೊಂದಿಗೆ ಕೂಡುವ **'ಸುನೀಲ ಶೂನ್ಯದಲ್ಲಿ ಪರಿಣಯ ಪರ್ಯಟನ'** ಅಧ್ಯಾಯದ ಆಯ್ದ ಭಾಗವನ್ನು ಅಧ್ಯಾಯ ೪ರಲ್ಲಿ ಕೊಡಲಾಗಿದೆ.

ಇಂದು ವಿಜ್ಞಾನಕ್ಕೇ ಮೀಸಲಾಗಿರುವ ಕನ್ನಡ ಪತ್ರಿಕೆಗಳೆಂದರೆ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಪ್ರಕಟಿಸುತ್ತಿರುವ 'ಬಾಲ ವಿಜ್ಞಾನ' ಮತ್ತು ಹಂಪಿಯ ಕನ್ನಡ ವಿಶ್ವವಿದ್ಯಾನಿಲಯ ಪ್ರಕಟಿಸುತ್ತಿರುವ 'ವಿಜ್ಞಾನ ಸಂಗಾತಿ'ಗಳು ಮಾತ್ರ. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ವಿಜ್ಞಾನ ಸಾಹಿತ್ಯ ಪ್ರಕಟಣೆ ಮತ್ತು ಪ್ರಸರಣೆಯಲ್ಲಿ ಮಹತ್ತರ ಪಾತ್ರ ವಹಿಸುತ್ತಿದೆ.

### ೨.೨.೨. ಕನ್ನಡದ ಮೊದಲ ಕೃಷಿಗ್ರಂಥ

ಕನ್ನಡದ ಮೊಟ್ಟಮೊದಲ ಕೃಷಿ ಸಾಹಿತ್ಯವೆಂದು ಗುರುತಿಸಬಹುದಾದಲ್ಲಿ ಅದು ಸುಮಾರು ೧೮೭೯ರಲ್ಲಿ ರಚಿತವಾದ ಶ್ರೀ ನಾಗಭೂಷಣ ಘನಮಠ ಶಿವಯೋಗಿಗಳ 'ಕೃಷಿಜ್ಞಾನ ಪ್ರದೀಪಿಕೆ'. ಬೇಸಾಯವೂ ಸಹ ಆಧ್ಯಾತ್ಮ ಬದುಕಿನ ಒಂದು ಭಾಗವೆಂದು ಅವರು ಪರಿಗಣಿಸಿದ್ದಿದ್ದರಿಂದಲೇ ಅವರಿಗೆ ಈ ಕೃತಿಯ ರಚನೆ ಸಾಧ್ಯವಾಗಿರಬಹುದು. 'ಈ ಭೂಮಿಯು ಕಲ್ಪವೃಕ್ಷಕ್ಕೂ ಕಾಮಧೇನುವಿಗೂ ಚಿಂತಾಮಣಿಗೂ ಪರುಷದ ಕಣಿಗೂ ಸಮಾನವಾಗಿದೆ. ಇಂಥ ಭೂಮಿ ಇದ್ದು ಮನುಷ್ಯರುಗಳು ಕಾಯಶಕ್ತಿಯಿಂದಲೂ, ಬುದ್ಧಿಶಕ್ತಿಯಿಂದಲೂ, ದ್ರವ್ಯಶಕ್ತಿಯಿಂದಲೂ ಮೆಹನತುಮಾಡಿ ಶ್ರಮಪಟ್ಟು, ಸಕಲ ಸಂಪತ್ತನ್ನು ದೊರಕಿಸಿಕೊಳ್ಳಬೇಕು. ಮೈಗಳ್ಳರಾಗಿ ದರಿದ್ರರಾಗಬಾರದು, ಮೈಗಳ್ಳತನವು ದಾರಿದ್ರ್ಯಕ್ಕೆ ಮುಖ್ಯ ಕಾರಣವಾಗಿದೆ' ಎಂದು ಒಂದನೆಯ ಪ್ರಕರಣದಲ್ಲೇ ಹೇಳಿದ್ದಾರೆ. ವೈಜ್ಞಾನಿಕ ವಿಶ್ಲೇಷಣೆಯಿಂದಲ್ಲದಿದ್ದರೂ ಅನುಭಾವ ಮತ್ತು ಅನುಭವದ ಸಾರಾಮೃತದಿಂದ ಈ ಕೃತಿ ರಚಿತವಾಗಿದೆ. ಬೆಳೆಗಳ ಉತ್ಪಾದನೆಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ವಿವೇಚಿಸಿದ್ದಾರೆ. ಭೂಮಿ- ಅದರ ಮಹತ್ವ, ಹೊಲಗಳ ಆರೈಕೆ, ನಟ್ಟು ಕಡಿಸುವುದು, ಹೊಲದಲ್ಲಿ ಒಡ್ಡಿನ ಉಪಯುಕ್ತತೆ, ಗೊಬ್ಬರದ ಬಳಕೆ, ನೀರಾವರಿ ಬೇಸಾಯ, ಕುಷ್ಕಿ ಅಥವಾ ಒಣ ಬೇಸಾಯ ಮುಂತಾದ ವಿಷಯಗಳ ಬಗ್ಗೆ ಸುದೀರ್ಘವಾಗಿ ಚರ್ಚಿಸಿದ್ದಾರೆ. ಪ್ರತಿಯೊಂದು ವಿವರಣೆಯನ್ನೂ ಹರಿಕತೆಯಲ್ಲಿನ ಉಪಕತೆ, ದೃಷ್ಟಾಂತಗಳನ್ನು ಬಳಸುವಂತೆ ಬಳಸಿ ವಿವರಿಸಿದ್ದಾರೆ. ಅವರು ಗೊಬ್ಬರದ ಪ್ರಾಮುಖ್ಯತೆಯ ಬಗೆಗೆ ಹೇಳಿರುವ ಕತೆ ಅತ್ಯಂತ ಅಮೂಲ್ಯವಾದದ್ದು:

'ಒಂದಾನೊಂದು ಗ್ರಾಮದಲ್ಲಿ ಒಬ್ಬ ಕೃಷಿಕನು ದೇವರನ್ನು ಕುರಿತು ಪ್ರಾರ್ಥನೆಯನ್ನು ಮಾಡುತ್ತ ಬೊಗಸೆಯನ್ನು ಒಡ್ಡಿರಲು ದೇವರು ಪ್ರಸನ್ನನಾಗಿ ಅವನ ಬೊಗಸೆಯಲ್ಲಿ ಅಮೃತವ ನೀಡಲು ಇದನ್ನೇನು ಮಾಡಬೇಕೆಂದು ದೇವರನ್ನು ಕೇಳಿದನು. ಆಗ ದೇವರು ಹೇಳಿದ್ದೇನೆಂದರೆ ಇದು ಅಮೃತವು, ಇದನ್ನು ನಿನ್ನ ಹೊಲಕ್ಕೆ ಒಯ್ದು ಹಾಕಿದರೆ ಆ ಹೊಲವು ಅತ್ಯುತ್ತಮವಾದ ಸಕಲ ಧಾನ್ಯಾದಿಗಳನ್ನು ಬೆಳೆಯುತ್ತದೆಂದು ಹೇಳಲು ಆ ಗೃಹಸ್ಥನು ತಪ್ಪು ಹೆಜ್ಜೆಯನ್ನಿಡುತ್ತ ಹೊಲಕ್ಕೆ ಹೋಗಬೇಕೆಂದು ಬೊಗಸೆಯಲ್ಲಿ ಅಮೃತವನ್ನು ಹಿಡಿದುಕೊಂಡು ಹೋಗುವುದರಲ್ಲಿ ತಿಪ್ಪೆಯಲ್ಲಿ ಎಡವಿಬಿದ್ದು ಆ ಅಮೃತವು ಚಲ್ಲಿಹೋಯಿತು. ಆಗ ಆ ಕೃಷಿಕನು ಚಿಂತಾತುರನಾಗಿ ಪುನಃ ದೇವರನ್ನು ಪ್ರಾರ್ಥಿಸುತ್ತಿರಲು ದೇವರು ಪ್ರತ್ಯಕ್ಷನಾಗಿ ಯಾಕೆ ಪ್ರಳಾಪಿಸುವಿ ಎಂದು ಕೇಳಿದನು. ಅದಕ್ಕೆ ಆ ಕೃಷಿಕನು ಅಂದದ್ದು, ಹೇ ದೇವರೇ ನೀನು ಕೊಟ್ಟ ಅಮೃತವು ತಿಪ್ಪೆಯಲ್ಲಿ ಬಿತ್ತು ಎಂದು ಹೇಳಲಾಗಿ, ದೇವರು ಆ ತಿಪ್ಪೆಯನ್ನೆಲ್ಲಾ ಒಯ್ದು ಹೊಲಕ್ಕೆ ಹಾಕು, ಯಾವನು ತಿಪ್ಪೆಯಲ್ಲಿರುವ ಗೊಬ್ಬರವನ್ನು ಹೊಲಕ್ಕೆ ಹಾಕುವನೋ ಅವನ ಹೊಲವು ಯಾವ ಬೀಜವನ್ನು ಬಿತ್ತಿದಾಗ್ಯಾದರೂ ಚನ್ನಾಗಿ ಬೆಳೆಯಾಗುವುದೆಂದು ಹೇಳಿ ಮಾಯವಾದನು."

ಈ ಕೃತಿಯ ಮತ್ತೊಂದು ವಿಶೇಷತೆಯೆಂದರೆ, ಗ್ರಂಥದ ಪೂರ್ವ ಭಾಗದಲ್ಲಿ ವಾಸ್ತವ ಪ್ರಾಪಂಚಿಕ ಕೃಷಿ ಆಚರಣೆಗಳ ಬಗ್ಗೆ ತಿಳಿಸಿದರೆ ಉತ್ತರಾರ್ಧದಲ್ಲಿ ಪಾರಮಾರ್ಥ ಕೃಷಿಯ ಬಗ್ಗೆ ತಿಳಿಸಿದೆ. 'ಈ ಗ್ರಂಥದ ಪೂರ್ವ ಭಾಗದಲ್ಲಿ ಕೃಷಿಯ ವಿಷಯವಾಗಿ ಹೇಳಿದ ಸುಲಭವಾದ ಸಕಲ ಯಕ್ತಿಗಳನ್ನು ಚನ್ನಾಗಿ ತಿಳಿದು ಕೃಷಿಕರಾದ ಪ್ರವೀಣರು ಸಕಾಮದಿಂದ ಧೈರ್ಯಶಾಲಿಗಳಾಗಿ ಕೃಷಿಯುದ್ಯೋಗದ ಸಕಲ ಕಾರ್ಯಗಳನ್ನು ಮಾಡೇನು, ಸಕಲ ಫಲ ಪದಾರ್ಥಗಳನ್ನು ಸಮೃದ್ಧಿಯಾಗಿ ಪಡದೇನು, ಎಂದು ಯತ್ನಿಸುವ ಸಾಧಕರ್ಗೆ ಭೂಮಿಯು ಹ್ಯಾಗೆ ಸದ್ಯಃ ಫಲವನ್ನು ಕೊಡುತ್ತಿಹುದೋ ಹಾಗೆ ಪಾರಮಾರ್ಥ ಕೃಷಿಕರಾದ ಮುಮುಕ್ಷು ಜನರುಗಳಿಗೆ ಈ ಪುಣ್ಯರ್ರಂಥವು ಸದ್ಯೋನ್ಮುಕ್ತಿಯಂ ಕೊಡುತ್ತಿಹುದು'. ಪಾರಮಾರ್ಥ ಕೃಷಿಕನು ತನ್ನ ಕೃಷಿಯಲ್ಲಿ ಪಂಚ ಪ್ರಕರಣಗಳಾದಂತಹ ನಿಜನಿರ್ಮಲತ್ವ ಸತ್ಯ ಸದಾಚಾರ, ಸಹಜ ಸುಜ್ಞಾನ, ಶಿವೈಕ್ಯ ಸದ್ಭಕ್ತಿ ಮತ್ತು ನಿಜಲಿಂಗೈಕ್ಯಗಳ ಸಾರ ಸಮ್ಮಿಶ್ರಣದಿಂದ ಸದ್ಯೋನ್ಮುಕ್ತಿಯಂ ಪಡೆಯಬಹುದೆನ್ನುತ್ತಾರೆ (ಶ್ರೀ ನಾಗಭೂಷಣ ಘನಮಠ ಶಿವಯೋಗಿಗಳು, ೧೯೮೦).

### ೨.೨.೩. ಮೈಸೂರು ವ್ಯವಸಾಯ ಶೋಧಕರ ಸಂಘ

ಹದಿನೆಂಟನೇ ಶತಮಾನದ ಅಂತ್ಯದಲ್ಲಿ ಟಿಪ್ಪೂ ಸುಲ್ತಾನನ ಕಾಲದಲ್ಲಿ ರಾಜ್ಯದ ಕೃಷಿಯ ಬಗ್ಗೆ ಆಸ್ಥೆ ವಹಿಸಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲಾಗಿತ್ತು. ಮೈಸೂರು ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಇಂಗಿತದಂತೆ ೧೯೯೯ರಲ್ಲಿ ಪ್ರತ್ಯೇಕ ಕೃಷಿ ಇಲಾಖೆಯನ್ನು ಪ್ರಾರಂಭಿಸಲಾಯಿತು ಹಾಗೂ ಅದರ ಮುಖ್ಯಸ್ಥರನ್ನಾಗಿ

ಜರ್ಮನ್ ರಾಷ್ಟ್ರದವರಾದ ಡಾ.ಲೆಹ್‌ಮನ್‌ರವರನ್ನು 'ಕೃಷಿ ರಾಸಾಯನಶಾಸ್ತ್ರಜ್ಞ' ಎಂಬ ಪದನಾಮದೊಂದಿಗೆ ನೇಮಿಸಲಾಯಿತು. ಅದುವರೆಗೂ ಎಲ್ಲ ಕೃಷಿ ಸಂಶೋಧನಾ ಕಾರ್ಯಗಳು ಲಾಲ್‌ಬಾಗ್‌ನಲ್ಲಿ ನಡೆಯುತ್ತಿತ್ತು. ಡಾ.ಲೆಹ್‌ಮನ್‌ರವರು ಈಗಿನ ಸೆಂಟ್ರಲ್ ಕಾಲೇಜಿನ ಬದಿಯಲ್ಲಿ ಕೃಷಿ ರಾಸಾಯನಶಾಸ್ತ್ರಜ್ಞರ ಪ್ರಯೋಗಾಲಯ ಹಾಗೂ ೧೯೦೪-೦೫ರಲ್ಲಿ ಹೆಬ್ಬಾಳ ಗ್ರಾಮದಲ್ಲಿ ೩೦ ಎಕರೆಗಳ ಕೃಷಿ ಪ್ರಾಯೋಗಿಕ ಕ್ಷೇತ್ರವನ್ನು ಸ್ಥಾಪಿಸಿದರು. ೨೦ನೇ ಶತಮಾನದ ಪ್ರಾರಂಭದಿಂದಲೂ ರಾಜ್ಯದ ಕೃಷಿ ಶಿಕ್ಷಣ ಕ್ಷೇತ್ರದಲ್ಲಿ ಹೆಬ್ಬಾಳವು ಪ್ರಮುಖ ಪಾತ್ರ ವಹಿಸಿದೆ.

ಡಾ.ಲೆಹ್‌ಮನ್‌ರವರ ನಂತರ ೧೯೦೮ರಲ್ಲಿ ಕೆನಡಾದ ಡಾ.ಲೆಸ್ಲಿ ಕೋಲ್‌ಮನ್‌ರವರು ರಾಜ್ಯದ 'ವ್ಯವಸಾಯ ಡೈರೆಕ್ಟರ್' ಆದರು. ೧೯೧೩ರಲ್ಲಿ ಹೆಬ್ಬಾಳದಲ್ಲಿ ಮೈಸೂರು ಕೃಷಿ ಶಾಲೆ ಪ್ರಾರಂಭಿಸುವುದರ ಜೊತೆಗೆ ಡಾ. ಕೋಲ್‌ಮನ್‌ರವರು ಮಂಡ್ಯದ ಸಕ್ಕರೆ ಕಾರ್ಖಾನೆ ಹಾಗೂ ಇನ್ನೂ ಹತ್ತುಹಲವಾರು ಕೃಷಿ ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿದರು. ಅವುಗಳಲ್ಲಿ ಕೃಷಿ ಸಾಹಿತ್ಯ ಹಾಗೂ ಪತ್ರಿಕೋದ್ಯಮಕ್ಕೆ ಮುಖ್ಯವಾಗುವುದೆಂದರೆ ಮೈಸೂರು ವ್ಯವಸಾಯ ಶೋಧಕ ಸಂಘದ ಸ್ಥಾಪನೆ.

ಅದಕ್ಕೂ ಮೊದಲು ಡಾ.ಕೋಲ್‌ಮನ್‌ರವರು, ೧೯೧೫ರಲ್ಲಿ ಮೈಸೂರು ವ್ಯವಸಾಯದ ಇಲಾಖೆಯಿಂದ ಮೈಸೂರು ವ್ಯವಸಾಯದ ಕ್ಯಾಲೆಂಡರ್ ಅಥವಾ ಪಂಚಾಂಗದ ಪ್ರಕಟಣೆಯನ್ನು ಪ್ರಾರಂಬಿಸಿದರು. ಆಗ ಅದರ ಬೆಲೆ ೧ ಆಣೆ ಇತ್ತು. ೧೯೪೨ರವರೆಗೂ ಪ್ರಕಟವಾದ ಈ ಪಂಚಾಂಗ ವಿಶ್ವಯುದ್ಧದಿಂದಾಗಿ ೧೯೪೯ರವರೆಗೂ ಪ್ರಕಟವಾಗಲಿಲ್ಲ. 'ಯುದ್ಧ ೧೯೪೫ರಲ್ಲೇ ಮುಗಿಯಿತಾದರೂ ಕಾಗದದ ಅಭಾವ, ಇತರ ಮುಗ್ಗಟ್ಟು ಇದ್ದೇ ಇದ್ದು ಪ್ರಕಟನೆಯನ್ನು ಇದುವರೆಗೂ ನಿಧಾನಿಸಬೇಕಾಯಿತು' ಎಂದು ಆಗಿನ ವ್ಯವಸಾಯದ ಇಲಾಖೆಯ ಡೈರೆಕ್ಟರ್ ಆಗಿದ್ದ ಕೆ.ಹೆಚ್. ಶ್ರೀನಿವಾಸನ್‌ರವರು ೧೯೪೯, ವಿರೋಧಿ ಸಂವತ್ಸರದ (೧೯೪೯-೧೯೫೦) ಪಂಚಾಂಗದ 'ಸ್ವಕೀಯ'ದಲ್ಲಿ ಬರೆದಿದ್ದಾರೆ.

'ಮೈಸೂರು ವ್ಯವಸಾಯದ ಪಂಚಾಂಗವು ಇಂಡಿಯಾದಲ್ಲಿ ಪ್ರಚುರವಾಗುವ ವ್ಯವಸಾಯ ಪ್ರಕಟನೆಗಳಲ್ಲಿ ಒಂದು ವೈಶಿಷ್ಟ್ಯವನ್ನು ಪಡೆದಿದೆ. ಇದು ಪಂಚಾಂಗವಲ್ಲದೆ ಮತ್ತು ವಾರ್ಷಿಕ ಪುಸ್ತಕವಲ್ಲದೆ ರೈತರ ವ್ಯವಸಾಯ ಕೈಪಿಡಿಯೂ ಆಗಿದೆ. ಇದರಲ್ಲಿ ವ್ಯವಸಾಯಕ್ಕೆ ಸಂಬಂಧಪಟ್ಟ ಸಂಶೋಧನೆಗಳ ಫಲಿತಗಳನ್ನು ಜನಪ್ರಿಯವಾಗುವಂತೆ ತಿಳಿಸುವ ಅನೇಕ ಲೇಖನಗಳಿವೆ.

'ಮೈಸೂರು ವ್ಯವಸಾಯ ಶೋಧಕ ಸಂಘ ಮುಂತಾದ ಇತರ ಐಕ್ಯಕ ಸಂಸ್ಥೆಗಳು ಮತ್ತು ಇತರ ಶಾಖೆಗಳನ್ನು ಸ್ಥಾಪಿಸಿದಂತೆ ಈ ಪಂಚಾಂಗವನ್ನು ಮೊದಲು ಪ್ರಕಟಿಸುವ ಕಾರ್ಯವನ್ನು ಪ್ರಾರಂಭಿಸಿದವರು ಮೈಸೂರಿನ ಮೊಟ್ಮೊದಲಿನ ವ್ಯವಸಾಯದ ಡೈರೆಕ್ಟರಾದ

ಡಾ. ಕೋಲ್ಮನ್‌ರವರು' ಎಂದು 'ಮೈಸೂರು ವ್ಯವಸಾಯದ ಪಂಚಾಂಗ'ದ ೧೯೫೪ರ ಜಯ ಸಂವತ್ಸರ (೧೯೫೪-೧೯೫೫) ಸಂಚಿಕೆಯ 'ಮೊದಲ ಮಾತು' ಅಂಕಣದಲ್ಲಿ ಬರೆಯಲಾಗಿದೆ.

೧೯೧೮ರಲ್ಲಿ ಪ್ರಾರಂಭವಾದ ಮೈಸೂರು ವ್ಯವಸಾಯ ಶೋಧಕ ಸಂಘವು ಮೈಸೂರು ಸಂಸ್ಥಾನದ ೧೯೦೪ನೇ ಇಸವಿಯ ೩ ಮತ್ತು ೧೯೩೯ನೇ ಇಸವಿಯ ೫ನೇ ಕಾನೂನು ಪ್ರಕಾರ ರಿಜಿಷ್ಟರಾದದ್ದು ಹಾಗೂ ಸಂಘದ ಹೆಸರನ್ನು ಇಂಗ್ಲಿಷಿನಲ್ಲಿ 'ದಿ ಮೈಸೂರು ಅಗ್ರಿಕಲ್ಚರಲ್ ಎಂಡ್ ಎಕ್ಸ್ಪರಿಮೆಂಟಲ್ ಯೂನಿಯನ್' ಮತ್ತು ಕನ್ನಡದಲ್ಲಿ 'ಮೈಸೂರು ವ್ಯವಸಾಯ ಶೋಧಕ ಸಂಘ, ಬೆಂಗಳೂರು' ಎಂದು ಕರೆಯಲಾಯಿತು. ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆಯಲ್ಲಿ ಪ್ರಕಟವಾಗಿದ್ದಂತೆ ಆ ಸಂಘವನ್ನು ಪ್ರಾರಂಬಿಸಿದ ಉದ್ದೇಶ ಬೆಳೆಗಳು, ಕಾಲ್ನಡೆಗಳು', ಹಣ್ಣುಹಂಪಲುಗಳು ಎಲ್ಲವನ್ನೂ ಒಳಗೊಂಡ ವ್ಯವಸಾಯವನ್ನು ಉತ್ತಮಗೊಳಿಸಿ ತನ್ಮೂಲಕ ರೈತನ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸುವುದು. ಈ ಉದ್ದೇಶ ಸಾಧನೆಗಾಗಿ ಹಲವಾರು ಕಾರ್ಯಕ್ರಮಗಳ ಜೊತೆಗೆ ವ್ಯವಸಾಯವನ್ನು ಕುರಿತ ಲೇಖನಗಳುಳ್ಳ ಒಂದು ಕನ್ನಡ ಪತ್ರಿಕೆಯನ್ನೂ ಒಂದು ಇಂಗ್ಲಿಷ್ ಪತ್ರಿಕೆಯನ್ನೂ ಪ್ರಕಟಿಸುವುದು. ವ್ಯವಸಾಯ, ಕಾಲ್ನಡೆಗಳು, ಹಣ್ಣುಹಂಪಲು ಮತ್ತು ಸಂಬಂಧಪಟ್ಟ ಇತರ ವಿಷಯಗಳ ಮೇಲೆ ಸಾಮಾನ್ಯ ಜನರಿಗೆ ಹಿಡಿಸುವ ಹಾಗೆ ಸಣ್ಣ ವಿಷಯ ಪತ್ರಿಕೆಗಳನ್ನು ಪ್ರಕಟಿಸುವುದು ಹಾಗೂ ವ್ಯವಸಾಯಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನೂ ನಿಯತಕಾಲಿಕ ಪತ್ರಿಕೆಗಳನ್ನು ಸದಸ್ಯರು ಓದಿಕೊಳ್ಳಲು ಒದಗಿಸುವುದು. ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ ಮೊದಲು ತ್ರೈಮಾಸಿಕವಾಗಿದ್ದು ೫ನೆಯ ಸಂಪುಟದಿಂದ ಮಾಸಪತ್ರಿಕೆಯಾಗಿ ಪರಿವರ್ತಿತಗೊಂಡಿತು.

೧೯೩೮ರ ಸಂಪುಟ ೧೪, ಸಂಚಿಕೆ ೩ರಲ್ಲಿ ಮೈಸೂರು ವ್ಯವಸಾಯ ಶೋಧಕ ಸಂಘದ ಕಾರ್ಯದರ್ಶಿಯವರಾದ ನಿಡತದ ವೆಂಕಟಸುಬ್ಬಯ್ಯನವರು ೧೭-೧-೧೯೩೮ರಂದು ಶಿವಗಂಗೆ ಗಂಗಾಧರೇಶ್ವರ ಸ್ವಾಮಿಯವರ ಜೊತೆ ಸ್ಕೌಟ್ ಕ್ಯಾಂಪಿಗೆ ಬಂದಿದ್ದ ಪಟೇಲರು, ಶ್ಯಾನುಭೋಗರುಗಳಿಗೆ ವ್ಯವಸಾಯದ ವಿಚಾರದಲ್ಲಿ ಅವರು ಹೇಗೆ ಮುಂದುವರಿಯಬೇಕು ಎಂಬ ವಿಷಯವಾಗಿ ಈ ಮುಂದಿನಂತೆ ಭಾಷಣ ಮಾಡಿದರು:

> ವ್ಯವಸಾಯ ಶೋಧಕ ಸಂಘವೊಂದಿದೆ. ಆ ಸಂಘಕ್ಕೆ ಮೆಂಬರುಗಳಾಗಿರುವವರಿಗೆ ತಳಿಯ ಬೀಜ, ಮುಂತಾದುವುಗಳನ್ನು ಮುಫತ್ತಾಗಿ ಕೊಟ್ಟು, ಅವರ ಅಜಮಾಯಿಷಿಗಳನ್ನು ಮತ್ತು ಅನುಭವಗಳನ್ನು ಮೇಲ್ಕಂಡ ಸಂಘದವರು ತರಿಸಿಕೊಂಡು, ಸಂಘದ ಮಾಸಪತ್ರಿಕೆಯಲ್ಲಿ ಪ್ರಕಟಿಸುತ್ತಾರೆ. ಅದರಲ್ಲಿ ವ್ಯವಸಾಯದ ವಿಚಾರದಲ್ಲಿ ರೈತರು ಹೇಗೆ ಮುಂದುವರಿಯಬೇಕೆಂಬುದನ್ನು ಕೂಡು ನಿಮ್ಮ ಏಳಿಗೆಗಾಗಿ ಮತ್ತು ನಿಮ್ಮ ತಿಳಿವಳಿಕೆಗಾಗಿಯೂ

ಪ್ರಕಟಿಸಿರುತ್ತಾರೆ. ಆ ಸಂಘದ ಪತ್ರಿಕೆಗೆ ವಾರ್ಷಿಕ ಚಂದಾ ೩ ರೂಪಾಯಿಗಳು ಮಾತ್ರ; ಅದನ್ನು ದಯವಿಟ್ಟು ಈಗಿನಿಂದಲಾದರೂ ತರಿಸಿಕೊಳ್ಳಿರಿ. ಓದು ಬಾರದವರಿಗೆ ವಾರಕ್ಕೆ ಒಂದು ದಿವಸ ಗ್ರಾಮಪಂಚಾಯಿತಿ ಚಾವಡಿಯಲ್ಲಿ ಸಭೆ ಸೇರಿಸಿ ಓದಿ ಹೇಳಿ ತಿಳಿವಳಿಕೆಯನ್ನು ಹೆಚ್ಚಿಸಿರಿ. ಗ್ರಾಮಾಭಿವೃದ್ಧಿಗೆ ಇದೊಂದು ದಾರಿ.

ವ್ಯವಸಾಯದ ಇಲಾಖೆಯವರು ವ್ಯವಸಾಯಗಾರರ ಜಮೀನುಗಳಲ್ಲಿ ನಡೆಸಿದ ಪರೀಕ್ಷೆಗಳ ಹಾಗೂ ಪ್ರದರ್ಶನಗಳ ಬಗ್ಗೆ ಹಾಗೂ ಇಲಾಖೆಯ ಸಲಹೆಯ ಪ್ರಕಾರ ಬೇಸಾಯ ಮಾಡಿದವರ ಅಭಿಪ್ರಾಯಗಳನ್ನು ಸಂಘದ ಪತ್ರಿಕೆಯಲ್ಲಿ ಪ್ರಕಟಿಸುವುದರ ಜೊತೆಗೆ ರೈತರ ಅನುಭವಗಳನ್ನು ಕುರಿತ ಟಿಪ್ಪಣಿಗಳನ್ನು ಮತ್ತು ಅಲ್ಲಲ್ಲಿಂದ ಆಯ್ದ ವ್ಯವಸಾಯ ವಾರ್ತೆಗಳನ್ನೂ ಪತ್ರಿಕೆಯಲ್ಲಿ ಪ್ರಕಟಿಸಲಾಗುತ್ತಿತ್ತು. ಉದಾಹರಣೆಗೆ, ಪಂಜಾಬಿನ ಗ್ರಾಮಾಭಿವೃದ್ಧಿ ವಿಷಯ ಪತ್ರಿಕೆ, ಇಂಟರ್‌ನ್ಯಾಷನಲ್ ರಿವ್ಯೂ ಆಫ್ ಅಗ್ರಿಕಲ್ಚರ್, ಮಿನ್ನೆಸೋಟಾ ವ್ಯವಸಾಯ ಪತ್ರಿಕೆ, ಟ್ರಾಪಿಕಲ್ ಅಗ್ರಿಕಲ್ಚರಿಸ್ಟ್, ಜಮೈಕ ವ್ಯವಸಾಯ ಪತ್ರಿಕೆ, ಅಮೆರಿಕಾದ ಸಂಯುಕ್ತ ಸಂಸ್ಥಾನದ ವ್ಯವಸಾಯ ಶಾಖೆಯ ವಿಷಯಪತ್ರಿಕೆ, ಮೈಸೂರು ಗೆಜೆಟ್, ಮಲಯಾದ ವ್ಯವಸಾಯ ಪತ್ರಿಕೆ ಮುಂತಾದುವುಗಳಿಂದ ಆಯ್ದ ಲೇಖನಗಳನ್ನು ಪ್ರಕಟಿಸಲಾಗುತ್ತಿತ್ತು. ವಿದೇಶದ ಕೃಷಿಯ ಬಗ್ಗೆಯೂ ಲೇಖನಗಳು ಪ್ರಕಟವಾಗುತ್ತಿದ್ದವು. ಉಲ್ಲೇಖಿಸಬಹುದಾದ ಕೆಲವು ಉದಾಹರಣೆಗಳೆಂದರೆ, 'ಸಿಲೋನಿನಲ್ಲಿ ಹಣ್ಣಿನ ಬೇಸಾಯಕ್ಕಿರುವ ತೊಂದರೆಗಳು', 'ಮಲಯಾದಲ್ಲಿ ಸಬ್ಬಕ್ಕಿ ಕೈಗಾರಿಕೆ' ಹಾಗೂ 'ಸಿಂಗಪುರದ ಕಾರ್ಖಾನೆಗಳಲ್ಲಿ ಸೇಗೋ ಹಿಟ್ಟನ್ನು ತಯಾರಿಸುವುದು' (ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ, ಸಂ.೧೪, ಸಂಚಿಕೆ ೩, ೧೯೩೮).

'ಇತರ ಪತ್ರಿಕೆಗಳವರು ಸಂಘಕ್ಕೆ ತಮ್ಮ ಪತ್ರಿಕೆಗಳನ್ನು ವಿನಿಮಯವಾಗಿ ಕಳಿಸಿ, ಅವರಲ್ಲಿ ಕೆಲವರು ವ್ಯವಸಾಯ ಶೋಧಕರ ಸಂಘದ ಪತ್ರಿಕೆಯಲ್ಲಿನ ಲೇಖನಗಳನ್ನು ಆಯ್ದುಕೊಂಡು ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿ ಅವುಗಳ ಉಪಯುಕ್ತತೆಯ ಬಗ್ಗೆ ನಮ್ಮಲ್ಲಿ ಧೈರ್ಯತುಂಬಿದ್ದಾರೆ' ಎಂದು ಜನವರಿ ೧೯೪೧, ಸಂಚಿಕೆ ೧, ಸಂಪುಟ ೧೭ರ ಸಂಪಾದಕೀಯದಲ್ಲಿ ಬರೆಯಲಾಗಿದೆ. ೧೯೪೦ರಿಂದಲೇ ಕನ್ನಡದ ದಿನಪತ್ರಿಕೆಗಳಲ್ಲಿ ಕೃಷಿ ಲೇಖನಗಳನ್ನು ಪ್ರಕಟಿಸಲು ಪ್ರಾರಂಬಿಸಲಾಗಿದೆ. ೧೯೫೪ರಿಂದ 'ತಾಯಿನಾಡು' ದಿನಪತ್ರಿಕೆಯಲ್ಲಿ ವಾರಕ್ಕೆ ಎರಡು ಸಾರಿ 'ರೈತರ ವೃತ್ತಾಂತಗಳ' ಬಗ್ಗೆ ಪ್ರಕಟಿಸಲು ಪ್ರಾರಂಭಿಸಿತು. ಜನವರಿ ೧೯೫೫, ಸಂಚಿಕೆ ೧, ಸಂಪುಟ ೩೧ರ ವ್ಯವಸಾಯ ಶೋಧಕರ ಸಂಘದ ಪತ್ರಿಕೆಯಲ್ಲಿ 'ತಾಯಿನಾಡು' ಪತ್ರಿಕೆಯ ವ್ಯವಸ್ಥಾಪಕರು ಜಾಹಿರಾತೊಂದನ್ನು ನೀಡಿ, 'ಕಳೆದ ಒಂದೆರಡು ತಿಂಗಳಿಂದ ಈ ರೈತರ ವಿಭಾಗವನ್ನು ತೆರೆದಿದ್ದೇವೆ. ಸಂಸ್ಥಾನದ ನಾನಾಕಡೆಗಳಿಂದ ನಮಗೆ ಪ್ರಶಂಸೆಯ ಪತ್ರಗಳು ಬರುತ್ತಿವೆ. ಅದರಿಂದ ರೈತರಲ್ಲಿ ಹೊಸ

ಉತ್ಸಾಹವೂ, ಹುರುಪೂ ಮೂಡಿದೆ. ನಮ್ಮ ಮೈಸೂರು ರೈತರು ಹೆಚ್ಚಿನ ಪ್ರೋತ್ಸಾಹ ನೀಡುವುದಾದರೆ, ಆ ವಿಭಾಗವನ್ನು ವಿಸ್ತರಿಸಿ ಇನ್ನೂ ಹೊಸ ವಿಷಯಗಳನ್ನು ಬರೆದು ರೈತರ ಮುಂದಿಡುತ್ತೇವೆ' ಎಂದಿದ್ದರು.

ಆ ಪತ್ರಿಕೆಗೆ ಲೇಖನಗಳನ್ನು ರೈತರಿಂದಲೂ ಸಹ ಆಹ್ವಾನಿಸುವ ಸಲುವಾಗಿ ಸಂಪುಟ ೧೪, ಫೆಬ್ರವರಿ ೧೯೩೮, ಸಂಚಿಕೆ ೨ರಲ್ಲಿ ಬರಹಗಾರರಿಗೆ ಈ ಕೆಳಗಿನಂತೆ ಸೂಚನೆ ನೀಡಲಾಗಿತ್ತು:

**'ಶಾಸ್ತ್ರವನ್ನೋದಿದ ಪಂಡಿತರು ಮಾತ್ರವೇ ಪತ್ರಿಕೆಗೆ ಲೇಖನಗಳನ್ನು ಬರೆಯಬಲ್ಲರೆಂದೂ ಇತರರಿಗೆ ಸಾಧ್ಯವಿಲ್ಲವೆಂದೂ ತಿಳಿಯಬಾರದು. ವ್ಯವಸಾಯ ವೃತ್ತಿಯನ್ನು ಕೈಕೊಂಡಿರುವವರೆಲ್ಲರೂ ಬರೆಯಬಹುದು. ಸಾಮಾನ್ಯ ರೈತರೂ ಕೂಡ ತಮ್ಮ ಅನುಭವಗಳನ್ನು ಪರಸ್ಪರವಾಗಿ ಹೇಳಿ ಕೇಳಿ ತಿಳಿದುಕೊಳ್ಳುವುದು ಏಳಿಗೆಗೆ ದಾರಿಯಾಗುವುದು. ಯಾವ ವಿಷಯವನ್ನೂ ಅಲ್ಪವೆಂದು ಅಸಡ್ಡೆ ಮಾಡಬೇಡಿ.'**

ಅದೇ ರೀತಿ ಸಂಪುಟ ೧೭, ಜನವರಿ ೧೯೪೧, ಸಂಚಿಕೆ ೧ರ ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆಯ ಸಂಪಾದಕೀಯದಲ್ಲಿ, '......ವ್ಯವಸಾಯಗಾರರ ಜಮೀನುಗಳಲ್ಲಿಯೇ ಪರೀಕ್ಷೆಗಳನ್ನೂ, ಪ್ರದರ್ಶನಗಳನ್ನೂ ಸಾವಿರಗಟ್ಟಲೆಯಾಗಿ ನಡೆಸುವ ಏರ್ಪಾಡನ್ನು ವ್ಯವಸಾಯದ ಇಲಾಖೆಯವರು ಕೈಗೊಂಡಿದ್ದಾರಷ್ಟೆ. ಇಲಾಖೆಯ ಸಲಹೆಯ ಪ್ರಕಾರ ಬೇಸಾಯ ಮಾಡಿದವರ ಅಭಿಪ್ರಾಯಗಳನ್ನು ನಮ್ಮ ಪತ್ರಿಕೆಯಲ್ಲಿ ಕ್ರಮವಾಗಿ ಪ್ರಕಟಿಸುತ್ತಾ ಬಂದಿದ್ದೇವೆ. ತಮ್ಮ ತಮ್ಮ ಹಿಡುವಳಿಗಳಲ್ಲಿ ಪ್ರಯೋಗಗಳನ್ನು ನಡೆಸಬೇಕೆಂಬುದು ಮೊದಲಿನಿಂದಲೂ ವ್ಯವಸಾಯ ಶೋಧಕ ಸಂಘದ ಸದಸ್ಯರುಗಳ ಉದ್ದೇಶವಾಗಿರುತ್ತದೆ. ಈ ರೀತಿ ಪರೀಕ್ಷೆಗಳನ್ನು ನಡಸಿ ತಾವು ಗಳಿಸಿದ ಅನುಭವಗಳನ್ನು ಕುರಿತ ಟಿಪ್ಪಣಿಗಳನ್ನು ಸದಸ್ಯರು ಪತ್ರಿಕೆಗೆ ಕಳಿಸಿಕೊಡುತ್ತಿರಬೇಕು. ಅಲ್ಲದೆ ಅಲ್ಲಲ್ಲಿಂದ ಆಯ್ದ ವ್ಯವಸಾಯ ವಾರ್ತೆಗಳನ್ನೂ ಪತ್ರಿಕೆಯಲ್ಲಿ ಕೊಡುತ್ತಿರಲಾಗಿದೆ.......

'ಹಲವು ಪತ್ರಿಕಾಕರ್ತರು ತಮ್ಮ ಪತ್ರಿಕೆಗಳನ್ನು ನಮಗೆ ವಿನಿಮಯವಾಗಿ ಕಳಿಸಿ ಸಹಾಯಮಾಡಿದ್ದಾರೆ. ಅವರಲ್ಲಿ ಕೆಲವರು ನಮ್ಮ ಪತ್ರಿಕೆಯಲ್ಲಿನ ಲೇಖನಗಳನ್ನು ಆಯ್ದುಕೊಂಡು ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿ ಇವುಗಳ ಉಪಯುಕ್ತತೆಯ ವಿಚಾರದಲ್ಲಿ ನಮಗೊಂದು ಧೈರ್ಯಕೊಟ್ಟಿದ್ದಾರೆ.'

ಐವತ್ತರ ದಶಕದಲ್ಲಿ ಡಾ. ಪಂಜಾಬರಾವ್ ದೇಶಮುಖರು ಭಾರತ ಕೃಷಿಕ ಸಮಾಜ ಸ್ಥಾಪನೆ ಮಾಡಿದ ನಂತರ ಮೈಸೂರು ವ್ಯವಸಾಯ ಶೋಧಕ ಸಂಘವು ಭಾರತವ್ಯಾದ್ಯಂತ ಒಂದೇ ಸಂಘಟನೆಯೊಂದಿಗೆ ಕಾರ್ಯನಿರ್ವಹಿಸುವ ಸಲುವಾಗಿ ಅದರೊಂದಿಗೆ ವಿಲೀನಗೊಂಡು 'ಮೈಸೂರು ಕೃಷಿಕ ಸಮಾಜ'ವನ್ನು ಪ್ರಾರಂಭಿಸಿತು.

ಸಂಪುಟ ೩೪, ಜನವರಿ ೧೯೫೪, ಸಂಚಿಕೆ ೧೧ರ ಸಂಚಿಕೆಯ ಸಂಪಾದಕೀಯದಲ್ಲಿ ಆ ಘಟನೆಯ ಬಗ್ಗೆ ಈ ರೀತಿ ಬರೆಯಲಾಗಿದೆ:

**'......ನಾವು ಭಾರತ ಕೃಷಿಕ ಸಮಾಜದೊಂದಿಗೆ ಬೆರೆತು ಕಾರ್ಯಸಾಧಿಸಬೇಕೆಂದು ನಿಶ್ಚಯಿಸಿ ಒಂದು ವರ್ಷವಾಯಿತು. ಅಲ್ಲಿಯವರೆಗೆ ಮೈಸೂರು ವ್ಯವಸಾಯ ಸಂಶೋಧನಾ ಸಂಘವಾಗಿ ೧೯೧೮ರಲ್ಲಿ ದಿವಂಗತ ಡಾ. ಕೋಲ್ಮನ್‌ರವರಿಂದ ನಾಟಲ್ಪಟ್ಟ ಈ ವೃಕ್ಷವು, ಕಾಲಕಾಲಕ್ಕೆ ವ್ಯವಸಾಯತಜ್ಞರ ಪರಿಶೋಧನಾ ತಿಳುವಳಿಕೆಗಳನ್ನು ಒಕ್ಕಲುತನದವರಿಗೆ ಬೀರುತ್ತಲೂ, ರೈತರ ಹಿಡುವಳಿಗಳಲ್ಲಿ ಸಂಶೋಧನೆ ನಡೆಸುತ್ತಲೂ, ಕ್ಷೇತ್ರೋತ್ಸವ, ರೈತರ ಸಮ್ಮೇಳನಗಳನ್ನು ನಡೆಸುತ್ತ ಒಕ್ಕಲುತನದ ವೃತ್ತಿಯ ಮೇಲ್ಮೈಗೆ ದುಡಿಯುತ್ತಿತ್ತು. ಈ ೩-೪ ವರ್ಷಗಳ ಕೆಳಗೆ ಡಾ. ಪಂಜಾಬರಾವ್ ದೇಶಮುಖರು ಭಾರತ ಕೃಷಿಕ ಸಮಾಜಸ್ಥಾಪನೆ ಮಾಡಿದರು. ಅಖಿಲ ಭಾರತಕ್ಕೂ, ವಿಶ್ವದ ಭ್ರಾತೃತ್ವದಿಂದ ಕಾರ್ಯಭಾಗಗಳನ್ನು ಸಾಧಿಸಲು ಪ್ರಾರಂಭಿಸಿದರು..... ನಾವು ಮೊದಲು ಭಾರತೀಯರು ನಂತರ ಮೈಸೂರಿನವರು; ರೈತರೆಲ್ಲರೂ ಆಸೇತು ಹಿಮಾಚಲಪರ್ಯಂತ ಒಂದು. ಒಂದುಗೂಡಿ ಕಾರ್ಯಸಾಧಿಸೋಣವೆಂದು ನಾವೂ 'ಮೈಸೂರು ಕೃಷಿಕ ಸಮಾಜ'ವೆಂದು ಕಾರ್ಯಪ್ರಾರಂಭಿಸಿದೆವು.'**

ಅನಂತರ ಅದು 'ಕರ್ನಾಟಕ ಪ್ರದೇಶ ಕೃಷಿಕ ಸಮಾಜ'ವೆಂದು ಬದಲಾಯಿತು ಹಾಗೂ 'ಮೈಸೂರು ವ್ಯವಸಾಯ ಶೋಧಕರ ಸಂಘದ ಪತ್ರಿಕೆ'ಯು 'ಕರ್ನಾಟಕ ವ್ಯವಸಾಯ ಪತ್ರಿಕೆ'ಯೆಂದು ಬದಲಾಗಿ ಮಾಸಿಕ ಪತ್ರಿಕೆಯ ರೂಪದಲ್ಲಿ ನಿರಂತರವಾಗಿ ಪ್ರಕಟವಾಗುತ್ತಿದೆ. ಇಂದು ಜಿಲ್ಲಾವಾರು ಹಾಗೂ ತಾಲ್ಲೂಕು ಮಟ್ಟದಲ್ಲಿಯೂ ಕೃಷಿಕ ಸಮಾಜಗಳಿವೆ.

## ೨.೩. ಕೃಷಿವಿಜ್ಞಾನ ಸಾಹಿತ್ಯ ಮತ್ತು ಅದರ ಸಂವಹನ

ಒಂದು ವಿಚಾರ, ಯೋಚನೆ, ಚಿಂತನೆ, ಅನಿಸಿಕೆ ಅಥವಾ ಅನುಭವವನ್ನು ಒಬ್ಬ ವ್ಯಕ್ತಿ ಅಥವಾ ಒಂದು ಸಮುದಾಯ ಇನ್ನೊಬ್ಬ ವ್ಯಕ್ತಿ ಅಥವಾ ಸಮುದಾಯದೊಂದಿಗೆ ಹಂಚಿಕೊಳ್ಳುವುದೇ ಸಂವಹನ. ಸಂವಹನವು ಒಂದು ಉದ್ದೇಶಿತ ಪ್ರತಿಕ್ರಿಯೆಯನ್ನು ಬಯಸುತ್ತದೆ ಹಾಗೂ ಅದು ಮೂರು ಮುಖ್ಯ ಅಂಶಗಳನ್ನು ಒಳಗೊಂಡಿರುತ್ತದೆ- ಸಂದೇಶದ ಮೂಲ, ಸಂದೇಶ ಹಾಗೂ ಅದು ತಲುಪಬೇಕಾದ ಗುರಿ.

ಸಂವಹನ ಮತ್ತು ಸಮಾಜದ ಬಗೆಗಿನ ಯುನೆಸ್ಕೊ ವರದಿಯಲ್ಲಿ (UNESCO, ೧೯೮೨) 'ನಾವು ವಿದ್ಯುನ್ಮಾನ ಯುಗವನ್ನು ಪ್ರವೇಶಿಸುತ್ತಿದ್ದೇವೆ ಎಂದು ಹಲವಾರು ಜಾರಿ ಹೇಳುತ್ತಿದ್ದರೂ, ಮುದ್ರಣ ಮಾಧ್ಯಮ ಕೊನೆಗೊಳ್ಳುವ ಯಾವ ಸೂಚನೆಗಳೂ ಕಾಣುತ್ತಿಲ್ಲ. ಮುಂದಿನ ಇನ್ನೂ ಹಲವಾರು ದಶಕಗಳ ಕಾಲ ವೃತ್ತ ಪತ್ರಿಕೆಗಳು, ಪತ್ರಿಕೆಗಳು ಮತ್ತು ಪುಸ್ತಕಗಳು ಮಾಹಿತಿ, ಜ್ಞಾನ ಮತ್ತು ಮನರಂಜನೆಯ ಮಾಧ್ಯಮಗಳಾಗಿ

ಉಳಿಯುವುದರಲ್ಲಿ ಸಂದೇಹವಿಲ್ಲ. ಹಾಗಾಗಿ ಅವುಗಳ ನಿರಂತರಗೊಳಿಸುವ ಬಗೆಗೆ, ಅವುಗಳ ಪ್ರಮಾಣ ಮತ್ತು ಗುಣಮಟ್ಟ ಹೆಚ್ಚಿಸುವ ನಿಟ್ಟಿನಲ್ಲಿ ಪ್ರಯತ್ನ ಮಾಡಬೇಕಾಗಿದೆ' ಎಂದು ಹೇಳಿದೆ.

ರಂಜನ್ ಎಸ್. ಕರಿಪ್ಪಾಯ್‌ರವರು ಹೇಳುವಂತೆ ಅಭಿವೃದ್ಧಿ ಸಂವಹನದಲ್ಲಿ ಮುದ್ರಣ ಮಾಧ್ಯಮ ಒಂದು ಪ್ರಭಾವೀ ಮಾಧ್ಯಮ.

ಸಾಮಾನ್ಯವಾಗಿ ಒಬ್ಬ ವ್ಯಕ್ತಿಯ ನಡತೆಯ ಬದಲಾವಣೆಯಲ್ಲಿ ಬಹು ಮುಖ್ಯ ಪಾತ್ರ ವಹಿಸುವುದು ಬಾಹ್ಯ ಪ್ರಚೋದನೆಗಳು. ಆವಿಷ್ಕಾರಗಳು ಗ್ರಾಮದಂತಹ ಒಂದು ಆವರಿತ ಸಾಮಾಜಿಕ ವ್ಯವಸ್ಥೆಯಲ್ಲಿ ಸಾಪೇಕ್ಷವಾಗಿ ಅಪರೂಪವಾಗಿ ನಡೆಯುವಂತಹವು. ಅವು ಘಟಿಸಿದರೂ ಅವುಗಳನ್ನು ಮತ್ತೊಬ್ಬರು ಅನುಸರಿಸಲೆಂದು ಅವುಗಳನ್ನು ಗಹನವಾಗಿ ಸಂವಹಿಸುವುದೂ ಅಪರೂಪವೆ. ಹಾಗಾಗಿ ರೈತರ ಜ್ಞಾನ, ಧೋರಣೆ ಮತ್ತು ನಡತೆಯಲ್ಲಿ ಗಮನಾರ್ಹ ಬದಲಾವಣೆಗಳನ್ನು ಕಾಣಬೇಕಾದಲ್ಲಿ ಗ್ರಾಮದ ಹೊರಗಿನಿಂದ ಹೊಸ ವಿಷಯಗಳು ಸಂವಹಿಸಿಬೇಕಾಗಿರುವುದು ಇಲ್ಲಿ ಅತ್ಯವಶ್ಯಕ. ವ್ಯವಸಾಯ ಕ್ಷೇತ್ರಕ್ಕೆ ಸಂಬಂಧಿಸಿದ ಎಲ್ಲ ಬಗೆಯ ಮಾಹಿತಿಗಳನ್ನು ಕೃಷಿಕರಿಗೆ ಕೊಡುವುದು ಹಾಗೂ ಅವರದನ್ನು ಪಡೆಯುವುದು– ಇವನ್ನೊಳಗೊಂಡ ಪ್ರಕ್ರಿಯೆಯನ್ನು ಕೃಷಿ ಸಂವಹನವೆನ್ನಬಹುದು.

ಕೃಷಿರಂಗ ಪ್ರಬುದ್ಧವಾಗಿ ಬೆಳೆಯಬೇಕಾದರೆ, ಕೃಷಿ ಶಿಕ್ಷಣ ಪ್ರಬುದ್ಧ ಮಟ್ಟಕ್ಕೆ ಬೆಳೆಯಬೇಕು. ಕೃಷಿ ಶಿಕ್ಷಣವೆಂದರೆ ಗ್ರಾಮೀಣ ಪ್ರದೇಶಗಳಲ್ಲಿ ಬದಲಾವಣೆಯ ಗಾಳಿಯನ್ನು ತರುವಂತೆ ಮಾಡುವ ಒಂದು ಮಾಧ್ಯಮ. ಆದರೆ ಕೃಷಿ ಶಿಕ್ಷಣ ವಿಶಿಷ್ಟ ಹಿತಾಸಕ್ತಿ ಶಕ್ತಿಗಳ ಕೈಗೆ ಸಿಕ್ಕಿ ಕೆಲಸಕ್ಕೆ ಬಾರದ ಶಿಕ್ಷಣವಾಗಿದೆ. ಪ್ರಾಥಮಿಕವಾಗಿ ಕೃಷಿಯಲ್ಲಿ ಹಾಗೂ ಗ್ರಾಮೀಣ ಕಸುಬುಗಳಲ್ಲಿ ಆಧುನಿಕತೆಯನ್ನು ತರುವ ಸಾಧನವಾಗಿಲ್ಲವೆಂದರೆ ತಪ್ಪಾಗಲಾರದು. ಕೃಷಿರಂಗ ಇಂದು ನಿಂತ ನೀರಿನಂತೆ ಆಗಿದೆ. ಯಾಕೆಂದರೆ ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ ನಡೆಯುವ ಸಂಶೋಧನೆ ಫಲಿತಗಳು ಗ್ರಾಮೀಣ ಜನರಿಗೆ ಮುಟ್ಟುವಲ್ಲಿ ವಿಫಲವಾಗಿವೆ. ಕೃಷಿ ಸಂಶೋಧನೆ ವಿಶ್ವವಿದ್ಯಾನಿಲಯಗಳಲ್ಲಿ ನಿಯಂತ್ರಿತ ಪ್ರಯೋಗಾಲಯಗಳಲ್ಲಿ ಯಶಸ್ವಿಯಾಗಿರಬಹುದು; ಆದರೆ ಅವು ಗ್ರಾಮೀಣ ಪ್ರದೇಶಗಳಿಗೆ ತಲುಪುವಷ್ಟರಲ್ಲಿ ಸಂಶೋಧನೆಗಳ ತಿರುಳೇ ಕರಗಿ ತಿರುಚಲ್ಪಟ್ಟಿರುತ್ತದೆ. ಇದಕ್ಕೋಸ್ಕರವೇ 'ವಿಸ್ತರಣ ವಿಷಯ'ವಿದ್ದರು, ವಿಸ್ತರಣ ತಜ್ಞರು ಸಾಮಾಜಿಕ ಆಲೋಚನೆಗಳಿಲ್ಲದೇ ಇರುವುದರಿಂದ ಕೃಷಿಯ ಹೊಸ ಹೊಸ ಆವಿಷ್ಕಾರಗಳು ಗ್ರಾಮೀಣ ಪ್ರದೇಶ ಮುಟ್ಟುವಷ್ಟರಲ್ಲಿ ವಿಭಿನ್ನ ರೂಪ ತಳೆದಿರುತ್ತವೆ (ಸೋಮಶೇಖರ್, ೨೦೦೪).

ಪ್ರಾಲ್ ಮತ್ತು ಸೋಮಸುಂದರಮ್ (೧೯೬೮) ಹೇಳುವಂತೆ ಮುದ್ರಿತ ವಿಸ್ತರಣಾ ಬೋಧನಾ ಸಾಮಗ್ರಿಗಳು ರೈತರಿಗೆ ಅಷ್ಟಾಗಿ ಉಪಯೋಗಕ್ಕೆ ಬರುವುದಿಲ್ಲ, ಏಕೆಂದರೆ ಕೇವಲ ಕೆಲವು ರೈತರು ಮಾತ್ರ ಸಾಕ್ಷರರು. ಮಿಶ್ರಾರವರ (೧೯೬೯) ಪ್ರಕಾರ ಇಂತಹ ಪ್ರಕಟಣೆಗಳ ಬಳಕೆ ಆಯಾ ರೈತರ ಸಾಕ್ಷರತೆಯ ಹಂತವನ್ನವಲಂಬಿಸಿರುತ್ತದೆ. ಭಾರತದಾದ್ಯಂತ ಶೇ. ೬೦ಕ್ಕಿಂತ ಜಾಸ್ತಿ ಹರಡಿಕೊಂಡಿರುವ ಹಿಡುವಳಿಗಳು ೫ ಹೆಕ್ಟೇರುಗಳಿಗಿಂತ ಕಡಿಮೆ ಪ್ರಮಾಣದ ಹಿಡುವಳಿಗಳು. ಸಣ್ಣ ಹಾಗೂ ಮಧ್ಯಮ ರೈತರು ನಿಕ್ಷಷ್ಥರು, ಪ್ರಾಯೋಗಿಕ ಪ್ರಜ್ಞೆ ಇಲ್ಲದವರು, ಮಾಹಿತಿ ಸಂವಹನಗಳ ಬಗ್ಗೆ ಅರಿವಿಲ್ಲದವರು, ಬಂಡವಾಳವಿಲ್ಲದವರು. ಇದರಿಂದಾಗಿ ಇಂದಿನ ಸಂಶೋಧನೆಗಳು ಶೇ.೬೦ಕ್ಕಿಂತ ಹೆಚ್ಚಿರುವ ಸಣ್ಣಪ್ರಮಾಣದ ರೈತರಿಗೆ ತಲುಪುವಲ್ಲಿ ಸೋತಿದೆ.

ಕಾಮತ್‌ರವರು (೧೯೬೯) ಕೃಷಿ ಪ್ರಕಟಣೆಗಳ ಬಗೆಗೆ ಹೇಳುತ್ತ ಮಾತಿನ ಸಂವಹನೆಗಿಂತ ಪ್ರಕಟಣಾ ಮಾಧ್ಯಮವೇ ಹೆಚ್ಚು ಪರಿಣಾಮಕಾರಿಯಾದುದು ಎಂಬುದನ್ನು ಒತ್ತಿ ಹೇಳುತ್ತಾರೆ. ರೈತರಿಗೆ ಮುದ್ರಿತ ಮಾಧ್ಯಮಗಳು ಆಸಕ್ತಿಯ ಸಲಹಾ ಕಾರ್ಯ ಮಾಡುತ್ತವೆ ಎನ್ನುತ್ತಾರೆ ಅವರು. ಅಲ್ಲದೆ ಅದನ್ನು ಉಳಿಸಿ ಮುಂದೆ ಅವಶ್ಯಕವಾದಾಗಲೆಲ್ಲಾ ಪರಾಮರ್ಶನ ಮಾಡಲು ಹಾಗೂ ಬಿಡುವಿದ್ದಾಗ ಓದಲು ಸಾಧ್ಯವೆಂದು ರೈತರು ಭಾವಿಸುತ್ತಾರೆ ಎನ್ನುತ್ತಾರೆ ಅವರು.

ಸಮೂಹ ಮಾಧ್ಯಮಗಳು ಜನರಲ್ಲಿ ಮಾನಸಿಕ ಸಂಘಟನೆಯನ್ನು ಪ್ರಚೋದಿಸುತ್ತವೆ ಹಾಗೂ ಅವರಲ್ಲಿ ಬದಲಾವಣೆಗಾಗಿ ಪ್ರೇರೇಪಿಸುತ್ತವೆ ಮತ್ತು ಜನರ ಆಸೆ ಆಕಾಂಕ್ಷೆಗಳ ಹಂತವನ್ನು ಔನ್ನತ್ಯಗೊಳಿಸಿ ಅವರನ್ನು ಕ್ರಿಯಾತ್ಮಕಗೊಳಿಸುವ ಪ್ರೇರಕ ಶಕ್ತಿಯಾಗುತ್ತದೆ ಎಂದು ಡೇನಿಯಲ್ ಲೆರ್ನರ್(೧೯೫೮)ರವರು ಹೇಳಿದ್ದಾರೆ.

ಹಲವಾರು ಸಮೂಹ ಮಾಧ್ಯಮಗಳಲ್ಲಿ ವೃತ್ತ ಪತ್ರಿಕೆ ಮಾತ್ರ ಬಹಳ ಸಾಮಾನ್ಯವಾಗಿ ಬಳಸಲ್ಪಡುವ ಮಾಧ್ಯಮವಾಗಿತ್ತು. ಈಗ ಅದರ ಜೊತೆಗೆ ದೂರದರ್ಶನವೂ ಸೇರಿದೆ. ಆದರೆ ಸ್ಥಳೀಕೃತ ಮತ್ತು ವಿಶೇಷ ಮಾಹಿತಿಯನ್ನು ಜನರಿಗೆ ತಲುಪಿಸುವ ಮಾಧ್ಯಮವೆಂದರೆ ವೃತ್ತ ಪತ್ರಿಕೆಯೇ ಆಗಿದೆ. ದೂರದರ್ಶನದಲ್ಲಿ ಬಿತ್ತರವಾಗುವ ಮಾಹಿತಿಗಾಗಿ ರೈತರು ಆ ಸಮಯದಲ್ಲಿ ಬಿಡುವಾಗಿರಬೇಕು ಹಾಗೂ ಅದಕ್ಕಾಗಿ ಅವರು ಕಾಯಬೇಕು. ವೃತ್ತ ಪತ್ರಿಕೆ ಹಾಗಲ್ಲ. ಅವರು ಬಿಡುವಿದ್ದಾಗ ಹಾಗೂ ಬೇಕೆಂದಡೆ ಅದನ್ನು ಓದಬಹುದು.

ಗಜಪತಿ ಮತ್ತು ಅವರ ಸಹ ಅಧ್ಯಯನಕಾರರು ಹೇಳುವಂತೆ (೧೯೭೭), 'ಕೃಷಿ ಉತ್ಪನ್ನ ಹೆಚ್ಚಿಸಲು ರೈತರು ಹೊಸ ವಿಷಯಗಳನ್ನು ಹಾಗೂ ಕೌಶಲ್ಯತೆಗಳನ್ನು ಹಾಗೂ ವಿವಿಧ ಕೃಷಿ ಪರಿಕರಗಳನ್ನು ನಿರ್ವಹಿಸುವುದನ್ನು ಕಲಿಯುತ್ತಲೇ ಇರಬೇಕು. ಆಧುನಿಕ ತಂತ್ರಜ್ಞಾನವನ್ನು ಅತ್ಯುತ್ತಮ ಸಂವಹನ ಕಾರ್ಯತಂತ್ರದೊಂದಿಗೆ ಅತ್ಯಂತ

ಕ್ಷಿಪ್ರವಾಗಿ ಹಾಗೂ ಪ್ರಭಾವಯುತವಾಗಿ ರೈತರಿಗೆ ತಲುಪಿಸಿ, ಅವರು ಅದನ್ನು ಅನುಸರಿಸುವಂತೆ ಅಳವಡಿಸುವ ಅವಶ್ಯಕತೆಯಿದೆ. ಯಾವುದೇ ಸಮಯ ನಷ್ಟವಿಲ್ಲದೆ ಎಲ್ಲ ಹೊಸ ಕೃಷಿ ಆವಿಷ್ಕಾರಗಳನ್ನು ಎಲ್ಲ ವರ್ಗದ ರೈತರಿಗೆ ತಲುಪಿಸಬೇಕಾಗಿದೆ'.

ಫಾಕ್ಸ್(೧೯೫೨)ರವರ ಪ್ರಕಾರ ಕೃಷಿ ಪತ್ರಿಕೋದ್ಯಮದ ಎರಡು ಮುಖ್ಯ ಪಾತ್ರಗಳೆಂದರೆ, (೧) ಕೃಷಿಯ ಹೊಸ ವಿಧಾನಗಳ ಬಗೆಗೆ ಅದು ರೈತರಿಗೆ ಮಾಹಿತಿಕೊಡಬೇಕು ಹಾಗೂ ಅಭಿಶಿಕ್ಷಣ ಒದಗಿಸಬೇಕು ಮತ್ತು (೨) ಕೃಷಿಯನ್ನು ಉಳಿದ ಸಮಾಜಕ್ಕೆ ವಿಶ್ಲೇಷಿಸಿ ವಿವರಿಸಿ ಹೇಳಬೇಕು. ಇದರ ಮೂಲಕ ಪತ್ರಿಕೆಗಳು ಸಂಶೋಧನ ಕೇಂದ್ರಗಳಿಂದ ರೈತರ ಕ್ಷೇತ್ರಗಳಿಗೆ ಕೃಷಿ ತಂತ್ರಜ್ಞಾನವನ್ನು ವರ್ಗಾಯಿಸುವಲ್ಲಿ ಅರ್ಥಪೂರ್ಣ ಪಾತ್ರ ವಹಿಸಬಲ್ಲವು.

'ಸಮುದಾಯ ಸಂವಹನ ಮಾಧ್ಯಮಗಳನ್ನು ಗರಿಷ್ಠ ಪ್ರಮಾಣದಲ್ಲಿ ಬಳಸದೇ ಇದ್ದಲ್ಲಿ ಪೂರ್ಣಪ್ರಮಾಣದ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಯನ್ನು ನಿಮ್ಮ ತಲೆಮಾರಿನಲ್ಲಿ ಅಥವಾ ಮುಂದಿನವರ ತಲೆಮಾರಿನಲ್ಲಿ ಅಥವಾ ಅವರ ಮುಂದಿನ ತಲೆಮಾರಿನಲ್ಲಿ ಕಾಣುವುದು ಸಾಧ್ಯವೇ ಇಲ್ಲ' ಎಂದಿದ್ದಾರೆ ಪ್ರೊ.ಬಿ.ವಿಲಿಯಂ ವಾರ್ಡ್, (೨೦೦೨).

ಕೃಷಿಯ ಲಿಖಿತ ಸಾಹಿತ್ಯ ಬರುವುದಕ್ಕೂ ಮೊದಲು ಕೃಷಿ ಮಾಹಿತಿಯ ಸಂವಹನಕ್ಕಾಗಿ ಕೃಷಿ ಇಲಾಖೆಯ ಅಧಿಕಾರಿಗಳು ಹಳ್ಳಿಗಳಿಗೆ ಭೇಟಿನೀಡಿ, ಸಭೆಗಳನ್ನು ನಡೆಸಿ ಹೊಸ ಕೃಷಿ ವಿಧಾನಗಳನ್ನು ಅನುಸರಿಸುವಂತೆ ಹಳ್ಳಿಗರನ್ನು ಓಲೈಸುತ್ತಿದ್ದರು ಅಥವಾ ಹತ್ತಿರದ ಸರ್ಕಾರಿ ಕೃಷಿಕ್ಷೇತ್ರಗಳಿಗೆ ಭೇಟಿ ನೀಡುವಂತೆ ಆಹ್ವಾನಿಸುತ್ತಿದ್ದರು (ಆರ್.ಜಿ.ಅಲನ್, ೧೯೪೦). ರೈತ ಅನಕ್ಷರಸ್ಥನಾಗಿದ್ದುದರಿಂದ ಆತನಿಗೆ ಅಧಿಕಾರಿಗಳು ಹೇಳುತ್ತಿದ್ದುದರಲ್ಲಿ ಅಥವಾ ತಾನು ತನ್ನ ಹೊಲದಲ್ಲಿ ಅಥವಾ ಇತರರ ಹೊಲಗಳಲ್ಲಿ ಕಣ್ಣಾರೆ ಕಾಣುತ್ತಿದ್ದುದರಲ್ಲಿ ನಂಬಿಕೆ ಇರುತ್ತಿತ್ತು.

ಕ್ಷೇತ್ರ ಭೇಟಿಗಳಿಗೆ ಹೊರಡುವ ಅಂತಹ ಕೃಷಿ ಅಧಿಕಾರಿಗಳ ಸಲಕರಣೆಗಳು ಸಾಮಾನ್ಯವಾಗಿ ಒಂದು ಎತ್ತಿನಗಾಡಿ, ಒಂದು ಜೊತೆ ಎತ್ತುಗಳು, ನೇಗಿಲು ಮತ್ತು ಇತರ ಸಲಕರಣೆಗಳು, ಅವುಗಳ ಪ್ರಾತ್ಯಕ್ಷಿಕೆಗಾಗಿ ವ್ಯಕ್ತಿಯೊಬ್ಬ, ಲಾಟೀನು, ಗ್ರಾಮಾಫೋನ್, ಅಧಿಕಾರಿಗಳ ಉಪಯೋಗಕ್ಕಾಗಿ ಆಯ್ದ ಮಾಹಿತಿ ಪುಸ್ತಕಗಳು, ಪ್ರದರ್ಶನಕ್ಕಾಗಿ ಪೋಸ್ಟರುಗಳು, ಉಚಿತ ವಿತರಣೆಗಾಗಿ ಮಾದರಿ ಬೀಜಗಳು, ಗಂಧಕ, ಅಮೋನಿಯಂ ಸಲ್ಫೇಟ್ ಮುಂತಾದವು ಇರುತ್ತಿದ್ದವು. ಅಂತಹ 'ಮಾಹಿತಿ ಸಂವಹನ' ಗಾಡಿಗಳು ಮೊದಲೇ ರೆವೆನ್ಯೂ ಅಧಿಕಾರಿಗಳ ಮೂಲಕ ಹಳ್ಳಿಗಳಿಗೆ ತಾವು ಬರುವ ವಿಷಯ ತಿಳಿಸಿ ಪೂರ್ವ ನಿರ್ಧಾರಿತ ಹಾದಿಯಲ್ಲಿ ಹೋಗಿಬರುತ್ತಿದ್ದರು. ಪ್ರಮುಖ ಹಳ್ಳಿಗಳಿಗೆ ಭೇಟಿನೀಡಿ ಅಲ್ಲಿ ಕೆಲದಿನಗಳು ಮೊಕ್ಕಾಂ ಹೂಡಿ ರೈತರೊಂದಿಗೆ ಚರ್ಚೆ, ಸಭೆಗಳನ್ನು ನಡೆಸಿ, ಅವರ

ಹೊಲಗದ್ದೆಗಳಿಗೆ ಭೇಟನೀಡಿ ಪ್ರಾತ್ಯಕ್ಷಿಕೆಗಳನ್ನು ನೀಡುತ್ತಿದ್ದರು. ಆ ರೀತಿ ವರ್ಷದಲ್ಲಿ ಸುಮಾರು ಎಂಟು ತಿಂಗಳುಗಳ ಕಾಲ, ಪ್ರತಿ ತಿಂಗಳು ಸುಮಾರು ಹನ್ನೆರಡರಿಂದ ಹದಿಮೂರು ಹಳ್ಳಿಗಳಿಗೆ ಭೇಟ ನೀಡುತ್ತಿದ್ದರು (ಆರ್.ಜೆ.ಅಲನ್, ೧೯೪೦).

ಅರವತ್ತರ ದಶಕದವರೆಗೆ ಪ್ರಕಟವಾಗಿರುವ ಕೃಷಿವಿಜ್ಞಾನ ಸಾಹಿತ್ಯ ಪುಸ್ತಕಗಳು ಸಂಖ್ಯೆಯಲ್ಲಿ ಕಡಮೆ ಹಾಗೂ ಅವು ರೈತರಿಗೆ ಹೊಸತೇನನ್ನೂ ಹೇಳಿಲ್ಲ. ಕೃಷಿ ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ ಹಾಗೂ ಕೃಷಿ ವಿಸ್ತರಣ ತಜ್ಞರಾಗಿರುವ ಡಾ.ಆರ್.ದ್ವಾರಕೀನಾಥ್‌ರವರು ಐವತ್ತರ ದಶಕದಲ್ಲಿ ಕ್ಷೇತ್ರ ಮಟ್ಟದಲ್ಲಿ ರೈತರೊಂದಿಗೆ ವ್ಯವಹರಿಸುವಾಗ ಅವರಿಗೆ ತಿಳಿಹೇಳಲು ನೀರಾವರಿ, ಉತ್ತಮ ಬೇಸಾಯದ ಪದ್ಧತಿಗಳು ಹಾಗೂ ಉತ್ತಮ ಬಿತ್ತನೆಯ ಹೊರತಾಗಿ ಹೊಸತೇನೂ ಇರುತ್ತಿರಲಿಲ್ಲವೆಂದು ಹೇಳಿದ್ದಾರೆ (ದ್ವಾರಕೀನಾಥ್, ೨೦೦೦). ಆ ಸಮಯದಲ್ಲಿ ಪ್ರಕಟವಾಗಿರುವ ಕೆಲವು ಕೃತಿಗಳ ವಿಷಯಗಳು **ಪಶುಪಾಲನೆ** (ಲೇ: ಕೃಷ್ಣಶಾಸ್ತ್ರಿ, ೧೯೪೪), **ಗೊಬ್ಬರ** (ಹಿತ್ತಲಮನಿ, ೧೯೪೭), **ವ್ಯವಸಾಯದ ಮಣ್ಣುಗಳು** (ಕೂರಪಾಡು ಗುಂಡಪ್ಪ, ೧೯೫೮) ಮುಂತಾದುವು. ಆ ಸಮಯದ ಇನ್ನೂ ಹೆಚ್ಚಿನ ಕೃತಿಗಳನ್ನು ಕೋಷ್ಟಕ ೩ರಲ್ಲಿ ಕೊಡಲಾಗಿದೆ.

### ೨.೩.೩. ಆಧುನಿಕ ಕೃಷಿ ಮತ್ತು ಕೃಷಿವಿಜ್ಞಾನ ಸಾಹಿತ್ಯ

ಜನಸಂಖ್ಯೆಯ ಹೆಚ್ಚಳ ಹಾಗೂ ಆಹಾರೋತ್ಪಾದನೆಯನ್ನು ಸರಿದೂಗಿಸುವ ಜಾಗತಿಕ ಪ್ರಯತ್ನಗಳು ನಿರಂತರವಾಗಿ ನಡೆಯುತ್ತಲೇ ಇವೆ. ಭಾರತದ ಸ್ವಾತಂತ್ರ್ಯೋತ್ತರದ ಮೊದಲ ವರ್ಷಗಳಲ್ಲಿ ಆಹಾರ ಧಾನ್ಯಗಳ ತೀವ್ರ ಕೊರತೆ ಕಾಡತೊಡಗಿತು. ಭಾರತ ತೀವ್ರ ಕ್ಷಾಮ ಎದುರಿಸಬೇಕಾಗಬಹುದೆಂಬ ಭೀತಿ ಸರ್ಕಾರವನ್ನು ಕಾಡತೊಡಗಿತು. ಅದರಿಂದಾಗಿ ಆಹಾರ ಧಾನ್ಯಗಳ ಉತ್ಪಾದನೆ ಹೆಚ್ಚಿಸಲು ಸರ್ಕಾರ ಸಮಗ್ರ ವಿಧಾನಗಳ ಹಲವಾರು ಕಾರ್ಯಕ್ರಮಗಳನ್ನು ಕೈಗೊಂಡಿತು. ಇದರಲ್ಲಿ ಬೇಸಾಯದ ವಿಧಾನಗಳ ಆಧುನೀಕರಣವೂ ಒಂದು. ಭಾರತೀಯ ರೈತ ಜೀವನಾಧಾರದ ಕೃಷಿಯಿಂದ 'ಹೆಚ್ಚುವರಿ ಕೃಷಿ' ನಡೆಸಬೇಕಾದ ಅನಿವಾರ್ಯ ಸಂದರ್ಭ ಬಂದೊದಗಿತು. ಅಧಿಕ ಇಳುವರಿ ತಳಿಗಳು, ರಸಗೊಬ್ಬರಗಳು ಹಾಗೂ ಕೀಟ ಮತ್ತು ರೋಗನಾಶಕ ರಾಸಾಯನಿಕಗಳನ್ನು ಬಳಸಿ ಹೆಚ್ಚಿನ ಇಳುವರಿ ಪಡೆಯಬಹುದೆನ್ನುವ ತರ್ಕದಿಂದ 'ಆಧುನಿಕ' ಕೃಷಿ ಪದ್ಧತಿಗಳನ್ನು ಬಿರುಸಿನಿಂದ ಜಾರಿಗೆ ತರಲಾಯಿತು. ಈ ಕಾರ್ಯಕ್ರಮದನ್ವಯ ೧೯೬೩ರಲ್ಲಿ ಭಾರತ ಸರ್ಕಾರ ಮೆಕ್ಸಿಕೋದಿಂದ ೨೫೦ ಟನ್ ಅಧಿಕ ಇಳುವರಿ ತಳಿಯ ಬಿತ್ತನೆ ಬೀಜಗಳನ್ನು ಆಮದುಮಾಡಿಕೊಂಡಿತು (ಬ್ರೆಟ್ ವಲ್ಲಾಚ್, ೧೯೯೬). ಇದೇ ರೀತಿ ಮುಂದೆಯೂ ಭಾರತ ಬಿತ್ತನೆ ಬೀಜಗಳನ್ನು ಆಮದು ಮಾಡಿಕೊಳ್ಳುವ ಅವಶ್ಯಕತೆ ಬರಲಿಲ್ಲ. ತನ್ನದೇ ತಳಿ ಸಂವರ್ಧನಾ

ಕಾರ್ಯಕ್ರಮಗಳಿಂದ ಬಿತ್ತನೆ ಬೀಜದ ಉತ್ಪಾದನೆ ತಾನೇ ಮಾಡಿಕೊಳ್ಳತೊಡಗಿತು. ಸಾಂಪ್ರದಾಯಿಕ ವಿಧಾನಗಳಲ್ಲಿ ನೂರಾರು ವರ್ಷಗಳಿಂದ ಬೇಸಾಯಮಾಡಿಕೊಂಡು ಬಂದಿದ್ದ ರೈತರು ಆಧುನಿಕ ವಿಧಾನಗಳಿಗೆ ವರ್ಗಾಯಿಸಿಕೊಳ್ಳಬೇಕಾಯಿತು.

ಹಸಿರು ಕ್ರಾಂತಿಯ ಪ್ರಾರಂಭವು ಕೃಷಿ ಸಂವಹನೆಗೆ ಹೆಚ್ಚು ಒತ್ತು ಕೊಟ್ಟಿತು. ಸಂವಹನೆಯ ವಿಧಾನ ಮತ್ತು ಧ್ಯೇಯೋದ್ದೇಶಗಳು ಆಧುನಿಕ ಕೃಷಿಯ ಆದ್ಯತೆಗಳನುಸಾರ ಬದಲಾಗುತ್ತಾ ಹೋಯಿತು. ಕೃಷಿ ವಿಸ್ತರಣ ತತ್ವಗಳ ತಳಹದಿಯ ಮೇಲೆಯೇ ಕೃಷಿ ಸಾಹಿತ್ಯ ರಚನೆ ಮತ್ತು ಕೃಷಿ ಪತ್ರಿಕೋದ್ಯಮ ಬೆಳೆಯುತ್ತಾ ಹೋಯಿತು. ಕಳೆದ ಶತಮಾನದ ಐದನೇ ದಶಕದ ಈ ಸಂದಿಗ್ಧ ಹಂತದಲ್ಲಿ ಕೃಷಿ ಸಂವಹನೆ ಒಂದು ಸಾಂಸ್ಥಿಕ ರೂಪ ತಳೆಯಿತು (ವಿಠಲ, ೨೦೦೨). ಆದರೂ ವಿಸ್ತರಣೆ ಮತ್ತು ಕೃಷಿ ಸಾಹಿತ್ಯ ರಚನೆ ಅಥವಾ ಕೃಷಿ ಪತ್ರಿಕೋದ್ಯಮಗಳ ನಡುವೆ ಅಂತರಸಂಬಂಧಗಳ ಸಮಗ್ರತೆ ಏರ್ಪಡಲಿಲ್ಲವಾದುದರಿಂದ ಕೃಷಿ ಪತ್ರಿಕೋದ್ಯಮ ಹಲವಾರು ವರ್ಷಗಳ ಕಾಲ ಮಡುಗಟ್ಟಿದ ನೀರಿನಂತಾಗಿತ್ತು (ಶಿವರಾಂ ಪೈಲೂರು, ೨೦೦೫).

ಕೃಷಿ ಸಂವಹನೆಯ ಅವಶ್ಯಕತೆಯ ಬಗೆಗೆ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಮೊಟ್ಟಮೊದಲ ಕುಲಪತಿಗಳಾದ ಡಾ.ಕೆ.ಸಿ.ನಾಯಕ್ 'ಆಧುನಿಕ ವ್ಯವಸಾಯ' (ಗೊದ್ದು ವೀರೇಶ್, ೧೯೭೧) ಪುಸ್ತಕದ ಮುನ್ನುಡಿಯಲ್ಲಿ ಇಂದಿನ ಯಾಂತ್ರಿಕ ಬೇಸಾಯದ ತಳಹದಿಯ ಮೇಲೆ ಭಾರತದ ಬೇಸಾಯ ಪದ್ಧತಿಯನ್ನು ಬದಲಿಸಬೇಕಾದರೆ ಬೇಸಾಯಗಾರ ಮತ್ತು ಜನ ಸಾಮಾನ್ಯರಲ್ಲಿ ಆ ಬಗ್ಗೆ ತಿಳಿವಳಿಕೆ ಬೆಳೆಸುವುದು ಬಹಳ ಮುಖ್ಯ, ಆದುದರಿಂದ ಆಧುನಿಕ ಬೇಸಾಯದ ವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರು ಪೇಟೆ ಪಟ್ಟಣಗಳ ಹಾಗೂ ಹಳ್ಳಿಗಾಡುಗಳ ಜನರಿಗೆ ವಿವರಿಸಿ ಹೇಳುವುದು ಅವರ ಕರ್ತವ್ಯವೆಂದು ಹೇಳಿದ್ದಾರೆ.

ಅದರಂತೆ ಅರವತ್ತರ ದಶಕದ ಕೊನೆಯಿಂದ ಪ್ರಕಟವಾದ ಸಾಹಿತ್ಯದಲ್ಲಿ ಕೃಷಿವಿಜ್ಞಾನ ಹೊಸರೂಪ ಪಡೆಯುತೊಡಗಿದ್ದನ್ನು ಸ್ಫುಟವಾಗಿ ಕಾಣಬಹುದು. ಕೆಲವು ಉದಾಹರಣೆಗಳೆಂದರೆ, **ಸಸ್ಯ ಸಂರಕ್ಷಣೆ,** (ಚಿನ್ನಸ್ವಾಮಿ ರೆಡ್ಡಿ, ೧೯೬೭), **ಅಧಿಕ ಉತ್ಪಾದನೆಗಾಗಿ ಮಿಶ್ರತಳಿ ಬೆಳೆಗಳು** (ಕಲ್ಯಾಣಿಮಠ, ೧೯೬೮), **ಮೆಕ್ಸಿಕನ್ ಗೋಧಿ** (ಹನುಮಂತಪ್ಪ, ೧೯೭೩), **ಸಂಕರಣ ಜೋಳ** (ಕಿತ್ತೂರ್, ೧೯೭೩), ಮುಂತಾದುವು. ಆ ಸಮಯದ ಕೆಲವು ಪ್ರಕಟಣೆಗಳನ್ನು ಕೋಷ್ಟಕ ೪ರಲ್ಲಿ ನೀಡಲಾಗಿದೆ.

೧೯೬೮ರಲ್ಲಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯವು ಉಪನ್ಯಾಸ ಗ್ರಂಥಮಾಲೆಯಡಿ ಪ್ರಕಟಿಸಿರುವ **ಅಧಿಕ ಉತ್ಪಾದನೆಗಾಗಿ ಮಿಶ್ರತಳಿ ಬೆಳೆಗಳು** ಕೃತಿಯ ಅರಿಕೆಯಲ್ಲಿ,

**'ಮಿಶ್ರತಳಿಯ ವ್ಯವಸಾಯ ನಮ್ಮ ದೇಶಕ್ಕೆ ತೀರ ಹೊಸದಾದ ವಿಷಯ. ಜನಸಾಮಾನ್ಯರಲ್ಲಿ ಮತ್ತು ರೈತರಲ್ಲಿ ಮಿಶ್ರ ತಳಿಗಳನ್ನು ಬೆಳೆದು ಹೆಚ್ಚು ಉತ್ಪಾದನೆಯನ್ನು ಮತ್ತು ಲಾಭವನ್ನು ಪಡೆಯುವ ಹಂಬಲ ಪ್ರಬಲವಾಗಿದೆ. ಇಂಥ ರೈತರಿಗೆ ಆವಶ್ಯಕವಾದ ತಾಂತ್ರಿಕ ಜ್ಞಾನ ಮತ್ತು ಸೂಕ್ತ ಸಲಹೆ ಸೂಚನೆಗಳ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಮಾಡಿಕೊಡುವುದು ಅವಶ್ಯವೆನಿಸುತ್ತದೆ'.**

ಎಂದಿದ್ದಾರೆ ಲೇಖಕರಾದ ಕಲ್ಯಾಣಿಮಠ, ಎ.ಸಿ.ಯವರು. ಈ ಕೃತಿಯಲ್ಲಿ ಮಿಶ್ರತಳಿಗಳ ಸಂಶೋಧನೆಯ ಕಾರ್ಯವಿವರಣೆ, ಮಿಶ್ರತಳಿ ಬೀಜಗಳ ಉತ್ಪಾದನೆ, ಮಿಶ್ರತಳಿ ಬೀಜಗಳ ವೈಶಿಷ್ಟ್ಯಗಳು, ಸಾಗುವಳಿ ಕ್ರಮಗಳು ಮತ್ತು ಮಿಶ್ರತಳಿ ಬೆಳೆಗಳಿಗಿರುವ ಭವಿತವ್ಯಗಳನ್ನು ವಿವರಿಸಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದ ಇದೇ ಮಾಲಿಕೆಯಡಿ ಪ್ರಕಟವಾಗಿರುವ **ನಮ್ಮ ರೈತರೇಕೆ ಹಿಂದುಳಿದಿದ್ದಾರೆ,** (ಕೊಡ್ಲಿ,ಎಂ.ಸಿ., ೧೯೬೮) ಕೃತಿಯಲ್ಲಿ ರೈತರೇಕೆ ಹಿಂದುಳಿದಿದ್ದಾರೆಂದು ವಿಮರ್ಶಿಸುತ್ತಾ ಹಲವಾರು ಕಾರಣಗಳನ್ನು ಪಟ್ಟಿಮಾಡಿ, ಸಾಮಾಜಿಕ. ಆರ್ಥಿಕ ಕಾರಣಗಳಡಿ ರಾಸಾಯನಿಕ ಗೊಬ್ಬರ, ಸುಧಾರಿಸಿದ ಬೀಜ ಮತ್ತು ಸಸ್ಯಸಂರಕ್ಷಣೆಯ ಬಗ್ಗೆ ಹೆಚ್ಚು ಒತ್ತು ನೀಡುತ್ತಾ ಈ ಮುಂದಿನಂತೆ ಹೇಳಿದೆ:

**ನಮ್ಮ ದೇಶದಲ್ಲಿ ರಾಸಾಯನಿಕ ಗೊಬ್ಬರದ ಉಪಯೋಗ ಬಹಳ ಕಡಿಮೆ ಇದೆ. ಬೇಸಾಯದ ಸುಧಾರಣೆಯಲ್ಲಿ ರಾಸಾಯನಿಕ ಗೊಬ್ಬರದ ಪಾತ್ರ ಮಹತ್ವದ್ದು.... ರಾಸಾಯನಿಕ ಗೊಬ್ಬರದ ಉತ್ಪಾದನೆಯು ನಮ್ಮಲ್ಲಿ ಕಡಿಮೆ ಇದೆ. ಮೂರನೆಯ ಪಂಚವಾರ್ಷಿಕ ಯೋಜನೆಯ ಗುರಿ ೮ ಲಕ್ಷ ಟನ್ ರಾಸಾಯನಿಕ ಗೊಬ್ಬರ ಉತ್ಪಾದಿಸುವದಿತ್ತು. ಆದರೆ ಮೂರನೆಯ ಪಂಚವಾರ್ಷಿಕ ಯೋಜನೆಯ ಕೊನೆಯಲ್ಲಿ ನಮ್ಮ ಉತ್ಪಾದನೆಯು ಕೇವಲ ೩.೯೨ ಲಕ್ಷ ಟನ್ ಮಾತ್ರ ಆಗಿತ್ತು.**

**ನಮ್ಮ ರೈತರೆಲ್ಲರೂ ಸುಧಾರಿಸಿದ ಬೀಜಗಳನ್ನು ಉಪಯೋಗಿಸಿದರೆ ಉತ್ಪಾದನೆಯನ್ನು ನಾವು ಎಷ್ಟೋ ಪಾಲು ಹೆಚ್ಚಿಸಬಹುದು. ಇತ್ತೀಚೆಗೆ ಬಳಕೆಗೆ ಬಂದಿರುವ ಹೈಬ್ರಿಡ್ ಜೋಳದ ಬೀಜಗಳು ಇದಕ್ಕೆ ನಿದರ್ಶನವಾಗಬಲ್ಲವು. ಜೊತೆಗೆ ನಮ್ಮ ರೈತರು ಬೆಳೆಯ ಸುರಕ್ಷಿತತೆಯ ಬಗೆಗೂ ಸಾಕಷ್ಟು ಕಾಳಜಿ ತೆಗೆದುಕೊಳ್ಳಬೇಕು. ಪ್ರತಿ ವರುಷವೂ ಮಿಡತೆ, ಇಲಿಗಳು ಮತ್ತು ಅನೇಕ ರೋಗಗಳಿಂದ ಬೆಳೆಗಳು ವಿಪರೀತ ನಾಶವಾಗುತ್ತವೆ. ಆದ್ದರಿಂದ ಪ್ರತಿಯೊಂದು ಗ್ರಾಮಗಳಲ್ಲಿಯೂ ಕ್ರಿಮಿನಾಶಕ ಔಷಧ ಮತ್ತು ಪಂಪುಗಳು ಇರಬೇಕು.**

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗವು ೧೯೬೮ರಲ್ಲಿ ಕೃಷಿ ಸಂವಹನೆಯ ಪ್ರಾಮುಖ್ಯತೆಯನ್ನು ಮನಗಂಡು **Diffusion of Agricultural Innovations,** (Mishra, R.P., 1968) ಎಂಬ ಗ್ರಂಥವನ್ನು ಪ್ರಕಟಿಸಿತು. ರೈತರು ಕೃಷಿ ಉತ್ಪಾದನೆಯಲ್ಲಿ

ನವೀನ ತಾಂತ್ರಿಕತೆಗಳನ್ನು ಅಳವಡಿಸಿಕೊಳ್ಳದಿದ್ದಲ್ಲಿ ಆಹಾರ ಸಮಸ್ಯೆಗೆ ಪರಿಹಾರವೇ ಇಲ್ಲ. ಆದುದರಿಂದ ಕೃಷಿ ಸಂವಹನೆಯು ಅತ್ಯಂತ ಅವಶ್ಯಕವೆಂದಿದ್ದಾರೆ ಲೇಖಕರು.

The importance of the diffusion of agricultural innovations in a coutry like India needs no emphasis. Unless our farmers have access to the latest techniques of agricultural production, we cannot solve our food problem..... The transformation of a traditional peasant farming into a modern scientific farming involves two processes: 1) Scientific research and technological innovations which may remove obstacles to higher production, and 2) adoption of agricultural innovations by the farmers. We know that we have a band of Indian scientists who are capable of developing innovations which will increase agricultural productivity but, we are not sure that our farmers will readily accept these innovations. In the absence of timely and quick adoption of innovations by out farmers, the efforts of our scientis will go in vain. To ensure that the fruits of scientific research and technological innovations are made use of by millions of our ill-fed, ill-clad and ill-sheltered peasants, we have to isolate the factors which inhibit them from accepting new ideas and innovations. In addition to this we have to understand the processes by which the diffusion of innovations occurs so that we can devise ways and means of accelerating these processes. The present report is a step in that direction.

ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ **ಆಧುನಿಕ ವ್ಯವಸಾಯ**, (ಗೊದ್ದು ವೀರೇಶ್, 1971) ಕೃತಿಯ ಮುನ್ನುಡಿಯಲ್ಲಿ ಕೃಷಿ ವಿಶ್ವವಿದ್ಯಾನಿಲಯದ ಮೊಟ್ಟಮೊದಲ ಕುಲಪತಿಗಳಾದ ಡಾ. ಕೆ.ಸಿ. ನಾಯಕ್‌ರವರು,

**ಇಂದಿನ ಯಾಂತ್ರಿಕ ಬೇಸಾಯದ ತಳಹದಿಯ ಮೇಲೆ ಭಾರತದ ಬೇಸಾಯ ಪದ್ಧತಿಯನ್ನು ಬದಲಿಸಬೇಕಾದರೆ ಬೇಸಾಯಗಾರ ಮತ್ತು ಜನ ಸಾಮಾನ್ಯರಲ್ಲಿ ಆ ಬಗ್ಗೆ ತಿಳಿವಳಿಕೆ ಬೆಳೆಸುವುದು**

**ಬಹಳ ಮುಖ್ಯ ಆಧುನಿಕ ತಾಂತ್ರಿಕ ಬೇಸಾಯದ ತಿಳಿವಳಿಕೆಯನ್ನು ಸಾಮಾನ್ಯ ಬೇಸಾಯಗಾರರಿಗೆ ಒದಗಿಸುವ ಈ ಸಾಹಸದ ಕಾರ್ಯವನ್ನು ಕೀಟಶಾಸ್ತ್ರದ ಉಪ ಪ್ರಾಧ್ಯಾಪಕ ಶ್ರೀ ಗೊದ್ದು ವೀರೇಶ ಅವರು ಮಾಡಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ ಭಾರತದ ಬೇಸಾಯವು ಮಾಡಿರುವ ಪರಿವರ್ತನೆಯನ್ನು ಸುಮಾರು 200 ಪುಟಗಳ ಈ ಪುಸ್ತಕವು ಚಿತ್ರಿಸುತ್ತದೆ. ಜ್ಞಾನದ ಆಸ್ಫೋಟ ಮತ್ತು ಅದ್ಭುತ ವೈಜ್ಞಾನಿಕ ಹಾಗೂ ತಾಂತ್ರಿಕ ಪ್ರಗತಿಯ ಈ ದಿವಸಗಳಲ್ಲಿ ಜನಸಾಮಾನ್ಯರಿಗೆ ಅವುಗಳೊಡನೆ ಹೆಜ್ಜೆಯಿಟ್ಟು ಸಾಗುವುದು ಸುಲಭವಾಗಿಲ್ಲ. ನೋಬೆಲ್ ಪಾರಿತೋಷಕ ವಿಜೇತ ಡಾ. ಬೋರ್ಲಾಗ್ ಮತ್ತು ಫಿಲಿಪ್ಪಾಯಿನ್ಸ್ ಅಂತರರಾಷ್ಟ್ರೀಯ ಭತ್ತ ಸಂಶೋಧನ ಸಂಸ್ಥೆಯ ಡಾ. ಚಾಂಡ್ಲರರು ಆಧುನಿಕ ಯಂತ್ರ ತಂತ್ರ ವಿಜ್ಞಾನಗಳ ಸಹಾಯದಿಂದ ಬೇಸಾಯದ ಹುಟ್ಟುವಳಿಯಲ್ಲಿ ಭಾರೀ ದೊಡ್ಡ ಬದಲಾವಣೆಯನ್ನು ತರಲು ಶಕ್ಯವೆಂದಿರುವವರು. ಆದುದರಿಂದ ಆಧುನಿಕ ಬೇಸಾಯದ ವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರು ಪೇಟೆ ಪಟ್ಟಣಗಳ ಹಾಗೂ ಹಳ್ಳಿಗಾಡುಗಳ ಜನರಿಗೆ ವಿವರಿಸಿ ಹೇಳುವುದು ಅವರ ಕರ್ತವ್ಯ**

ಎಂದಿದ್ದಾರೆ. ಲೇಖಕರ ಮಾತಿನಲ್ಲಿಯೂ ಸಹ ಬದಲಾಗುತ್ತಿರುವ ಕೃಷಿ ವಿಧಾನಗಳ ಚಿತ್ರಣ ಮತ್ತು ಅದಕ್ಕಾಗಿ ಅವಶ್ಯಕವಿರುವ ಕೃಷಿ ಸಂವಹನೆಯ ಪ್ರಾಮುಖ್ಯತೆ ಕಂಡುಬರುತ್ತದೆ:

**ಕಳೆದ ಒಂದು ದಶಕದಿಂದ ಪ್ರಪಂಚದ ಹಿಂದುಳಿದ ರಾಷ್ಟ್ರಗಳು ಆಹಾರ ಸ್ವಾವಲಂಬನೆಗೆ ಬಹಳ ಹೋರಾಡುತ್ತಿವೆ. ಇದರಲ್ಲಿ ಭಾರತದ ಪಾತ್ರ ಬಹಳ ಮಹತ್ವವಾದದ್ದು. ಕಳೆದ ಎರಡು ದಶಕಗಳಲ್ಲಿ ನಮ್ಮ ಆಹರ ಉತ್ಪಾದನೆಯನ್ನು ದ್ವಿಗುಣಗೊಳಿಸಿದ್ದರೂ, ಪ್ರತಿ ವರ್ಷದ ಹೆಚ್ಚಿನ ಅಹಾರ ಉತ್ಪನ್ನ ಶೇ. 2.5ರಷ್ಟೇ ಇದೆ. ಕನಿಷ್ಟ ಶೇ. 5ರಷ್ಟಕ್ಕೆ ಪ್ರತಿ ವರ್ಷ ಆಹಾರ ಉತ್ಪನ್ನ ಹೆಚ್ಚಿಸದಿದ್ದರೆ, ಆಹಾರ ಸ್ವಯಂಪೂರ್ಣತೆ ಪಡೆಯುವುದು ಕಷ್ಟವಾಗುವುದು. ಕಳೆದ ನಾಲ್ಕೈದು ವರ್ಷಗಳಲ್ಲಿ ಈ ಗುರಿಯನ್ನು ಸಾಧಿಸುವ ಚಿಹ್ನೆಗಳು ಕಂಡುಬರುತ್ತಿವೆ. ಈ ದಶಕದಲ್ಲಿ ನಡೆದ ಕೃಷಿರಂಗದ ಪ್ರಗತಿಯನ್ನು ಹಸಿರುಕ್ರಾಂತಿಯೆಂದು ಕರೆಯಲಾಯಿತು. ಇದ್ದಕ್ಕಿದ್ದಂತೆಯೇ ಎಲ್ಲೆಲ್ಲೂ ರೈತರಲ್ಲಿ ಒಂದು ಹೊಸ ಚೈತನ್ಯ ಮೂಡಿ, ಅಧಿಕ ಫಸಲು ತೆಗೆಯುವ ಕೂಗು ಕೇಳಿಬರುತ್ತಿದೆ. ಹಿಂದೆಂದೂ ಇಲ್ಲದ ಈ ಹುಮ್ಮಸ್ಸು ಈಗ ಬರುವುದಕ್ಕೆ ಸಹಾಯವಾದ ಕೆಲವು ಅಂಶಗಳನ್ನು ಮನವರಿಕೆ ಮಾಡಿಕೊಡಬೇಕೆಂದಿರುವುದೇ ಈ ಪುಸ್ತಕದ ಮುಖ್ಯ ಉದ್ದೇಶವಾಗಿದೆ.**

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಂಗವು ರೈತರಿಗಾಗಿಯೇ ಪ್ರಕಟಿಸಿದ ಮೊಟ್ಟಮೊದಲ ಬೃಹದ್ಗ್ರಂಥ **ವ್ಯವಸಾಯ ಕೈಪಿಡಿ** (ಕುವೆಂಪು [ಪ್ರ.ಸಂ.] ೧೯೭೨). ೮೮೮ ಪುಟಗಳ ಈ ಗ್ರಂಥಕ್ಕೆ ಪ್ರಧಾನ ಸಂಪಾದಕರಾಗಿದ್ದ ಕುವೆಂಪುರವರು ಸಹ ತಮ್ಮ ಮುನ್ನುಡಿಯಲ್ಲಿ ಅಧಿಕ ಕೃಷಿ ಉತ್ಪಾದನೆಗೆ ಆಧುನಿಕ ಪದ್ಧತಿ ಮತ್ತು ಅಧಿಕ ಇಳುವರಿ ಕೊಡಬಲ್ಲ ತಳಿಗಳ ಬಳಕೆ ಮುಖ್ಯ. ರೈತರಿಗೆ ಈ ಮುಖ್ಯಾಂಶಗಳ ಅರಿವಿರದಿದ್ದರೆ ಇದು ಸಾಧ್ಯವಿಲ್ಲವೆಂದು ಹೇಳುತ್ತ ಈ ರೀತಿ ಹೇಳಿದ್ದಾರೆ:

ತೀವ್ರಗತಿಯಲ್ಲಿ ಹೆಚ್ಚುತ್ತಿರುವ ರಾಜ್ಯದ ಜನತೆಗೆ ಅಗತ್ಯವಾದ ಆಹಾರವನ್ನು ಹೆಚ್ಚು ಹೆಚ್ಚಾಗಿ ಬೆಳೆಸುವುದು ಅತ್ಯಾವಶ್ಯಕ. ವ್ಯವಸಾಯ ಯೋಗ್ಯ ಭೂ ವಿಸ್ತೀರ್ಣಕ್ಕೆ ಮಿತಿಯಿದೆ. ಆದ್ದರಿಂದ ಇರುವ ಭೂ ಪ್ರದೇಶದಲ್ಲೇ ಹೆಚ್ಚು ಉತ್ಪತ್ತಿ ಪಡೆಯಬೇಕು. ಇದಕ್ಕೆ ಆಧುನಿಕ ಪದ್ಧತಿ ಮತ್ತು ಅಧಿಕ ಇಳುವರಿ ಕೊಡಬಲ್ಲ ತಳಿಗಳ ಬಳಕೆ ಮುಖ್ಯ ರೈತರಿಗೆ ಈ ಮುಖ್ಯಾಂಶಗಳ ಅರಿವಿರದಿದ್ದರೆ ಇದು ಸಾಧ್ಯವಿಲ್ಲ.... ವೈಜ್ಞಾನಿಕ ಸಂಶೋಧನೆ ಅತಿವೇಗವಾಗಿ ಮುಂದುವರಿಯುತ್ತಿದೆ. ಇದರಿಂದ ಇಂದಿನ ನವೀನ ತಳಿ ಅಥವ ಪದ್ಧತಿ ನಾಳೆ ಹಳತಾಗಬಹುದು. ಚಂದ್ರಲೋಕವನ್ನು ಮುಟ್ಟಿ, ಮೆಟ್ಟಿ, ವಾಸಿಸಲು ಪ್ರಯತ್ನಿಸುತ್ತಿರುವ ಕಾಲವಿದು. ಆದ್ದರಿಂದ ಮೂಲಾಂಶಗಳನ್ನು ಅರಿತಿದ್ದಲ್ಲಿ ಸಂಶೋಧನೆಯ ಫಲವನ್ನು ತಿಳಿಯುವುದು ಸುಲಭ. ಈ ಪುಸ್ತಕದಲ್ಲಿ ಸಾಮಾನ್ಯ ರೈತರಿಗೆ ಅನುಕೂಲವಾಗುವಂತಹ ಅಂಶವೆಲ್ಲವನ್ನೂ ವಿವರಿಸಲು ಪ್ರಯತ್ನಿಸಲಾಗಿದೆ.

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯವು ಪ್ರಕಟಿಸಿದ **ಮೈಸೂರು ರಾಜ್ಯದಲ್ಲಿ ಕೃಷಿ** (ಹಿತ್ತಲಮನಿ, ವಿ.ಸಿ. [ಸಂ], ೧೯೭೩)ಯ ಮುನ್ನುಡಿಯಲ್ಲಿ

ಸಂಪ್ರದಾಯಬದ್ಧ ಕೃಷಿಯ ಉತ್ಪನ್ನ ತೀರ ಕನಿಷ್ಠ. ತಲೆಮಾರಿನಿಂದ ಬಂದ ಬೇಸಾಯ ಪದ್ಧತಿಗಳೇ ಕೃಷಿ ಉದ್ಯಮಕ್ಕೆ ಆಧಾರ. ಮರದ ನೇಗಿಲು; ಅದರ ಮುಂದೆ ನಿಶ್ಶಕ್ತ ಎತ್ತುಗಳು; ಹಿಂದೆ ಅವುಗಳನ್ನು ಹೊಡೆಯುತ್ತಿರುವ ಬಡಕಲು, ಅರೆ ಬೆತ್ತಲೆ ರೈತ! ಇದು ನಮ್ಮ ಬೇಸಾಯದ ಸಂಕೇತ. ಪ್ರಪಂಚದ ಇತರೆಡೆ ಅಗಾಧ ಪ್ರಗತಿಯಾಗಿರುವಾಗ ನಮ್ಮಲ್ಲಿ ಕೃಷಿಪ್ರಧಾನ ಅಂಗಗಳಾದ ಉಳುಮೆ, ಬಿತ್ತನೆ, ಕಟಾವು, ಒಕ್ಕಣೆ, ತೂರುವುದು, ಶೇಖರಣೆ, ಕೊನೆಯದಾಗಿ ಧಾನ್ಯ ಸಾಗಾಣಿಕೆ ಇವೆಲ್ಲಾ ಹಿಂದಿದ್ದಂತೆಯೇ, ಸಾಮಾನ್ಯವಾಗಿ ನಡೆಯುತ್ತಾ ಬಂದಿದೆ. ವಿಶ್ವದ ಇತರ ಮುಂದುವರಿದ ದೇಶಗಳಲ್ಲಿ ಕೃಷಿ, ವೈಜ್ಞಾನಿಕ ಕ್ರಮಗಳ ಅಳವಡಿಕೆಯಿಂದ ಅಪಾರ ಪ್ರಗತಿ ಸಾಧಿಸಿದೆ. ಆಧುನಿಕ ಕೃಷಿ ಅನುಷ್ಠಾನಕ್ಕೆ ರೈತನ ಅರಿವಿನ ಮಟ್ಟ ಸಾಕಷ್ಟು ಹೆಚ್ಚಿರಬೇಕು. ಅವನಿಗೆ ವಿವಿಧ ಹಂತಗಳಲ್ಲಿ ಅಳವಡಿಸುವ ನೂತನ ಕ್ರಮಗಳ ಆಗುಹೋಗುಗಳ ಪ್ರಜ್ಞೆ ಅವಶ್ಯಕ. ರೈತನಿಗೆ ಈ ದಿಕ್ಕಿನಲ್ಲಿ ಅರಿವು ಉಂಟುಮಾಡುವ ಕಾರ್ಯಕ್ರಮ ಅವ್ಯಾಹತವಾಗಿ ನಡೆಯುತ್ತಿರಬೇಕು. ಕೃಷಿಗೆ ವಿಜ್ಞಾನ ನೀಡುವ ಕೊಡಿಗೆಯ ಅರಿವೂ ರೈತನಿಗೆ ಸದಾ ಇರಬೇಕು

ಎಂದು ಹೇಳಿದೆ. ಈ ರೀತಿಯ ಕೃಷಿಗೆ ವಿಜ್ಞಾನ ಕೊಡುವ ಕೊಡುಗೆ ಯಾವ ರೀತಿಯಲ್ಲಿರಬೇಕೆಂಬುದನ್ನು ಡಾ. ಆರ್. ದ್ವಾರಕೀನಾಥ್‌ರವರು **ಆಧುನಿಕ ಬೇಸಾಯ ಪ್ರಶ್ನೆ–ಪರಿಹಾರ** (ಭಾಗ–೧)ರ (ಶೇಷಾದ್ರಿ ಅಯ್ಯರ್.ಅ. ಹಾಗೂ ಇತರರು, ೧೯೭೩), ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ:

ನಮ್ಮ ಬೇಸಾಯದಲ್ಲಿ ಇದು ಒಂದು ಪರ್ವ ಕಾಲ. ಸಾಂಪ್ರದಾಯಕ ಬೇಸಾಯವು ಸ್ವಲ್ಪ ಸ್ವಲ್ಪವಾಗಿ ಬದಲಾವಣೆ ಹೊಂದಿ ವಾಣಿಜ್ಯ ಬೇಸಾಯವಾಗಿ ರೂಪುಗೊಳ್ಳುತ್ತಿದೆ. ಹೀಗೆ ವ್ಯವಸಾಯ, ರೂಪಾಂತರವನ್ನು ಹೊಂದುವಾಗ ಅನೇಕ ಹೊಸ ವಿಚಾರಗಳನ್ನು

**ಅಳವಡಿಸಿಕೊಳ್ಳಬೇಕಾಗುತ್ತದೆ. ಇವುಗಳಲ್ಲಿ ಇತ್ತೀಚೆಗೆ ದೊರೆಯುತ್ತಿರುವ ತಾಂತ್ರಿಕ ಜ್ಞಾನವು ಒಂದು ಮುಖ್ಯ ಅಂಶ'. ಕೃಷಿ ಸಂಶೋಧನಾ ಕ್ಷೇತ್ರಗಳಲ್ಲಿ ನಡೆಯುತ್ತಿರುವ ಪರೀಕ್ಷೆಗಳ ದೆಸೆಯಿಂದ ಅನೇಕ ಹೊಸ ವಿಚಾರಗಳು ಹೊರಬೀಳುತ್ತಿರುತ್ತವೆ. ಈ ವಿಚಾರಗಳು ಸರಳವೂ, ಸುಲಭವೂ ಆದ ರೀತಿಯಲ್ಲಿ ನಮ್ಮ ರೈತರಿಗೆ ದೊರಕಬೇಕಾಗಿದೆ.**

ಇದೇ ಸಮಯದಲ್ಲಿ ಮೈಸೂರಿನ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಹಲವಾರು ಕಿರುಹೊತ್ತಿಗೆಗಳನ್ನು ಪ್ರಕಟಿಸಿತು. ವಯಸ್ಕರ ಶಿಕ್ಷಣ ಗ್ರಾಮೀಣ ಜನರನ್ನು ಉದ್ದೇಶಿಸಿಯೇ ಇದ್ದುದರಿಂದ ಹಾಗೂ ಗ್ರಾಮೀಣ ಜನರೆಲ್ಲರೂ ಬಹುಪಾಲು ರೈತರೇ ಆಗಿರುವುದರಿಂದ ಈ ವಯಸ್ಕರ ಶಿಕ್ಷಣ ಸಾಹಿತ್ಯದಲ್ಲೂ ಕೃಷಿ ವಿಚಾರಗಳನ್ನು ಪ್ರಕಟಿಸಲಾಗುತ್ತಿತ್ತು. ರಾಜ್ಯ ವಯುಸ್ಕರ ಶಿಕ್ಷಣ ಸಮಿತಿ ಪ್ರಕಟಿಸಿದ ಕೆಲವು ಕೃಷಿ ಪ್ರಕಟಣೆಗಳ ಕೆಲವು ಉದಾಹರಣೆಗಳೆಂದರೆ, **ಬೆಳೆ ತಂದ ಭಾಗ್ಯ** (ವಿಜಯೇಂದ್ರ ಮೂರ್ತಿ, ೧೯೭೨), **ಮೆಕ್ಸಿಕನ್ ಗೋಧಿ** (ಹನುಮಂತಪ್ಪ, ೧೯೭೩), **ಹೊಸ ಬಿತ್ತನೆ–ಹೆಚ್ಚು ಲಾಭ 'ಪೂರ್ಣರಾಗಿ'**, (ಶ್ರೀರಂಗರಾಜು, ೧೯೭೩), **ಸಂಕರಣ ಜೋಳ** (ಕಿತ್ತೂರ್, ೧೯೭೩) ಮುಂತಾದುವು.ಈ ರೀತಿಯ ಕೆಲವು ಪ್ರಮುಖ ಪ್ರಕಟಣೆಗಳನ್ನು ಕೋಷ್ಟಕ ೩ರಲ್ಲಿ ಕೊಡಲಾಗಿದೆ.

ಕೃಷಿಯ ಹೊಸ ವಿಚಾರಗಳನ್ನು ಈ ಸಾಹಿತ್ಯದ ಮೂಲಕ ರೈತರಿಗೆ ತಲುಪಿಸುವುದು ಹೆಚ್ಚು ಸೂಕ್ತವಾಗಿ ಕಂಡಿರಬೇಕು. **ಮೆಕ್ಸಿಕನ್ ಗೋಧಿ**(ಹನುಮಂತಪ್ಪ, ಪಿ., ೧೯೭೩)ಯಲ್ಲಿನ ಈ ಮುಂದಿನ ಪ್ರಹಸನ ಈ ಉದ್ದೇಶವನ್ನು ಸ್ಫುಟಪಡಿಸುತ್ತದೆ:

ಪ್ರಹಸನ ೧:

**ಮಾನಪ್ಪ: ಅಬ್ಬಾ! ಇದು ಎಷ್ಟು ಅಬ್ಬರವಾಗಿ ಬೆಳೆದಿದೆ? ಇದರ ಬೆಳೆಯೇ ಹೀಗೇನಾ? ಈ ಬೀಜವು ನಿನಗೆ ಎಲ್ಲಿ ದೊರೆಯಿತು?**

**ಪರಸಪ್ಪ: ಇದು ಮೆಕ್ಸಿಕನ್ ಜಾತಿ, ಪರದೇಶದ ಬೀಜ. ಇದರ ತೌರು ಮನೆ ಅಮೇರಿಕಾ ದೇಶದ ಮೆಕ್ಸಿಕೊ. ಆದ್ದರಿಂದ ಇದನ್ನು ಮೆಕ್ಸಿಕನ್ ಗೋಧಿ ಎಂದು ಕರೆಯುತ್ತಾರೆ. ಇದರ ಬಿತ್ತನೆ ಬೀಜವನ್ನು ಸೊಸಾಯಿಟಿಯಿಂದ ತಂದೆ.**

**ಮಾನಪ್ಪ: ಇದು ನಮ್ಮ ನಾಡ ಗೋಧಿಗಿಂತಲೂ ಹೆಚ್ಚು ಇಳುವರಿ ಕೊಡುವುದೇನು?**

**ಪರಸಪ್ಪ: ಹೌದು, ಮೆಕ್ಸಿಕನ್ ಜಾತಿ ನಮ್ಮ ನಾಡ ಗೋಧಿಗಿಂತಲೂ ಹೆಚ್ಚು ಇಳುವರಿ ಕೊಡುತ್ತದೆ.**

**ಮಾನಪ್ಪ: ಮೆಕ್ಸಿಕನ್ ಗೋಧಿಯನ್ನು ಎಲ್ಲರೂ ಬೆಳೆಯಬಹುದೆ?**

**ಪರಸಪ್ಪ: ಯಾರಾದರೂ ಬೆಳೆಯಬಹುದು. ಆದರೆ ಬೇಸಾಯ ಕ್ರಮವನ್ನು ಮಾತ್ರ ತಿಳಿದಿರಬೇಕು.**

**ಮಾನಪ್ಪ: ಅಲ್ಲಪ, ಬೇಸಾಯ ನಮ್ಮ ನಾಡ ಗೋಧಿಗೆ ಮಾಡಿದ ಹಾಗೆ ಅಲ್ವೆ?**

ಪರಸಪ್ಪ: ಅದು ಹಳೆಯ ರೀತಿಯದು. ಇದನ್ನು ಬೆಳೆಯಲು ಸುಧಾರಿಸಿದ ಬೇಸಾಯ ಮಾಡಬೇಕು. ಔಷಧ ಬಳಸಬೇಕು, ಬೀಜೋಪಚಾರ ಮಾಡಬೇಕು, ರಾಸಾಯನಿಕ ಗೊಬ್ಬರ ಸರಿಯಾದ ಪ್ರಮಾಣದಲ್ಲಿ, ಗೊತ್ತಾದ ಕಾಲದಲ್ಲೇ ಕೊಡಬೇಕು.

ಮಾನಪ್ಪ ಚಿಂತೆಗೊಳಗಾಗಿ, 'ಏನಪ್ಪಾ, ಇಷ್ಟೆಲ್ಲ ಹೇಗೆ ಮಾಡೋದು?'

ಪರಸಪ್ಪ: ಅಲ್ಲ, ಮಾನಪ್ಪ, ರೈತರ ಸಹಾಯಕ್ಕೆ ಬೇಸಾಯ ಅಧಿಕಾರಿಗಳು ಇದ್ದಾರೆಂದು ಹೇಳಿದೆನಲ್ಲ, ಅವರ ಸಲಹೆ ಅಗತ್ಯ.

ಮಾನಪ್ಪ: ಅಂತು ಬೇಸಾಯದ ಅಧಿಕಾರಿಗಳನ್ನು ಕಾಣಲೇ ಬೇಕೆನ್ನು.....

ಪ್ರಹಸನ ೨:

ಮಾನಪ್ಪ: ನಾನು ನರಸಾಪುರಕ್ಕೆ ಹೋಗಿದ್ದೆ. ಪರಸಪ್ಪನ ಗೋಧಿ ಬೆಳೆ ಅಬ್ಬರವಾಗಿ ಬಂದಿದೆ. ಅದಕ್ಕೆ ಕಾರಣ ತಾವೆ ಅಂತೆ. ಮೆಕ್ಸಿಕನ್ ಗೋಧಿ ಬೆಳೆಯಲು ಏನೇನೋ ಹೇಳಿದ. ನನಗೊಂದೂ ನೆನಪಿನಲ್ಲಿ ಉಳೀಯಲಿಲ್ಲ.

ಅಧಿಕಾರಿಗಳು: ನೋಡು ಮಾನಪ್ಪ, ಸುಧಾರಿಸಿದ ಬೇಸಾಯ ಮಾಡಲು ಅನೇಕ ರೀತಿಗಳು ಇವೆ. ಅವನ್ನೆಲ್ಲ ರೈತನು ನೆನಪಿಡಲಾರ. ಅದಕ್ಕಾಗಿ ರೈತ ಬೆಳೆ ಬೆಳೆಯುವ ಮುಂಚೆ ಅದರ ಯೋಜನೆ ಮಾಡಿಕೊಳ್ಳಬೇಕು. ಬೇಸಾಯ ಯೋಜನೆಯು ದಾರಿಕಾರನಿಗೆ ನಕಾಶ ಇದ್ದಂತೆ. ಹುಟ್ಟುವಳಿ ಅಂದಾಜು ಪತ್ರಿಕೆಯು ರೈತನಿಗೆ ದಾರಿ ತೋರಿಸುತ್ತದೆ. ಇಕೋ ಈ ಪತ್ರಿಕೆಯನ್ನು ನೋಡು.

ಪ್ರಹಸನ ೩:

ಅಧಿಕಾರಿ: ಏನ ಮಾನಪ್ಪ, ಗೋಧಿ ಬೆಳೆ ಹೇಗಿದೆ? ಔಷಧಿ ಸಿಂಪಡಿಸಿದೆಯಾ?

ಮಾನಪ್ಪ: ನಮಸ್ಕಾರ್ರಿ ಸಾಹೇಬರೆ. ಇದೇ ಬಂದಿರಾ? ಪೈರು ಚೆನ್ನಾಗಿದೆ. ಔಷಧ ಯಾಕ್ರೀ?

ಅಧಿಕಾರಿ: ಹೊಸ ತರದ ಬೇಸಾಯದಲ್ಲಿ ಎಲ್ಲವೂ ಸರಿಯಾಗಿ ನಡೆಯಬೇಕು. ರೋಗ ಬರದಿದ್ದರೂ ಔಷಧಿ ಸಿಂಪಡಿಸಬೇಕು.....

## ೨.೪ ಕೃಷಿ ಪತ್ರಿಕೋದ್ಯಮ

ವಿಶ್ವದ ಮೊಟ್ಟಮೊದಲ ಕೃಷಿ ಪತ್ರಿಕೆ ಪ್ರಕಟವಾಗಿದ್ದು ೧೭೬೩ರಲ್ಲಿ, ಫ್ರಾನ್ಸ್‌ನ ಪ್ಯಾರಿಸ್ಸಿನಲ್ಲಿ. ಅದರ ಹೆಸರು 'ಅಗ್ರಿಕಲ್ಚರ್ ದ ಫ್ರಾನ್ಸ್' (Agriculture De France). ಅನಂತರ ೧೮೪೦ರಲ್ಲಿ ಉತ್ತರ ಅಮೆರಿಕಾದಲ್ಲಿ 'ಸೆನ್ಸಸ್ ಅಗ್ರಿಕಲ್ಚರ್' (Census Agriculture) ಎಂಬ ಪತ್ರಿಕೆ ಪ್ರಕಟವಾಯಿತು. ೧೯ನೆಯ ಶತಮಾನದಲ್ಲಿ ಇಂಗ್ಲಿಷ್ ಕೃಷಿ

ಸಾಹಿತ್ಯ ಹೆಚ್ಚೆಚ್ಚು ಪ್ರಕಟವಾಗಲು ಪ್ರಾರಂಭವಾಯಿತು. ಮೊದಮೊದಲು ಕಡಿಮೆಯಿದ್ದರೂ ೧೯ನೆಯ ಶತಮಾನದ ಅಂತ್ಯದ ವೇಳೆಗೆ ಜಾಗತಿಕ ಕೃಷಿ ಪದ್ಧತಿಗಳಲ್ಲಿ ಬದಲಾವಣೆಗಳಾದಂತೆ ಹೆಚ್ಚೆಚ್ಚು ಸಾಹಿತ್ಯ ಪ್ರಕಟವಾಗಲಾರಂಭಿಸಿತು.

ಭಾರತದಲ್ಲಿ ಪ್ರಕಟವಾದ ಮೊಟ್ಟಮೊದಲ ಕೃಷಿ ಪತ್ರಿಕೆ, ೧೯೧೪ರಲ್ಲಿ ಪ್ರಕಟವಾದ ಹಿಂದಿಯ 'ಕೃಷಿ ಸುಧಾರ್' ಹಾಗೂ ಎರಡನೆಯ ಪತ್ರಿಕೆ ಬಹುಶಃ ೧೯೨೪ರಲ್ಲಿ ಪ್ರಕಟವಾದ ಕನ್ನಡದ 'ಮೈಸೂರು ವ್ಯವಸಾಯ ಶೋಧಕರ ಸಂಘದ ಪತ್ರಿಕೆ'. ೧೯೩೧ರ ನಂತರ ಸರ್ಕಾರಿ ಇಲಾಖೆಗಳು ಕೃಷಿ ಪತ್ರಿಕೆಗಳನ್ನು ಪ್ರಕಟಿಸಲು ಪ್ರಾರಂಬಿಸಿದವು. ೧೯೩೮ರಲ್ಲಿ ಬಿಹಾರ್ ಸರ್ಕಾರ 'ಗಾಂವ್' ಎನ್ನುವ ಪತ್ರಿಕೆ ಪ್ರಕಟಿಸಲು ಪ್ರಾರಂಭಿಸಿತು ಹಾಗೂ ೧೯೪೮ರಲ್ಲಿ ನವದೆಹಲಿಯ ಭಾರತೀಯ ಕೃಷಿ ಅನುಸಂಧಾನ ಪರಿಷತ್ 'ಖೇತಿ' ಎನ್ನುವ ಪತ್ರಿಕೆ ಪ್ರಕಟಿಸಲು ಪ್ರಾರಂಭಿಸಿತು.

ಕಳೆದ ಒಂದೆರಡು ದಶಕಗಳಿಂದ ಕೃಷಿ ಪತ್ರಿಕೋದ್ಯಮ ಹಾಗೂ ಕೃಷಿ ಸಾಹಿತ್ಯ ರಚನೆ ಬೃಹತ್ ಪ್ರಮಾಣದಲ್ಲಿ ಬೆಳೆಯುತ್ತಿದೆ. ಕೃಷಿ ಸಂಶೋಧನೆಗೆ ಬೆಂಬಲ ನೀಡುವುದರ ಜೊತೆಗೆ ರೈತರಿಗೆ ಕೃಷಿಯ ಹೊಸ ತಂತ್ರಜ್ಞಾನಗಳ ಬಗೆಗೆ, ಪರಿಸರದ ಬಗೆಗೆ, ಜಾಗತಿಕ ಕೃಷಿ ಆಗುಹೋಗುಗಳ ಬಗೆಗೆ ಅರಿವು ನೀಡಲು ಪ್ರಯತ್ನಿಸುತ್ತದೆ ಕೃಷಿ ವಿಜ್ಞಾನದ ಸರಳೀಕರಣಕ್ಕೆ ಪ್ರಯತ್ನಿಸುತ್ತದೆ. ಈ ಸರಳೀಕರಣದ ಉದ್ದೇಶವೇ ಕೃಷಿ ವಿಜ್ಞಾನ ಹೆಚ್ಚು ಉಪಯುಕ್ತವಾಗಲೆಂಬುದು. ಕೃಷಿ ವಿಜ್ಞಾನದಲ್ಲಿ ಮಹತ್ತರ ಸಾಧನೆಗಳಾಗಿವೆ. ಅವು ತಲುಪಬೇಕಾದವರಿಗೆ ತಲುಪದಿದ್ದಲ್ಲಿ ಅವು ನಿಷ್ಪ್ರಯೋಜಕ. ಕೃಷಿ ಸಾಹಿತಿ ಅಥವಾ ಪತ್ರಿಕಾವರದಿಗಾರನಾಗಬೇಕಾದಲ್ಲಿ ರೈತರ ದೃಷ್ಟಿಕೋನದಿಂದ ಬರೆಯುವುದನ್ನು ರೂಢಿಸಿಕೊಳ್ಳಬೇಕು. ರೈತನಂತೆ ಆಲೋಚಿಸಿ ಬರೆಯಬೇಕೇ ಹೊರತು ವಿಜ್ಞಾನಿಯಂತಲ್ಲ. ಅಂತಹ ಬರಹವನ್ನು ರೈತ ಸುಲಭವಾಗಿ ಅರ್ಥಮಾಡಿಕೊಳ್ಳುವಂತಿರಬೇಕು. ಉತ್ತರ ಅಮೆರಿಕಾದಲ್ಲಿ ೧೯ನೇ ಶತಮಾನದ ಪ್ರಾರಂಭದಿಂದಲೇ (೧೮೦೦) ಕೃಷಿ ಪತ್ರಿಕೆಗಳಲ್ಲಿ ರೈತರು ಆಸಕ್ತಿ ತೋರಿದ್ದಾರೆ (ವಿಲಿಯಂ ಬಿ. ವಾರ್ಡ್, ೧೯೫೨).

ಹಸಿರು ಕ್ರಾಂತಿಯ ಪ್ರಾರಂಭವು ಕೃಷಿ ಸಂವಹನೆಗೆ ಇನ್ನೂ ಹೆಚ್ಚು ಒತ್ತು ಕೊಟ್ಟಿತು. ಸಂವಹನೆಯ ವಿಧಾನ ಮತ್ತು ಧ್ಯೇಯೋದ್ದೇಶಗಳು ಆಧುನಿಕ ಕೃಷಿಯ ಆದ್ಯತೆಗಳನುಸಾರ ಬದಲಾಗುತ್ತಾ ಹೋಯಿತು. ಪರಿಸ್ಥಿತಿ ಹೀಗಿರುವಾಗ ಕೃಷಿ ಪತ್ರಿಕೋದ್ಯಮ ಬದಲಾವಣೆಯ ಒಂದು ಪ್ರಮುಖ ಅಂಗವಾಗಿದೆ

ಇಂದು ಸರ್ಕಾರಿ, ಅರೆ ಸರ್ಕಾರಿ ಸಂಸ್ಥೆಗಳು, ವಿಶ್ವವಿದ್ಯಾನಿಲಯಗಳು, ಸ್ವಯಂಸೇವಾ ಸಂಸ್ಥೆಗಳು, ವ್ಯಾಪಾರಿ ಸಂಸ್ಥೆಗಳು ಕೃಷಿ ಪತ್ರಿಕೆಗಳನ್ನು ಪ್ರಕಟಿಸುತ್ತಿವೆ.

ಉದಾ: ಕಾಫೀ ಮಂಡಳಿ, ಸಾಂಬಾರ ಮಂಡಳಿ, ರಬ್ಬರ್ ಮಂಡಳಿ, ತೆಂಗು ಅಭಿವೃದ್ಧಿ ಮಂಡಳಿ, ಕೇಂದ್ರ ರೇಷ್ಮೆ ಮಂಡಳಿ, ಟೀ ಮಂಡಳಿ, ರಾಷ್ಟ್ರೀಯ ತೋಟಗಾರಿಕಾ ಮಂಡಳಿ, ಕೃ.ವಿ.ವಿ.ಗಳು, ಜಲಾನಯನ ಅಭಿವೃದ್ಧಿ ಸಂಸ್ಥೆಗಳು ...

ಇಂದು ಮಲಯಾಳಂನ 'ಕರ್ಶಕಾರೀ'– ಮಲಯಾಳ ಮನೋರಮಾ ಗ್ರೂಪ್‌ನ ಪ್ರಕಟಣೆ ೪೦,೦೦೦ ಪ್ರತಿಗಳು ಹಾಗೂ ರಾಷ್ಟ್ರ ದೀಪಿಕಾ ಲಿ.ನವರ 'ಕರ್ಶಕನ್' ೨೮,೦೦೦ ಪ್ರತಿಗಳು ಪ್ರಕಟವಾಗುತ್ತಿವೆ.

ಸರ್ಕಾರದ ಇಲಾಖೆಗಳ ಹಾಗೂ ಕೃಷಿ ವಿಶ್ವವಿದ್ಯಾನಿಲಯದ ಪ್ರಕಟನೆಗಳು ಪ್ರಾರಂಭವಾದಾಗಿನಿಂದ ಇಂದಿಗೂ ವಿಸ್ತರಣಾ ಕರಪತ್ರಗಳಂತೆ, ಶೈಕ್ಷಣಿಕ ರೂಪದ ಪ್ರಕಟಣೆಗಳಾಗಿವೆ ಹಾಗೂ ಸಂಶೋಧನೆಯಲ್ಲಿ ಸಿಕ್ಕ ಫಲಿತಾಂಶಗಳಂತೆ ಅಂಕಿ ಅಂಶಗಳಿಂದ ಕೂಡಿರುತ್ತವೆ. ಅಲ್ಲದೆ ಅವು ಒಂದು ರೀತಿಯಲ್ಲಿ ಏಕಮುಖ ಪ್ರಕಟಣೆಗಳು, ತಮ್ಮ ಅಭಿಪ್ರಾಯಗಳನ್ನು ಮಾತ್ರ ತಿಳಿಸುತ್ತವೆ, ರೈತರ ಅನಿಸಿಕೆ, ಅನುಭವದ ಪ್ರತಿಕ್ರಿಯೆಗಳಿಗೆ ಅಲ್ಲಿ ಹೆಚ್ಚಿನ ಸ್ಥಾನವೇ ಇರುವುದಿಲ್ಲ.

ಇತರ ಜ್ಞಾನ ಶಿಸ್ತುಗಳಂತೆ ಕೃಷಿ ಪತ್ರಿಕೋದ್ಯಮದಲ್ಲಿ ಅದರ ರೂಪ ಮತ್ತು ಒಳಾಂಶಗಳಲ್ಲಿ ವಾಸ್ತವಿಕ ವಿಷಯಗಳ ಬಗೆಗೆ ವಸ್ತುನಿಷ್ಠ ವಿಶ್ಲೇಷಣೆಗೆ ಹೆಚ್ಚು ಆಸ್ಪದ ಕೊಡುವುದಿಲ್ಲ. ಈ ರೀತಿಯ ವಿಶ್ಲೇಷಣಾರಹಿತ ವಿಧಾನದಲ್ಲಿ ಕೆಲವು ಅನುಕೂಲಗಳಿದ್ದರೂ ಹೆಚ್ಚು ತಟಸ್ಥ ಮನೋಭಾವವಿರುತ್ತದೆ. ವೈಜ್ಞಾನಿಕ ಮತ್ತು ತಾಂತ್ರಿಕ ಪದಗಳ ಬಳಕೆ ಕೃಷಿಕನಿಗೆ ಸುಲಭವಾಗಿ ಅರ್ಥವಾಗುವ ಭಾಷೆಯ ಮಟ್ಟಕ್ಕೆ ಇಳಿದಿರುವುದಿಲ್ಲ. ಇದರಿಂದಾಗಿ ವಾಸ್ತವಾಂಶಗಳನ್ನು ವಾಸ್ತವಾಂಶಗಳನ್ನಾಗಿಯೇ ಪ್ರಕಟಿಸಿದರೂ ರೈತರು ಅದನ್ನು ಅರ್ಧ ಸತ್ಯವೆಂದು ಗ್ರಹಿಸುತ್ತಾರೆ. ಶಿವರಾಂ ಪೈಲೂರ್‌ರವರು ಹೇಳುವಂತೆ, 'ಈ ಸುಂದರ ಅರ್ಧ ಸತ್ಯಕ್ಕೆ ಆಕರ್ಷಿತರಾಗುವ ರೈತರು ಇನ್ನುಳಿದ ಅರ್ಧವನ್ನು ತಾವೇ ಅರಸುವ ಹಾಗೂ ಅರ್ಥೈಸಿಕೊಳ್ಳುವ ಪ್ರಯತ್ನಕ್ಕೆ ತೊಡಗಬೇಕಾಗುತ್ತದೆ. ಸಾಮಾನ್ಯವಾಗಿ ಈ ಇನ್ನುಳಿದ ಅರ್ಧ ಕಹಿಯಾದುದು ಹಾಗೂ ಹತಾಶೆ ತಂದುಕೊಡುವಂಥದೂ ಆಗಿರುತ್ತದೆ.' ದೇಶೀ ಜ್ಞಾನ ಪರಂಪರೆಯನ್ನು, ಗ್ರಾಮೀಣ ಸಂಸ್ಕೃತಿಯನ್ನು ಹಾಗೂ ರೈತರ ಆಸಕ್ತಿಯನ್ನು ಮತ್ತು ಗ್ರಹಿಕೆಯನ್ನು ಕಡೆಗಣಿಸಿರುವ ಕೃಷಿ ಪತ್ರಿಕೋದ್ಯಮ ಇಂದು ದುರ್ಬಲವಾಗಿದೆ. ಬಹುಪಾಲು ಕೃಷಿ ಪತ್ರಿಕೆಗಳಲ್ಲಿ ಬರುವ ಲೇಖನಗಳು ಇಂದು ಇಂಗ್ಲಿಷ್ ಲೇಖನಗಳ ಅನುವಾದಗಳು, ಪುಸ್ತಕಗಳಿಂದ ಆಯ್ದ ಭಾಗಗಳು, ಒಬ್ಬನೇ ಲೇಖಕ ಹಲವಾರು ಪತ್ರಿಕೆಗಳಿಗೆ ಬರೆದ, ಕೊಂಚ ಬದಲಾಯಿಸಿದ ಲೇಖನಗಳಾಗಿರುತ್ತವೆ. ಅವು ಯಾರಿಗಾಗಿ ಉದ್ದೇಶಿಸಿ ಬರೆದದ್ದಾಗಿರುತ್ತದೆಯೋ ಅಂಥವರಿಗೆ ಅವು ಯಾವರೀತಿಯಲ್ಲಿಯೂ ಉಪಯೋಗಕ್ಕೆ ಬರುವುದಿಲ್ಲ.

ಇಂದು ಕನ್ನಡದಲ್ಲಿ ೨೫ ಕೃಷಿ ಪತ್ರಿಕೆಗಳಿವೆ. ಅವುಗಳಲ್ಲಿ ೬ ಮಾತ್ರ ೫೦೦೦ಕ್ಕಿಂತ ಹೆಚ್ಚಿನ ಪ್ರತಿಗಳನ್ನು, ೬ ಪತ್ರಿಕೆಗಳು ೨೦೦೦-೫೦೦೦ ಪ್ರತಿಗಳನ್ನು ಹಾಗೂ ಇನ್ನುಳಿದವು ೨೦೦೦ಕ್ಕಿಂತ ಕಡಿಮೆ ಪ್ರತಿಗಳನ್ನು ಮುದ್ರಿಸುತ್ತವೆ (ಸೋಮೇಶ್ ಕುಮಾರ್, ೨೦೦೪). ಮೊದಮೊದಲು ಆಗಾಗ ಕೃಷಿ ಲೇಖನಗಳಷ್ಟೇ ಪ್ರಕಟವಾಗುತ್ತಿದ್ದ ದಿನಪತ್ರಿಕೆಗಳಲ್ಲಿ ಈಗ ಕೃಷಿ ಮಾಹಿತಿಗಾಗಿಯೇ ಪ್ರತ್ಯೇಕ ಪುರವಣಿಗಳಿವೆ. ಕನ್ನಡದ ಪ್ರಮುಖ ಪತ್ರಿಕೆಗಳಾದ 'ಪ್ರಜಾವಾಣಿ', 'ಕನ್ನಡ ಪ್ರಭ', ಸಂಯುಕ್ತ ಕರ್ನಾಟಕ ಹಾಗೂ 'ವಿಜಯ ಕರ್ನಾಟಕ'ಗಳು ವಾರದ ಒಂದು ದಿನ ಕೃಷಿ ಪುರವಣಿಗಳನ್ನು ಹೊರತರುತ್ತಿವೆ. ಆದರೂ, ದಿನಪತ್ರಿಕೆಗಳು ನಗರ ಸಂಸ್ಕೃತಿಯ ಉತ್ಪನ್ನಗಳು ಹಾಗೂ ಅವು ಹಳ್ಳಿ ಹಾಗೂ ಹಳ್ಳಿಗರ ಬಗೆಗೆ 'ನಗರ ಮನೋಭಾವ' ಮತ್ತು ಪೂರ್ವಕಲ್ಪಿತ ಅಭಿಪ್ರಾಯಗಳನ್ನು ಹೊಂದಿರುತ್ತವೆ (ವಿಲಿಯಂ ಬಿ. ವಾರ್ಡ್, ೧೯೫೨). ವಿಲಿಯಂ ಬಿ. ವಾರ್ಡ್‌ರವರ ಈ ಅಭಿಪ್ರಾಯ ಐದು ದಶಕಗಳ ಹಿಂದಿನ ಹಾಗೂ ಆಂಗ್ಲ ಭಾಷೆಯ ಪತ್ರಿಕೆಗಳಿಗಾದರೂ ಇಂದಿಗೂ ಇದು ಕನ್ನಡ ಪತ್ರಿಕೆಗಳಿಗೆ ಅನ್ವಯಿಸುತ್ತದೆ.

ನಗರದ ಮಂದಿಗೂ ಹಾಗೂ ಹಳ್ಳಿಯ ರೈತರಿಗೂ ಇರುವ ಕಂದಕವನ್ನು ಮುಚ್ಚಲು ಸೇತುವೆಯೊಂದನ್ನು ನಿರ್ಮಿಸಬೇಕಿದೆ. ಇಲ್ಲಿರುವ ಸಮಸ್ಯೆಯೆಂದರೆ ಪತ್ರಿಕೆಗಳಲ್ಲಿನ ಪತ್ರಕರ್ತರಿಗೆ ರೈತರ ಹಾಗೂ ಗ್ರಾಮೀಣ ಸಮಸ್ಯೆಗಳ ಅರಿವಿರುವುದಿಲ್ಲ. ಅವರು ಬಹುಪಾಲು ನಗರ ಹಿನ್ನೆಲೆಯಿಂದ ಬಂದವರಾಗಿರುತ್ತಾರೆ. ನಗರದಲ್ಲಿ ಮಾರಾಟವಾಗುವ ಹಾಲಿನ ಬೆಲೆ ಏರಿಕೆ ಅಥವಾ ಎಲ್ಲಾದರೂ ಎರಡು ತಲೆಯ ಕರು ಹುಟ್ಟಿದಾಗ ಪತ್ರಿಕೆಗಳವರಿಗೆ ವಿಶೇಷ 'ಗ್ರಾಮೀಣ' ಸುದ್ದಿಯಾಗುತ್ತದೆ. ಕೃಷಿಯ ಬಗೆಗಿನ ಅಜ್ಞಾನವೂ ಸಹ ಪೂರ್ವಕಲ್ಪಿತ ಅಭಿಪ್ರಾಯಗಳಷ್ಟೇ ಕೆಟ್ಟದ್ದು (ಅಲನ್, ೧೯೪೦). ದಿನ ಪತ್ರಿಕೆಯೊಂದರಲ್ಲಿ ರಾಜಕೀಯ, ಕ್ರೀಡೆ, ಸಂಸ್ಕೃತಿ, ಮಹಿಳೆ ಮುಂತಾದ ಪ್ರತ್ಯೇಕ ವಿಭಾಗಗಳಿಗೆ ಆಯಾ ವಿಷಯದ ತಜ್ಞರಿರುತ್ತಾರೆ. ಆದರೆ ಬಹುಪಾಲು ಪತ್ರಿಕೆಗಳಲ್ಲಿ ಕೃಷಿ ಪುರವಣಿಗಳಿಗೆ ತಜ್ಞ ಸಂಪಾದಕ, ಉಪಸಂಪಾದಕ ಅಥವಾ ವರದಿಗಾರರಿರುವುದಿಲ್ಲ. ಅವರು ವಿಶ್ವವಿದ್ಯಾನಿಲಯದ ವಿಸ್ತರಣ ವಿಭಾಗಗಳು ಅಥವಾ ಪ್ರಕಟಿಸಿದಲ್ಲಿ ತಮಗೆ ಪದೋನ್ನತಿ ಮುಂತಾದೆಡೆ ಒಂದೆರಡು ಹೆಚ್ಚು ಅಂಕಗಳು ಸಿಗುತ್ತವೆ ಎನ್ನುವ ಕಾರಣಕ್ಕೆ ಬರೆಯುವಂತಹ ಕೃಷಿ ವಿಜ್ಞಾನಿಗಳ ಬರಹಗಳಷ್ಟೇ ಇರುತ್ತವೆ.

ಇಂದಿನ ಬಹುತೇಕ ಕೃಷಿ ವಿಜ್ಞಾನಿಗಳು ರೈತರನ್ನುದ್ದೇಶಿಸಿ ಬರೆಯುವ ಲೇಖನಗಳು ಒಂದು ಸವಕಲು ಫಾರ್ಮುಲಕ್ಕೆ ಅಂಟಿಕೊಂಡಿವೆ. ಯಾವುದಾದರೊಂದು ಬೆಳೆಗೆ ಬೇಕಾದ ಹವಾಮಾನ, ಮಣ್ಣು, ಇರುವ ಜಾತಿ ವೈವಿಧ್ಯ, ರೋಗ ನಿಯಂತ್ರಣ ಹೀಗೆ 'ಬೇರಿನಿಂದ ಚಿಗುರಿನವರೆಗೆ' ಸಾಮಾನ್ಯ ಕೃಷಿಕರಿಗೆ ಅರ್ಥವಾಗದ, ಅಗತ್ಯವಿಲ್ಲದ ತಾಂತ್ರಿಕ ಭಾಷೆಯಲ್ಲಿ

ಬರೆಯುವ ಇಂಥಾ ಬರಹಗಳು ಈ ಬೆಳೆಗಳ ಅನನುಕೂಲತೆಗಳು, ಬೆಳೆಯಹೊರಡುವ ಕೃಷಿಕ ತೆಗೆದುಕೊಳ್ಳಬೇಕಾದ ಎಚ್ಚರಿಕೆಗಳು. ಈ ಬೆಳೆ ಬೆಳೆದ ರೈತರ ನೋವು–ನಲಿವುಗಳು, ಮಾರುಕಟ್ಟೆ ಅವಕಾಶ ಮೊದಲಾದ ಅತ್ಯಾವಶ್ಯಕ ವಿಚಾರಗಳ ಬಗ್ಗೆ ಬೆಳಕು ಚೆಲ್ಲುವುದೇ ಇಲ್ಲ. ದಟ್ಟ ಅನುಭವದ ಹಿನ್ನೆಲೆಯಲ್ಲಿ ಬರೆಯುವುದಕ್ಕೇ ಇಂಥಾ ಪತ್ರಿಕೆಗಳಲ್ಲಿ ನಾಲ್ಕೈದು ವರ್ಷಗಳಿಗೊಮ್ಮೆ ಒಂದೇ ವಿಷಯದ ಮೇಲೆ ಒಂದನ್ನೊಂದು ಹೋಲುವಂತಹ ಲೇಖನಗಳು ಬರುತ್ತವೆ. ಹೊಸತೇನನ್ನೂ ಹೇಳದ, ಉಪಯುಕ್ತ ಸಾಲುಗಳೊಂದೂ ಇರದ ಲೇಖನಗಳು ಇವು ('ಶ್ರೀ' ಪಡ್ರೆ, ೧೯೯೫).

ಕೃಷಿಯ ಬಗ್ಗೆ ಕೃಷಿಕರೇ ಹೆಚ್ಚೆಚ್ಚು ಬರೆಯುವುದು ಸಾಧ್ಯವಾದರೆ ವಿಷಯಕ್ಕೆ ಹೆಚ್ಚು ನ್ಯಾಯ ಸಲ್ಲಿಸಬಹುದು, ಬರವಣಿಗೆ ಪರಿಣಾಮಕಾರಿ ಆಗಬಹುದು; ಕೃಷಿ ಪತ್ರಿಕೋದ್ಯಮ ಅರ್ಥಪೂರ್ಣಗೊಳ್ಳಬಹುದು ಹಾಗೂ ಈ ಮೂಲಕ ಕೃಷಿರಂಗದ ಏಳಿಗೆಯತ್ತ ಸಾಗಬಹುದು. ಕೃಷಿಯ, ಕೃಷಿಕರ ಸಮಸ್ಯೆಗಳನ್ನು ಮಾತ್ರ ಬಿಂಬಿಸುವುದು ಕೃಷಿ ಪತ್ರಕರ್ತರ ಮುಂದಿರುವ ಕೆಲಸವಲ್ಲ. ತಮ್ಮ ಹೊಲಗದ್ದೆಗಳಲ್ಲಿ ಹಸಿರು ಕಂಗೊಳಿಸಬೇಕಾದರೆ ಮೊದಲು ಊರು ಅಭಿವೃದ್ಧಿಯಾಗಬೇಕು. ಈ ಕಾರಣಕ್ಕಾಗಿಯೇ ಹಳ್ಳಿಯನ್ನು ಬದಲಾವಣೆಯತ್ತ ಒಯ್ಯುವ ಮಹತ್ವದ ಜವಾಬ್ದಾರಿ ಲೇಖನಿ ಕೈಗೆತ್ತಿಕೊಳ್ಳುವ ಕೃಷಿಕರ ಮುಂದಿದೆ ('ಶ್ರೀ' ಪಡ್ರೆ, ೧೯೯೫).

೧೯೮೩ರಲ್ಲಿ ವಿ.ವೆಂಕಟೇಶ ಶರ್ಮರವರು ನಡೆಸಿದ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯ ಪ್ರಕಟಿಸುವ ತ್ರೈಮಾಸಿಕ 'ಕೃಷಿ ವಿಜ್ಞಾನ' ಪತ್ರಿಕೆಯ ಬಗೆಗಿನ ಅಧ್ಯಯನದಲ್ಲಿ ಈ ಮುಂದಿನ ಅಂಶಗಳು ಕಂಡಬಂದವು:

ಶೇ. ೭೫ಕ್ಕಿಂತ ಹೆಚ್ಚು ರೈತರು ಎಲ್ಲ ಲೇಖನಗಳು ಸುಲಭವಾಗಿ ಅರ್ಥವಾಗುತ್ತವೆಂದು ಹೇಳಿದರು.

ಶೇ. ೮೬.೨೭ ರೈತರು ಲೇಖನಗಳು ತೀರಾ ದೀರ್ಘವಾಗಿರುತ್ತವೆಂದರು.

ಶೇ. ೮೮.೨೪ ರೈತರು ಆ ಲೇಖನಗಳಲ್ಲಿರುವುದನ್ನೆಲ್ಲ ಅಳವಡಿಸುವುದು ಅಸಾಧ್ಯ ಅವು ಸಂಶೋಧನೆಗಳಿಗಷ್ಟೇ ಸೀಮಿತ ಎಂದರು.

ಶೇ.೬೩.೪ ರೈತರು ಅವುಗಳನ್ನು ಓದಿದರೂ ಅವುಗಳನ್ನು ಅಳವಡಿಸುವ ಗೋಜಿಗೇ ಹೋಗಲಿಲ್ಲ.

ನಾಗರಾಜ, ಎಂ.ಎಸ್.ರವರ (೧೯೮೬) 'ಕೃಷಿಲೋಕ' ಪತ್ರಿಕೆಯ ಅಧ್ಯಯನದಂತೆ ಹೆಚ್ಚಿನ ಶಿಕ್ಷಣ ಅಥವಾ ಹೆಚ್ಚಿನ ಕೌಟುಂಬಿಕ ಆದಾಯ ಹೊಂದಿರುವಂತಹ ಚಂದಾದಾರರು ಪತ್ರಿಕೆಯಿಂದ ಹೆಚ್ಚಿನ ಜ್ಞಾನ/ಮಾಹಿತಿ ಪಡೆಯುತ್ತಿದ್ದರು.

ಅಮರೇಶ್ ಕುಮಾರ್‌ರವರ (೨೦೦೦) ಅಧ್ಯಯನದಂತೆ 'ಪ್ರಜಾವಾಣಿ' ದಿನಪತ್ರಿಕೆಯು ಕೃಷಿ ವಾರ್ತೆ, ಲೇಖನಗಳಿಗೆ ಶೇ. ೫.೯೩ರಷ್ಟು ಸ್ಥಳವನ್ನು ಒದಗಿಸಿದ್ದರೆ, 'ಸಂಯುಕ್ತ ಕರ್ನಾಟಕ' ಶೇ. ೫.೮೬ರಷ್ಟು, 'ಕನ್ನಡ ಪ್ರಭ' ಶೇ. ೨.೭೦ರಷ್ಟು ಹಾಗೂ 'ಉದಯವಾಣಿ' ಶೇ.೧.೯೮ರಷ್ಟು ಸ್ಥಳವನ್ನು ಒದಗಿಸಿತ್ತು.

ರೈತರ ಮೇಲಿನ ಕೃಷಿ ಪತ್ರಿಕೆಗಳ ಪರಿಣಾಮದ ಬಗ್ಗೆ ಹೇಳುತ್ತ ಹಳಿಯವರು (೧೯೮೦), 'ಕೃಷಿಮೇಳ ಅಥವಾ ಅಂತಹ ರೈತರ ಸಭೆಗಳಲ್ಲಿ ರೈತರು ಅನಕ್ಷರಸ್ಥರಾಗಿದ್ದರೂ ಕರಪತ್ರ ಮುಂತಾದ ಕೃಷಿ ಸಾಹಿತ್ಯವನ್ನು ಕೊಂಡೊಯ್ಯುವುದನ್ನು ನಾವು ಕಂಡಿದ್ದೇವೆ. ಅಂಥವರು ತಾವು ಕೊಂಡೊಯ್ದ ಕರಪತ್ರ ಅಥವಾ ಸಾಹಿತ್ಯ ಆಸಕ್ತಕರವಾಗಿ ಕಂಡಲ್ಲಿ ಅದನ್ನು ತಮ್ಮ ಅಕ್ಷರಸ್ಥ ಮಕ್ಕಳಿಂದ ಅಥವಾ ಶಾಲಾ ಮಾಸ್ತರರಿಂದ ಓದಿಸಿಕೊಳ್ಳುವುದು ನಮ್ಮ ಅನುಭವಕ್ಕೆ ಬಂದಿದೆ' ಎಂದಿದ್ದಾರೆ.

ಕನ್ನಡ ವೃತ್ತ ಪತ್ರಿಕೆಗಳಲ್ಲಿ ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯವು ಒದಗಿಸುವ ಮಾಹಿತಿಯನ್ನು ಪ್ರಕಟಿಸುವ ಕಾರ್ಯವು ೧೯೬೮ರಿಂದ ನಡೆಸಲಾಗುತ್ತಿದೆ.

ಪತ್ರಿಕೆಗಳಲ್ಲಿ ಕೃಷಿ ವಿಶ್ವವಿದ್ಯಾನಿಲಯಗಳು ಪ್ರಕಟಿಸುವ ಪ್ರಶ್ನೋತ್ತರ ಅಂಕಣಗಳು (ಉದಾ: 'ಪ್ರಜಾವಾಣಿ'– ಬೇಸಾಯ ಬೆನ್ನೆಲುಬು: ಈಗ ನಿಲ್ಲಿಸಲಾಗಿದೆ) ಮೈಸೂರಿನ ರೈತರಲ್ಲಿ ಹೆಚ್ಚು ಜನಪ್ರಿಯವಾಗಿವೆಯೆಂದು ಜೋಸೆಫ್‌ರವರು (೧೯೭೩) ತಿಳಿಸಿದ್ದಾರೆ. ಈ ಅಂಕಣವನ್ನು ನಿಲ್ಲಿಸುವ ಇಚ್ಛೆಯನ್ನು ಕೆಲವು ಪತ್ರಿಕೆಗಳು ವ್ಯಕ್ತಪಡಿಸಿದಾಗ ಹಲವರು ರೈತರು ಅವುಗಳನ್ನು ನಿಲ್ಲಿಸಬಾರದೆಂದೂ, ಅದರಿಂದ ಬಹಳಷ್ಟು ಉಪಯುಕ್ತ ಮಾಹಿತಿ ದೊರಕುತ್ತಿದೆಯೆಂದು ಕೋರಿ ಪತ್ರಗಳನ್ನು ಬರೆದಿದ್ದರು.

### ೨.೫ ಆಧುನಿಕ ಕೃಷಿವಿಜ್ಞಾನ ಮತ್ತು ಕೃಷಿವಿಜ್ಞಾನ ಸಾಹಿತ್ಯದ ರೂಪಾಂತರ

ಆಧುನಿಕ ಕೃಷಿ ಅಥವಾ ಹಸಿರು ಕ್ರಾಂತಿಯ ಅಳವಡಿಕೆ ಹಾಗೂ ನಂತರದ ಜಾಗತೀಕರಣ ಮತ್ತು ಉದಾರೀಕರಣ ನೀತಿಗಳಿಂದಾಗಿ ಭಾರತೀಯ ರೈತರ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಪರಿಸ್ಥಿತಿಗಳಲ್ಲಿ ಮಹತ್ತರ ಪರಿಣಾಮಗಳುಂಟಾದುವು. ಅನಿರ್ಬಂಧಿತ ಕೀಟನಾಶಕ ಹಾಗೂ ರಸಗೊಬ್ಬರಗಳ ಬಳಕೆಯಿಂದ ಮಣ್ಣು, ನೀರು ಹಾಗೂ ಗಾಳಿಯು ಕಲುಷಿತಗೊಂಡು ಮನುಷ್ಯರ ಮತ್ತು ಪ್ರಾಣಿಪಕ್ಷಿಗಳ ಆರೋಗ್ಯದ ಮೇಲೆ ಪರಿಣಾಮ ಬೀರತೊಡಗಿತು. 1900ರಿಂದ 1950ರವರೆಗೆ ಶೇ. 0.3ರಷ್ಟಿದ್ದ ನಮ್ಮ ವಾರ್ಷಿಕ ಕೃಷಿ ಉತ್ಪಾದನೆ 1960–70ರ ಅವಧಿಯಲ್ಲಿ ಅಧಿಕಗೊಂಡು ಶೇ. 3.3ರಷ್ಟಾಯಿತು. ಆದರೆ 1990–98ರ ವೇಳೆಗೆ ಶೇ. 1.8ರಷ್ಟಿದ್ದ ಜನಸಂಖ್ಯಾ ಬೆಳವಣಿಗೆಗೆ ಹೋಲಿಸಿದಲ್ಲಿ

ಕೃಷಿ ಉತ್ಪಾದನೆ ಶೇ. 1.4ಕ್ಕೆ ಇಳಿಯಿತು. ಸಾಕಷ್ಟು ಅಧಿಕ ಇಳುವರಿ ತಳಿಗಳು, ರಸಗೊಬ್ಬರ, ಕೀಡೆ ನಾಶಕ, ನೀರಾವರಿ ಸೌಲಭ್ಯ ಹಾಗೂ ಸಾಲಸೌಲಭ್ಯಗಳ ಲಭ್ಯತೆಯಿದ್ದರೂ ಈ ಆಧುನಿಕ ಕೃಷಿ ಸುಸ್ಥಿರವಲ್ಲವೆಂಬುದನ್ನು ತೋರಿಸುತ್ತದೆ (ವೀರೇಶ್, 2004). ಹೆಚ್ಚಿದ ಉತ್ಪಾದನೆಯಿಂದಾಗಿ ರಫ್ತು ಮಾಡುವಂತಹ ಸ್ಥಿತಿಯಿಂದ ಈಗ ಮತ್ತೆ ಗೋಧಿಯಂತಹ ಆಹಾರ ಧಾನ್ಯವನ್ನು ಆಮದು ಮಾಡಿಕೊಳ್ಳಬೇಕಾದ ಪರಿಸ್ಥಿತಿ ಬಂದೊದಗಿದೆ (ಡೆಕ್ಕನ್ ಹೆರಾಲ್ಡ್). ರೈತರ ಆತ್ಮಹತ್ಯೆಗಳ ಬಗೆಗೆ ಹೇಳುತ್ತ ರಾಮಾಂಜನೇಯುಲು (೨೦೦೫) ಪ್ರಸ್ತುತ ಕೃಷಿ ಪರಿಸ್ಥಿತಿಯನ್ನು ಅರವತ್ತರ ದಶಕದ ಪರಿಸ್ಥಿತಿಗೆ ಹೋಲಿಸಿ ಈಗಲೂ ಕೃಷಿ ಆಗಿನಂತೆಯೇ ಸಂದಿಗ್ಧ ಸ್ಥಿತಿಯಲ್ಲಿಯೇ ಇದೆಯೆಂದು ಹೇಳುತ್ತಾರೆ. ಆನಂತರ ಅರವತ್ತರ ದಶಕದ 'ಹಸಿರು ಕ್ರಾಂತಿ'ಯಿಂದಾಗಿ ರೈತ ಇಳುವರಿ ಹಾಗೂ ಆಹಾರ ಸುಭಿಕ್ಷತೆಯ ದೃಷ್ಟಿಯಿಂದ ಚೇತರಿಸಿಕೊಂಡರೂ ಈಗ ಮತ್ತೆ ಸಂಕಟದ ಸುಳಿಯಲ್ಲಿ ಸಿಕ್ಕಿಬಿದ್ದಿದ್ದಾನೆನ್ನುತ್ತಾರೆ ಅವರು. ಹಸಿರು ಕ್ರಾಂತಿಯ ಸಮಯದಲ್ಲಿ ಬಹುಮುಖ್ಯ ಪಾತ್ರ ವಹಿಸಿದ ಕೃಷಿ ವಿಸ್ತರಣ ಮತ್ತು ಸಂವಹನ ವ್ಯವಸ್ಥೆ ಈಗ ಸಂಪೂರ್ಣ ವಿಫಲವಾಗಿದೆಯೆನ್ನುವುದು ಅವರ ಅಭಿಪ್ರಾಯ. ಸಂಶೋಧಕರ ಮತ್ತು ರೈತರ ನಡುವಿನ ಸಂಪರ್ಕಕೊಂಡಿಯಾಗಬೇಕಿದ್ದ ವಿಸ್ತರಣ ವ್ಯವಸ್ಥೆ ಈಗ ಇಬ್ಬರ ವಿಶ್ವಾಸವನ್ನೂ ಕಳೆದುಕೊಂಡಿದೆ. ಸಧ್ಯದ ಪರಿಸ್ಥಿತಿಯಲ್ಲಿ ರೈತರು ಸಂಶೋಧಕರಿಂದ ಹೊಸ ಸಂಶೋಧನೆಗಳ ಹೊರತಾಗಿ ಬರೇ 'ಸಹಾಯ ಧನ' ನಿರೀಕ್ಷಿಸುತ್ತಾರೆ.

ಕೃಷಿ ಕ್ಷೇತ್ರದ ರೂಪಾಂತರದಂತೆ ಕನ್ನಡ ಕೃಷಿವಿಜ್ಞಾನ ಸಾಹಿತ್ಯದ ರೂಪಾಂತರವೂ ನಡೆಯತೊಡಗಿತು. ಈ ಸಾಹಿತ್ಯ ರೂಪಾಂತರದ ಅವಲೋಕನೆಗೆ ಕೃಷಿ ಕ್ಷೇತ್ರದ ರೂಪಾಂತರದ ಅಧ್ಯಯನವೂ ಅಗತ್ಯವಾಗಿದೆ.

ಭಾರತೀಯ ಕೃಷಿ ಕ್ಷೇತ್ರದಲ್ಲಾದ ಬದಲಾವಣೆಗಳನ್ನು ಕೌಟುಂಬಿಕ ಕೃಷಿ, ಹೆಚ್ಚುವರಿ ಕೃಷಿ ಹಾಗೂ ಮಾರುಕಟ್ಟೆ ಕೃಷಿ ಎಂದು ಮೂರು ಹಂತಗಳಲ್ಲಿ ಗುರುತಿಸಬಹುದು (ದ್ವಾರಕೀನಾಥ್, ೨೦೦೬).

ಭಾರತಕ್ಕೆ ಸ್ವಾತಂತ್ರ್ಯ ದೊರಕಿದಾಗ ಭಾರತೀಯ ಕೃಷಿಯು ಪ್ರಧಾನವಾಗಿ **ಕೌಟುಂಬಿಕ ಕೃಷಿ**ಯಾಗಿತ್ತು. ಸಾಮಾನ್ಯವಾಗಿ ಅದು ಬದುಕಿನ ಒಂದು ವಿಧಾನವಾಗಿತ್ತು, ಜೀವನಾಧಾರದ ಕಸುಬಾಗಿತ್ತು. ಸ್ಥಳೀಯ ಸಂಪ್ರದಾಯ ಮತ್ತು ಸಂಸ್ಕೃತಿಯೇ ಕೃಷಿಜೀವನದ ಆಧಾರವಾಗಿತ್ತು. ಅದು ಸಂಪೂರ್ಣ ಸ್ವಾವಲಂಬನೆಯ ಉದ್ಯೋಗವಾಗಿತ್ತು. ಅದಕ್ಕಾಗಿ ಹಿಂದಿನ ಬೆಳೆಯಿಂದ ಬಿತ್ತನೆ ಬೀಜ, ಸಸ್ಯ ಮತ್ತು ಪ್ರಾಣಿ ತ್ಯಾಜ್ಯಗಳಿಂದ ಗೊಬ್ಬರ ಹಾಗೂ ಅವಿಭಕ್ತ ಕುಟುಂಬದ ಸದಸ್ಯರಿಂದ ಶ್ರಮ ಬರುತ್ತಿತ್ತು. ಬೇಸಾಯಪದ್ಧತಿಗಳು ಶತಶತಮಾನದ ಅನುಭವ ಆಧಾರಿತ ಮಿಶ್ರಬೆಳೆ, ಮಿಶ್ರಕೃಷಿ ಮತ್ತು ಬೆಳೆ ಆವರ್ತನೆ ಮುಂತಾದ ಪದ್ಧತಿಗಳಾಗಿತ್ತು ಹಾಗೂ

ಕೃಷಿ ಉತ್ಪಾದನೆ ಮುಖ್ಯವಾಗಿ ಕುಟುಂಬದ ಬಳಕೆಗಾಗಿತ್ತು. ಒಟ್ಟಾರೆ ಅದು, ಸುಸ್ಥಿರ ಕೌಟುಂಬಿಕ ಉದ್ಯೋಗವಾಗಿತ್ತು.

ಹೊಸದಾಗಿ ನಿರ್ಮಾಣಗೊಂಡ ದೇಶ ಬಳುವಳಿಯಾಗಿ ಪಡೆದ ತೀವ್ರ ಆಹಾರದ ಅಭಾವದಿಂದಾಗಿ **ಹೆಚ್ಚುವರಿ ಕೃಷಿಯ** ಅನುಸರಣೆ ತಾರ್ಕಿಕ ಅವಶ್ಯಕತೆಯಾಗಿತ್ತು. ೧೯೫೦ರ ಸುಮಾರಿಗೆ ಆಯ್ದ ಸಾಂಪ್ರದಾಯಿಕ ವಿಧಾನಗಳ ಆಧಾರದ 'ಹೆಚ್ಚು ಆಹಾರ ಬೆಳೆಯಿರಿ ಆಂದೋಳನ'ವೇ (The Grow More Food Campaign) ಈ ಸಮಸ್ಯೆಗೆ ಪ್ರಮುಖ ಪರಿಹಾರವಾಗಿ ಕಂಡುಬಂದಿತ್ತು. ಆದರೆ ಭಾರತೀಯ ಕೃಷಿಯ ಸುವರ್ಣಯುಗ ೧೯೬೦ರ ದಶಕದಲ್ಲಿ ಹಸಿರುಕ್ರಾಂತಿಯೊಂದಿಗೆ ಪ್ರಾರಂಭವಾಯಿತೆನ್ನಬಹುದು. ಇದರೊಂದಿಗೆ, ಭಾರತೀಯ ರೈತ ತನ್ನ ಸ್ಥಳೀಯ ಪದ್ಧತಿಯೊಂದಿಗೆ ಆಧುನಿಕ ತಂತ್ರಜ್ಞಾನವನ್ನು ಸೇರಿಸಿ ಬೆಳೆ ಇಳುವರಿಯನ್ನು ದುಪ್ಪಟ್ಟು ಮಾಡಿ ದೇಶವನ್ನು ಆಹಾರ ಸ್ವಾವಲಂಬನೆಯ ಹಂತಕ್ಕೆ ತಂದು ಚರಿತ್ರೆಯನ್ನೇ ನಿರ್ಮಾಣ ಮಾಡಿದ. ಆದರೆ ಈ ಪ್ರಕ್ರಿಯೆಯಲ್ಲಿ, ಆತ ಕೆಲವು ಖರೀದಿಸಿದ ಪರಿಕರಗಳ ಮೇಲೆ ಅವಲಂಬಿತವಾಗಬೇಕಾಯಿತು. ಈ ಹಂತದಲ್ಲಿ ಕೃಷಿ ವ್ಯವಸ್ಥೆ ಕ್ರಮೇಣ ತನ್ನ ಕೆಲವು ಅತ್ಯುತ್ತಮ ಸಾಂಪ್ರದಾಯಿಕ ಪದ್ಧತಿಗಳನ್ನು ತೊರೆಯಲಾರಂಭಿಸಿತೆಮಂದು ಇಲ್ಲಿ ಗಮನಿಸಬೇಕಾದ ಅಂಶ.

ಹಸಿರು ಕ್ರಾಂತಿಯ ಪ್ರಾರಂಭದಿಂದಾಗಿ ಕಾಣಿಸಿಕೊಳ್ಳುತ್ತಿರುವುದೇ **ಮಾರುಕಟ್ಟೆ ಕೃಷಿ.** ಕೃಷಿರಂಗದಲ್ಲಿ ಮಾತ್ರವಲ್ಲ, ಅದರ ಆರ್ಥಿಕ ಪರಿಸರದಲ್ಲೂ ಇತ್ತೀಚಿನ ವರ್ಷಗಳಲ್ಲಿ ಕ್ರಮೇಣ ಬದಲಾವಣೆಗಳಾಗುತ್ತಿವೆ. ಎಲ್ಲ ರೈತಾಪಿ ಕುಟುಂಬಗಳಿಗೂ, ಇಂದು ನಗರದ ಆದಾಯದ ಅವಶ್ಯಕತೆಯಿದೆ. ಹಾಗಾಗಿ, ಬಹುಪಾಲು ಸಣ್ಣ ರೈತರು ಸ್ಥಳೀಯ ವಾರದ ಸಂತೆಗಳಿಗೆ ಬೆಳೆದರೆ, ಹೈ-ಟೆಕ್ ರೈತರು ರಫ್ತು ಮಾರುಕಟ್ಟೆಗಾಗಿ ಬೆಳೆಯುತ್ತಾರೆಂಬ ಸಾಮಾನ್ಯ ಭಾವನೆಯಿದೆ. ಮಧ್ಯಹಂತದ ರೈತರು, ಏರುತ್ತಿರುವ ತಮ್ಮ ನಿರೀಕ್ಷೆಗಳಿಂದ ಹಾಗೂ ಪ್ರಸ್ತುತ ದಿನದ ಹೆಚ್ಚಿನ ಅರಿವಿನಿಂದಾಗಿ ಮಾರುಕಟ್ಟೆ ಮತ್ತು ಬೇಡಿಕೆಯನ್ನು ಸರಿಯಾಗಿ ಗುರುತಿಸದೆ ಹೆಚ್ಚೆಚ್ಚು ಬೆಳೆಯಲು ಪ್ರಾರಂಭಿಸಿದ್ದಾರೆ.

ಕರ್ನಾಟಕದಲ್ಲಿ ಜೀವನಾಧಾರದ ಕೃಷಿ ವಾಣಿಜ್ಯ ಅಥವಾ ಮಾರುಕಟ್ಟೆ ಕೃಷಿಯಾಗಿ ರೂಪಾಂತರಗೊಳ್ಳುವ ಕ್ರಿಯೆ ಹಲವಾರು ದಶಕಗಳ ಹಿಂದೆಯೇ ಮಂಡ್ಯದಲ್ಲಿ ೧೯೪೮ರಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪಿತಗೊಳ್ಳುವುದರೊಂದಿಗೆ ಪ್ರಾರಂಭವಾಯಿತು (ಪಾಣಿನಿ, ೧೯೯೯). ಆನಂತರ ೧೯೭೦ರಿಂದ ರೇಷ್ಮೆಕೃಷಿಯನ್ನು ಸರ್ಕಾರ ಜನಪ್ರಿಯಗೊಳಿಸಿತು. ಎಷ್ಟೋ ಜನ ರೈತರು ಆಹಾರ ಧಾನ್ಯವನ್ನು ಬೆಳೆಯುವುದನ್ನು ನಿಲ್ಲಿಸಿ ಕಬ್ಬು, ಹಿಪ್ಪುನೇರಳೆ ಸೊಪ್ಪು ಬೆಳೆಯಲು ಪ್ರಾರಂಭಿಸಿದರು. ೧೯೯೦ನೇ ದಶಕದಿಂದೀಚೆಗೆ ಅಲಂಕಾರಿಕ ಪುಷ್ಪಕೃಷಿ ಪ್ರಾರಂಭವಾಗಿದೆ.

ಜಾಗತೀಕರಣ ಹಾಗೂ ಉದಾರೀಕರಣ ಪ್ರಾರಂಭವಾದಾಗಲಿಂದಲೂ ಕೃಷಿ ಕ್ಷೇತ್ರಕ್ಕೆ ದೊಡ್ಡ ಹೊಡೆತ ಬಿದ್ದಿದೆ. ಭಾರತದಲ್ಲಿ ವಿಫುಲವಾಗಿ ಸಣ್ಣ ಕೃಷಿ ಹಿಡುವಳಿಗಳಿರುವುದರಿಂದ ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದಕ್ಕೆ ಉತ್ಪಾದಿಸುವುದು ಕಡಿಮೆ ಪ್ರಮಾಣದಲ್ಲಿದೆ. ಆದ್ದರಿಂದ ಜಾಗತೀಕರಣದಿಂದಾಗಿ ಭಾರತದಲ್ಲಿ ರೈತಾಪಿ ವರ್ಗಗಳಿಗೆ ಏನೇನೂ ಸಿಗುವುದಿಲ್ಲ. ದೊಡ್ಡ ಹಿಡುವಳಿದಾರರಿಗೆ ಪ್ರಯೋಜನಗಳು ಸಿಗುತ್ತವೆ. ಜಾಗತೀಕರಣ ಉದಾರೀಕರಣದಿಂದಾಗಿ ಕೃಷಿ ಸಲಕರಣೆ ಉತ್ಪಾದಿಸುವ ಕೈಗಾರಿಕೆಗಳು ಹೆಚ್ಚು ಲಾಭ ಗಳಿಸುತ್ತವೆ. ಈ ಕೈಗಾರಿಕೆಗಳಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಹೆಚ್ಚಿವೆ. ಕಾರ್ಗಿಲ್, ಮಾನ್ಸಂಟೊ, ಸಿಬಾ ಮುಂತಾದ ಬಹುರಾಷ್ಟ್ರೀಯ ಕಂಪನಿಗಳ ಪಟ್ಟಿಯನ್ನು ಕೊಡಬಹುದು. ಜಾಗತೀಕರಣ ಹಾಗೂ ಉದಾರೀಕರಣ ಬಹುರಾಷ್ಟ್ರೀಯ ಕಂಪನಿಗಳು ಲಾಭ ಗಳಿಸುವುದಕ್ಕೆ ಪೂರಕವಾದ ಅಂಶಗಳಾಗಿವೆ. ಜಾಗತೀಕರಣ ಹಾಗೂ ಉದಾರೀಕರಣದಿಂದಾಗಿ ಇಂದು ಬಹುರಾಷ್ಟ್ರೀಯ ಕಂಪನಿಗಳು ಹೂಡುವ ಬಂಡವಾಳಕ್ಕೆ ಹೆಚ್ಚು ಲಾಭವಿದೆ. ಇಲ್ಲಿ ಕಡಿಮೆ ದರದಲ್ಲಿ ದೊರೆಯುವ ಕಚ್ಚಾ ಸಾಮಗ್ರಿಗಳು, ಮಾನವ ಸಂಪನ್ಮೂಲಗಳು, ಸರಕಾರದಿಂದ ಸಿಗುವ ಉತ್ತೇಜಕ ಬೆಂಬಲ ಮುಂತಾದುವುಗಳಿಂದ ಬಹುರಾಷ್ಟ್ರೀಯ ಕಂಪನಿಗಳು ಭಾರತದಲ್ಲಿ ಆಳವಾಗಿ ಬೇರು ಬಿಡಲಾರಂಭಿಸಿವೆ (ಸೋಮಶೇಖರ್, ೨೦೦೪). ಜಾಗತೀಕರಣವು ಇಂದು ರೈತರನ್ನು ರೈತೋದ್ಯಮಿಗಳನ್ನಾಗಿ ಮಾಡುತ್ತಿದೆ ಹಾಗೂ ಅವರಲ್ಲಿ ವಿಫುಲವಾಗಿದ್ದ ಕೃಷಿಕ ಬದುಕಿನ ಸಾಂಸ್ಕೃತಿಕ ಬಂಡವಾಳವನ್ನು ಕಣ್ಮರೆಯಾಗಿಸುತ್ತಿದೆ.

ಕೃಷಿ ವಲಯದಲ್ಲಿ ಸಂಶೋಧನೆಗಳ ಮೂಲಕ ಅಭಿವೃದ್ಧಿಪಡಿಸುವ ಹೊಸ ಸಸ್ಯ ಹಾಗೂ ಪ್ರಾಣಿ ತಳಿಗಳ ಮೇಲೆ ಹೊಂದುವ 'ಬೌದ್ಧಿಕ ಆಸ್ತಿ' ಹಕ್ಕುಗಳನ್ನು ಅಂತರರಾಷ್ಟ್ರೀಯ ಸಂಸ್ಥೆಯಾದ 'ಹೊಸ ತಳಿಗಳನ್ನು ಸಂರಕ್ಷಿಸುವ ಪರಿಷತ್' (UPOV) ಸ್ವಾಮ್ಯ ಕೊಡುವ ಕಾರ್ಯವನ್ನು ನಿರ್ವಹಿಸುತ್ತಿದೆ. ಈ ಸಂಸ್ಥೆ ೧೯೬೧ರಷ್ಟು ಹಿಂದೆಯೇ ಅಸ್ತಿತ್ವಕ್ಕೆ ಬಂದಿತು. ಈ ಸಂಸ್ಥೆಗೆ ಮೂವತ್ತು ರಾಷ್ಟ್ರಗಳು ಸದಸ್ಯರಾಗಿದ್ದಾರೆ. ಈ ಎಲ್ಲ ರಾಷ್ಟ್ರಗಳು ಕೈಗಾರಿಕಾ ರಾಷ್ಟ್ರಗಳಾಗಿರುವುದು, ತೃತೀಯ ಜಗತ್ತಿನ ರಾಷ್ಟ್ರಗಳು ಈ ಸಂಸ್ಥೆಯನ್ನು ಅನುಮಾನದಿಂದ ನೋಡಲು ಸಾಧ್ಯ. ಭಾರತದ ಸರಕಾರ ಈ ಸಂಸ್ಥೆಗೆ ಸದಸ್ಯತ್ವ ಪಡೆಯಲು ಯೋಚಿಸುತ್ತಿದೆ. ಆದರೆ ರಾಷ್ಟ್ರದ ಸಂಶೋಧನೆಯು ಬಗ್ಗೆ ಕಳಕಳಿಯಿರುವ ಎಲ್ಲರೂ ಇದನ್ನು ವಿರೋಧಿಸುತ್ತಿದ್ದಾರೆ. ಕೃಷಿ ಸಂಶೋಧನೆಗಳು ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಇದುವರೆಗೂ ಯಾವುದೇ ಬೌದ್ಧಿಕ ಆಸ್ತಿ ಹಕ್ಕುಗಳ ವ್ಯಾಪ್ತಿಯಲ್ಲಿ ಬರುತ್ತಿರಲಿಲ್ಲ. ಯಾಕೆಂದರೆ ಇವು ಪ್ರಕೃತಿಯ ಕೊಡುಗೆ. ಭಾರತದಲ್ಲಿ ಉಪಯುಕ್ತ ಪ್ರಭೇದಗಳು ಲಕ್ಷಾಂತರದಷ್ಟು ಇವೆ. ರೈತರಿಗೆ ತಳಿಗಳ ಮೇಲೆ ಹಕ್ಕಿದೆ ಅಥವಾ ಇವುಗಳನ್ನು ಗುರುತಿಸಿದ ತಳಿ ಶಾಸ್ತ್ರಜ್ಞರಿಗೆ

ಇದರ ಮೇಲೆ ಹಕ್ಕಿದೆ ಎಂಬ ವಿಚಾರವೇ ತಿಳಿಯದು. ಉರುಗ್ವೆ ಸುತ್ತಿನ ಮಾತುಕತೆಯ ನಂತರ ಕೃಷಿವಲಯಕ್ಕೂ ಬೌದ್ಧಿಕ ಆಸ್ತಿ ಹಕ್ಕುಗಳನ್ನು ನಿರ್ದೇಶಿಸುವ ಪ್ರಕ್ರಿಯೆ ಪ್ರಾರಂಭವಾಗಿದೆ. ಇದರಿಂದಾಗಿ ಇಂದು ಕಾಡಿನಲ್ಲಿ ವಿಫುಲವಾಗಿ ಬೆಳೆಯುವ ಉಪಯುಕ್ತ ಸಸ್ಯಗಳನ್ನು ರೈತರು ಆಯ್ದು ಬೆಳೆಯುವುದಕ್ಕೂ ಕುತ್ತು ಬಂದಿದೆ. ರೈತರು ಆಯ್ದು ಬೆಳೆಸುವ ಸಸ್ಯಗಳ ಮೇಲೆ ಯಾರು ಹಕ್ಕುಗಳನ್ನು ಪಡೆದಿರುತ್ತಾರೋ ಅದು ರೈತರಿಗೆ ತಿಳಿದೇ ಇರುವುದಿಲ್ಲ. ಆದ್ದರಿಂದ ಇಂದು ಬೇವಿನಂತ ಕಾಡು ಸಸ್ಯಕ್ಕೂ ಪೇಟೆಂಟ್ ಪಡೆಯುವ ಸಂಸ್ಥೆಗಳಿವೆ. ಪೇಟೆಂಟ್ ಪಡೆದ ನಮತರ ಬೆಳೆದು ಅಭಿವೃದ್ಧಿಪಡಿಸುವ ಹಕ್ಕುಗಳು ಸಂಸ್ಥೆಗಳಿಗೆ ಸೇರಿರುತ್ತದೆ. ಈ ಸಂಸ್ಥೆಗಳಿಗೆ ರಾಯಲ್ಟಿ ಕೊಡದೇ ಈ ತಳಿಗಳನ್ನು ರೈತರು ಮುಟ್ಟಲಾಗುವುದಿಲ್ಲ. ಆದ್ದರಿಂದ ಒಂದು ಕಾಲದಲ್ಲಿ ಮುಕ್ತವಾಗಿದ್ದ ಜೈವಿಕ ವಲಯ ಇಂದು ಬೌದ್ಧಿಕ ಆಸ್ತಿ ಹಕ್ಕುಗಳ ಕಾನೂನುಗಳ ಸುಳಿಯಲ್ಲಿ ಸಿಲುಕಿ ರೈತರಿಗೆ ಮಾರಕವಾಗಲಿದೆ (ಸೋಮಶೇಖರ್, ೨೦೦೪).

**೨.೫.೧. ಕೃಷಿವಿಜ್ಞಾನ ಸಾಹಿತ್ಯದ ಮೇಲೆ ಆಧುನಿಕ ಕೃಷಿಯ ಪರಿಣಾಮ**

ಬಹುಪಾಲು ಕೃಷಿವಿಜ್ಞಾನ ಸಾಹಿತ್ಯವೆಲ್ಲ ನಗರಗಳಿಂದ ಪ್ರಕಟವಾಗುತ್ತವೆ ಹಾಗೂ ಅವು ಅಪರೂಪವಾಗಿ ಗ್ರಾಮೀಣ ಪ್ರದೇಶಗಳ ಜನರ ಅವಶ್ಯಕತೆಗಳಿಗೆ ಪ್ರತಿಸ್ಪಂದಿಸುತ್ತವೆ. ವಾರ್ಡ್ (೧೯೫೫) ಹೇಳುವಂತೆ, 'ವೃತ್ತ ಪತ್ರಿಕೆಗಳು ನಗರದ ಉತ್ಪನ್ನಗಳು ಹಾಗೂ ಅವು ನಗರ ತತ್ವಸಿದ್ಧಾಂತಗಳನ್ನು, ಪೂರ್ವಾಗ್ರಹಗಳನ್ನು ಮತ್ತು 'ಜಾಣ ಕುರುಡುತನ'ವನ್ನು ಹೊಂದಿರುತ್ತವೆ. ಪತ್ರಿಕೆಗಳು ನಗರ ಮತ್ತು ಗ್ರಾಮೀಣ ಜನರ ನಡುವಿರುವ ತಲತಲಾಂತರಗಳ ವರ್ಷಗಳ ಅಂತರವನ್ನು ಕಡಮೆ ಮಾಡಬೇಕಾದ ಪ್ರಯತ್ನ ಮಾಡಬೇಕಿದೆ. ಆ ಪ್ರಯತ್ನವನ್ನು ಬೆರಳೆಣಿಕೆಯಷ್ಟು ಪತ್ರಿಕೆಗಳು ಮಾತ್ರ ಮಾಡಿವೆ'.

ದೇಶೀಯ ಕೃಷಿ ತಂತ್ರಜ್ಞರೂ ಕೂಡ ರೈತ ಭಾಷೆಯಲ್ಲಿ ವ್ಯವಹರಿಸುವ ಪ್ರೀತಿಯನ್ನು ತೋರುವ ಧಾರಾಳಿಗಳಲ್ಲ. ಇವರ ಕಲಿಕೆಯೂ ಇಂಗ್ಲಿಷಿನದ್ದೆ, ಅಲ್ಲಿ ಕಲಿಸುವವರೂ ಗಿಳಿಪಾಠದಂತೆ ಒಂದಷ್ಟು ಇಂಗ್ಲಿಷಿನಲ್ಲಿ ಹೇಳಿ, ಕನ್ನಡದಲ್ಲಿ ಹೇಳುವುದೇ ಕಷ್ಟ ಎನ್ನುವ ಪರಿಯವರು. ಅಂದಮೇಲೆ ಇವರಿಂದ ಕನ್ನಡದಲ್ಲಿ ಬರವಣಿಗೆಯನ್ನು ನಿರೀಕ್ಷಿಸುವುದಾದರೂ ಹೇಗೆ? ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಸಾವಿರಾರಲ್ಲದಿದ್ದರೂ ನೂರಾರು ಕೃಷಿ ಸಂಬಂಧಿ ಪುಸ್ತಕಗಳು ಪ್ರಕಟವಾಗಿವೆ. ನಮ್ಮ ರೈತ ಒಟ್ಟಂದದಲ್ಲಿ ಇಂತಹ ಪುಸ್ತಕ ತಮ್ಮಲ್ಲಿ ಬೆಳಕು ಮೂಡಿಸಿದೆ ಎಂದು ಹೇಳುವ ಕೆಲಸವನ್ನು ನಮ್ಮವರ್‍ಯಾರೂ ಮಾಡಿಲ್ಲ ಎನ್ನುವುದು ನಾಚಿಕೆಗೇಡಿನ ಸಂತಿಯೇ ಸರಿ. ಮೊದಲ ದಶಕಗಳಲ್ಲಿ ಸುಲಭಸಾಧ್ಯವಾದ ಸರ್ಕಾರಿ ಕೆಲಸದ ಆಸಕ್ತಿಯಿಂದ ಕೃಷಿ ಪರಿಣಿತರಾದರೇ ವಿನಃ ರೈತರನ್ನು ತಲುಪುವ ಆಸಕ್ತಿಯಿಂದಲ್ಲ.

ಕೃಷಿಕರನ್ನೇ ನೇರವಾಗಿ ಓದುಗರನ್ನಾಗಿ ಆಲೋಚಿಸಿ ಗಮನಿಸಿ ಬರೆದಂತಹ ಪುಸ್ತಕಗಳೇ ತೀರ ಇತ್ತೀಚಿನವರೆಗೂ ಬರಲಿಲ್ಲ. ಪ್ರಕಟವಾದ ಪುಸ್ತಕಗಳೂ ಸಹ ರೈತನಲ್ಲಿ ಕ್ರಾಂತಿಯನ್ನುಂಟುಮಾಡಲಿಲ್ಲ ಎಂಬುದು ಅಪ್ರಿಯವಾದರೂ ಸತ್ಯ. ೬೦ರ ದಶಕದ ಹಸಿರು ಕ್ರಾಂತಿಯು ಅಧಿಕ ಉತ್ಪಾದನೆಯ ದೃಷ್ಟಿಕೋನವನ್ನು ಮುಖ್ಯ ಗುರಿಯಾಗಿಟ್ಟುಕೊಂಡು ರೈತರ ಆಕರ್ಷಣೆಗೆ ಮೊದಲಾಯಿತು. ಗೊಬ್ಬರಗಳು, ಅಧಿಕ ಇಳುವರಿ ತಳಿಗಳು ಮುಂತಾದ ಹೆಸರಿನಲ್ಲಿ ಹೊಸ ಹೊಸ ಒಳಸುರಿಗಳು, ರಾಸಾಯನಿಕ ಗೊಬ್ಬರ, ಬೀಜ, ಕೀಟನಾಶಕ ಮುಂತಾದುವುಗಳ ಗೂಪದಲ್ಲಿ ರೈತರನ್ನು ಹೊಸ ತಂತ್ರಜ್ಞಾನಗಳೆಂದು ಪರಿಚಯಿಸಬೇಕಿತ್ತು. ಅಲ್ಲದೆ ಇವೇ ಆಹಾರದ ಉತ್ಪಾದನೆಯ ಪ್ರಮುಖ ಸಾಧನಗಳು ಎಂದು ಆಧುನಿಕ ಕೃಷಿ ಪದ್ಧತಿಯ ಕಲಿಕೆಯಲ್ಲೂ ಸೇರಿಸಿ ಕಳೆದ ಶತಮಾನದ ಪ್ರಮುಖ ಬೆಳವಣಿಗೆಯಾಗಿ ಗುರುತಿಸಲಾಗಿತ್ತು. ಎಂತಹ ಕ್ರಮವೆಂದರೆ ಸಾಂಪ್ರದಾಯಿಕ ಕೃಷಿ ಎಂದರೆ ಈ ಪಾಶ್ಚಾತ್ಯ ಮಾದರಿಯ ಕಲಿಕೆಯನ್ನಾಧರಿಸಿದ, ಗೊಬ್ಬರ ಮುಂತಾದ ಒಳಸುರಿಗಳು ಕಾರ್ಖಾನೆಗಳನ್ನು ಉದ್ಧರಿಸಬಲ್ಲಂತಹ ಕಲಿಕೆಯ ವಸ್ತುವುಳ್ಳವು ಎಂಬಂತಾಯಿತು. ಪಾರಂಪರಿಕ ಕೃಷಿ ಜ್ಞಾನಕ್ಕೂ ಅತ್ಯಂತ ಬೇಗ ರೈತರನ್ನಾವರಿಸಿದ ಈ ಆಧುನಿಕ ಕೃಷಿ ಕುರಿತ ಸಾಹಿತ್ಯವೇ ಒಂದರ್ಥದಲ್ಲಿ ಆಧುನಿಕ ತಂತ್ರಜ್ಞಾನಗಳನ್ನು ಬೆಂಬಲಿಸುವ ಪುಸ್ತಕಗಳಾದುವು (ಚನ್ನೇಶ್, ೨೦೦೪).

ಡಿಸೆಂಬರ್ ೧೯೯೭ರಿಂದ ಮೇ ೧೯೯೮ರವರೆಗಿನ ಕರ್ನಾಟಕದ ರೈತರ ಆತ್ಮಹತ್ಯೆಗಳ ಬಗೆಗಿನ ಅಧ್ಯಯನವೊಂದರಲ್ಲಿ (ವಾಸವಿ, ೧೯೯೯) ಹೇಗೆ ವಾಣಿಜ್ಯ ಕೃಷಿ ಪರಿಸರ, ಆರ್ಥಿಕ ಹಾಗೂ ಸಾಮಾಜಿಕ ದುಸ್ಥಿತಿಗಳಿಗೆ ಕಾರಣವಾಗಿದೆ ಹಾಗೂ ತನ್ಮೂಲಕ ರೈತರನ್ನು ಆತ್ಮಹತ್ಯೆಯೆಡೆಗೆ ದೂಡುತ್ತಿದೆಯೆಂದು ತಿಳಿಸಿದ್ದಾರೆ. ವಾಣಿಜ್ಯ ಕೃಷಿಯೆಂದರೆ ರೈತರು ಸಂಪೂರ್ಣವಾಗಿ ಕೃಷಿ ವಿಸ್ತರಣಾ ಸೇವೆ, ಮಾರುಕಟ್ಟೆ, ಕೃಷಿ ವ್ಯಾಪಾರ ಏಜೆನ್ಸಿಗಳು, ಸಾಲಸೌಲಭ್ಯ ಒದಗಿಸುವ ಸಂಸ್ಥೆಗಳು ಹಾಗೂ ಏಜೆಂಟರ ಅಡಿಯಾಳಾಗಬೇಕಾಗುತ್ತದೆ. ಅದುವರೆಗೂ ಕೃಷಿಯೆಂದರೆ, ಸ್ಥಳೀಯ ಜ್ಞಾನದ ಸ್ಥಾಪಿತ ತತ್ವಗಳಾಧಾರಿತವಾಗಿತ್ತು, ಕುಟುಂಬದ ಎಲ್ಲರೂ ಸಲಹೆ ಸೂಚನೆ ನೀಡಬಹುದಾಗಿದ್ದ ಕೌಟುಂಬಿಕ ಕಸುಬಾಗಿತ್ತು. ಈಗ ಸಂಪೂರ್ಣವಾಗಿ ಬಾಹ್ಯ ಜ್ಞಾನ ಹಾಗೂ ನಿಯಂತ್ರಕ ಶಕ್ತಿಗಳನ್ನು ಅವಲಂಬಿಸಬೇಕಾಯಿತು. ಹೊಸ ತಳಿಗಳ ಬೇಸಾಯದಲ್ಲಿ ಶತಶತಮಾನಗಳಿಂದ ಅವರಿಗೆ ದೊರೆತಿದ್ದ ಸಾಂಪ್ರದಾಯಿಕ ಕೃಷಿಜ್ಞಾನ ನಿಷ್ಪ್ರಯೋಜನವಾಯಿತು. ಅವರಿಗೆ ಬೀಜ, ಸಸಿ ಒದಗಿಸುವ ಕಂಪೆನಿಗಳ ಮೇಲೆ ಬಿತ್ತನೆ, ಗೊಬ್ಬರ ಬಳಕೆ, ನೀರಾವರಿ ಮುಂತಾದ ಮಾಹಿತಿಗಳಿಗಾಗಿ ಅವಲಂಬಿತವಾಗಬೇಕಾಯಿತು. ಸಸ್ಯ ಸಂರಕ್ಷಣೆ ಮತ್ತು ಇತರ ತಾಂತ್ರಿಕ ಮಾಹಿತಿಗಾಗಿ ರೈತರು ಕಂಪೆನಿಗಳೊಂದಿಗೆ ನಿಕಟ ಸಂಪರ್ಕವಿರಿಸಿಕೊಳ್ಳಬೇಕಾಯಿತು.

**೨.೫.೨. 'ಬದಲಿ ಕೃಷಿ' ಮತ್ತು ಕೃಷಿವಿಜ್ಞಾನ ಸಾಹಿತ್ಯ**

ಹಸಿರು ಕ್ರಾಂತಿಗೆ ಹಾದಿ ಮಾಡಿಕೊಟ್ಟ ಆಧುನಿಕ ಕೃಷಿ ಹಲವಾರು ಸಾಮಾಜಿಕ, ಆರ್ಥಿಕ ಹಾಗೂ ಪರಿಸರ ಸಮಸ್ಯೆಗಳನ್ನು ಹುಟ್ಟುಹಾಕಿತು. ಇರುವ ಜಾಗದಲ್ಲಿ ಹೆಚ್ಚು ಹೆಚ್ಚು ಬೆಳೆಯಬೇಕಾಯಿತು. ಭೂಮಿ ತನ್ನ ಸ್ವಾಭಾವಿಕ ಫಲವತ್ತತೆ ಕಳೆದುಕೊಳ್ಳತೊಡಗಿತು. ಫಲವತ್ತತೆ ಹೆಚ್ಚಿಸಲು ರಾಸಾಯನ ಗೊಬ್ಬರಗಳನ್ನು ಬಳಸಬೇಕಾಯಿತು. ಹೊಸ ಹೊಸ ಅಧಿಕ ಇಳುವರಿ ತಳಿಗಳ ಅವಿಷ್ಕಾರ ಮಾಡಬೇಕಾಯಿತು. ಹಾಗೇ ಬೆಳೆಗಳನ್ನು ಕಾಡುವ ರೋಗಗಳು, ಕೀಟಗಳೂ ಸಹ ಹೆಚ್ಚಾಗತೊಡಗಿದವು. ಅವುಗಳನ್ನು ನಿಯಂತ್ರಿಸಲು ಕೀಟನಾಶಕ, ರೋಗನಾಶಕಗಳನ್ನು ಕಂಡುಹಿಡಿಯುಲಾಯಿತು. ಅವುಗಳನ್ನು ಸತತವಾಗಿ ಉಪಯೋಗಿಸಿದಂತೆ ಅವುಗಳನ್ನೂ ಸಹಿಸಿಕೊಳ್ಳುವಂತಹ ಹೊಸ ಹೊಸ ಕೀಟಗಳು, ರೋಗಗಳು ಹುಟ್ಟಿಕೊಳ್ಳತೊಡಗಿದವು. ಹಾಗೇ ಇನ್ನೂ ಹೆಚ್ಚು ಹೆಚ್ಚು ಶಕ್ತಿಯುತ ರಾಸಾಯನಿಕಗಳನ್ನು ಬಳಸಬೇಕಾಗಿ ಬಂತು.

ಇದರಿಂದಾಗಿ ಪರಿಸರದ ಜೀವರಾಶಿಗಳ ಸಮತೋಲನವೇ ಹಾಳಾಗುತ್ತಿದೆ. ರಾಸಾಯನಗಳನ್ನು ಉಪಯೋಗಿಸಿ ಬೆಳೆಸಿದ ಆಹಾರಗಳು ಮನುಷ್ಯನಲ್ಲಿ ಹಲವಾರು ರೋಗಗಳನ್ನುಂಟು ಮಾಡುತ್ತವೆ. ಪರಿಸರವೇ ವಿಷಪೂರಿತವಾಗುತ್ತಿದೆ. ಹೊಸ ತಳಿಗಳನ್ನು ಉಪಯೋಗಿಸಿ ಬೇಸಾಯ ಮಾಡಬೇಕಾದಲ್ಲಿ ರಸಗೊಬ್ಬರ, ರಾಸಾಯನಗಳನ್ನು ಉಪಯೋಗಿಸಲೇಬೇಕಾದ ಅನಿವಾರ್ಯ ಪರಿಸ್ಥಿತಿ ಬಂದೊದಗಿದೆ.

ಕೃಷಿಯಲ್ಲಿ ಮನುಷ್ಯ ಪ್ರಕೃತಿಯೊಂದಿಗೆ ಸಹಕರಿಸಬೇಕೇ ಹೊರತು ಅದನ್ನು 'ಜಯಿಸಿ' ಇನ್ನೂ 'ಅಭಿವೃದ್ಧಿ'ಪಡಿಸುವುದರ ಮೂಲಕವಲ್ಲ. ಗಿಡಮರ ಬೆಳೆಯುವುದನ್ನು ಯಾರೂ ಪ್ರಕೃತಿಗೆ ಹೇಳಿಕೊಡುವುದಿಲ್ಲ. ಪ್ರಕೃತಿಯಲ್ಲಿನ ಜೀವರಾಶಿ ಒಂದಕ್ಕೊಂದು ಸಹಕರಿಸಿಕೊಂಡು ಬದುಕಬಲ್ಲವು. ಪ್ರಕೃತಿಯೇ ಮಾಡುವ ಗಿಡಮರಗಳ ಬಿತ್ತನೆ ಅಷ್ಟು ಸುಲಭವಾಗಿ ರೋಗರುಜಿನಗಳಿಗೆ ತುತ್ತಾಗುವಷ್ಟು ದುರ್ಬಲವಾಗಿರುವುದಿಲ್ಲ. ಬಹಳಷ್ಟು ಗಿಡಮರಗಳು ರೋಗನಿಯಂತ್ರಣ ರಾಸಾಯನಗಳನ್ನು ತಾವೇ ಉತ್ಪಾದಿಸುತ್ತವೆ. ಈ ಆಲೋಚನೆಯನ್ನು ಪ್ರತಿಪಾದಿಸುವ ವಿಜ್ಞಾನವನ್ನೇ ಗುಮಾನಿಯಿಂದ ನೋಡುವ ಜಪಾನಿನ ವಿಜ್ಞಾನಿಯಾದ ಮಸಾನೊಬು ಫುಕುವೊಕರ ಸಹಜ ಕೃಷಿಯ ಬಗೆಗೆ ಕನ್ನಡದಲ್ಲಿ ೧೯೮೮ರಲ್ಲಿ ಪ್ರಕಟವಾಯಿತು. (ಬಾಲಕೃಷ್ಣ, ೧೯೮೮). ಈ ಸಹಜ ಕೃಷಿಯ ವಿಧಾನವನ್ನು 'ಋಷಿ ಬೇಸಾಯ' ಎಂತಲೂ ಕರೆಯುತ್ತಾರೆ. ಕೆಲವರು ಅದನ್ನು 'ಕೆಲಸವೇ ಇಲ್ಲದ ಕೃಷಿ'(ಡೂ ನಥಿಂಗ್ ಫಾರ್ಮಿಂಗ್) ಎನ್ನುತ್ತಾರೆ. ಫುಕುವೊಕ ಅದನ್ನು 'ಗಾಂಧಿ ವಿಧಾನ' ಎಂದೂ ಕರೆದಿದ್ದಾರೆ.

ಇಂದು ಕರ್ನಾಟಕದ ಬಹುಪಾಲು ಎಲ್ಲ ರೈತರಿಗೂ ಸಾವಯವ ಕೃಷಿಯ ಬಗ್ಗೆ ಹೆಚ್ಚೆಚ್ಚು ಅರಿವು ಮೂಡುತ್ತಿದೆ. ಇಂದು ವಿಶ್ವವಿದ್ಯಾನಿಲಯಗಳು, ಸರ್ಕಾರದ ಇಲಾಖೆಗಳು, ಹಲವಾರು ಸ್ವಯಂ ಸೇವಾ ಸಂಸ್ಥೆಗಳು ಸಾವಯವ ಕೃಷಿಯನ್ನು ಅನುಸರಿಸುವಂತೆ ಹೇಳುತ್ತಿವೆ. ಸಾವಯವ ಗೊಬ್ಬರಗಳ ಪ್ರಾಮುಖ್ಯತೆಯ ಬಗ್ಗೆ ೧೯೪೯ರಷ್ಟು ಹಿಂದೆಯೇ ಗೋವಿಂದರಾಜನ್ (೧೯೪೯) ಎಂಬ ಕೃಷಿ ಅಧಿಕಾರಿ ಬರೆದಿದ್ದರು. ವಿರೋಧಿ ಸಂವತ್ಸರದ (೧೯೪೯-೧೯೫೦) **'ಮೈಸೂರು ವ್ಯವಸಾಯದ ಪಂಚಾಂಗ'**ದ ಸಂಚಿಕೆಯ 'ಸಾವಯವ ಗೊಬ್ಬರಗಳು' ಎಂಬ ಲೇಖನದಲ್ಲಿ,

> **ಜಮೀನಿನ ಫಲವತ್ತನ್ನು ಸತತವಾಗಿ ಕಾಪಾಡಿಕೊಂಡು ಬರುವುದಕ್ಕೆ ಸಾವಯನ ಗೊಬ್ಬರಗಳನ್ನು ಉಪಯೋಗಿಸುವುದು ಎಷ್ಟು ಮುಖ್ಯವೆಂಬುದು ನಮ್ಮ ರೈತರಿಗೆ ಇನ್ನೂ ಅಷ್ಟು ಮಂದಟ್ಟಾಗಿಲ್ಲ. ಅವನ್ನೇ ಹಾಕುತ್ತಿದ್ದರೆ ಜಮೀನು ಬೀಳಾಗುವುದು ನಿಜ. ಸಾವಯವ ಗೊಬ್ಬರಗಳು ಹಾಗಲ್ಲ; ಅವುಗಳ ಪ್ರಯೋಜನ ಸ್ವಲ್ಪ ಫಲವತ್ತನ್ನು ಕೂಡಿಸಿಕೊಡುತ್ತದೆ. ಸಸ್ಯಗಳಿಗೆ ಆಹಾರವನ್ನು ಕೂಡಿಸಿ, ಫಲವತ್ತನ್ನು ಬೆಳೆಸುವುದರಲ್ಲಿ ಕೇಂದ್ರಪಾತ್ರವನ್ನು ವಹಿಸುವ ಈ ಸಾವಯವಾಂಶಕ್ಕೆ 'ಹ್ಯೂಮಸ್' ಎಂದು ಹೆಸರು**

ಎಂದು ಬರೆದಿದ್ದಾರೆ. ಹಸಿರು ಕ್ರಾಂತಿಯ ಬಗ್ಗೆ ಕೊಂಚ ತಡವಾಗಿಯಾದರೂ ಹತಾಶನಾದ ರೈತ ಬದಲಿ ವಿಧಾನಗಳನ್ನು ಹಾಗೂ ಜ್ಞಾನ ವಿನಿಮಯದ ಮಾಧ್ಯಮಗಳನ್ನು ಅರಸತೊಡಗಿದ್ದಾನೆ. ಇಂದು ವಿಶ್ವದಾದ್ಯಂತ ಚಾಲ್ತಿಯಲ್ಲಿರುವ ಬದಲಿ ಕೃಷಿ ವಿಧಾನಗಳು ಬಹುಪಾಲು ಈ ಮುಂದಿನ ಅಂಶಗಳನ್ನು ಒಳಗೊಂಡಿರುತ್ತವೆ:

೧. ಪರಿಸರ ಸ್ನೇಹಿ ಮತ್ತು ಸುಸ್ಥಿರ ವಿಧಾನಗಳು.
೨. ನಿರ್ದಿಷ್ಟ ಭೌಗೋಳಿಕ ಪರಿಸರದ ರೈತರ ಅನಿಸಿಕೆ ಮತ್ತು ಅನುಭವಗಳಿಗೆ ಆದ್ಯತೆ ಮತ್ತು
೩. ಕೃಷಿಯ ಬಗೆಗೆ ಹೋಲಿಸ್ಟಿಕ್ ಅಪ್ರೋಚ್.

ಈ ಉದ್ದೇಶಗಳ ಹಿಂದೆ ಕೃಷಿ ಸಂವಹನ ಕ್ರಿಯೆಯಲ್ಲಿಯೂ ಸಹ ಬಹಳಷ್ಟು ಬದಲಾವಣೆಗಳಾಗಿವೆ. ವಿಜ್ಞಾನಿಗಳ ಸಂಶೋಧನೆಗಳ ಫಲಿತಾಂಶಗಳನ್ನು ರೈತನ ಅನುಭವಗಳೊಂದಿಗೆ ತಾಳೆಹಾಕಿ ನೋಡಲಾಗುತ್ತಿದೆ. ಕನ್ನಡದಲ್ಲಿ ಈ ರೀತಿಯ ಬದಲಿ ಕೃಷಿ ಪತ್ರಿಕೋದ್ಯಮದ ಉದಾಹರಣೆಗಳೆಂದರೆ 'ಅಡಿಕೆ ಪತ್ರಿಕೆ', 'ಹಿತ್ತಲ ಗಿಡ', 'ಸಿರಿಸಮೃದ್ಧಿ' ಮುಂತಾದುವು.

## ೨.೬. ೨೧ನೇ ಶತಮಾನದ ಕೃಷಿ ಮತ್ತು ಕೃಷಿ ಸಾಹಿತ್ಯ

1990ರಿಂದೀಚೆಗೆ ಆಧುನಿಕ ಕೃಷಿ ವಿಧಾನಗಳಲ್ಲಿ, ಅದರಲ್ಲೂ ಜೀವತಂತ್ರಜ್ಞಾನದ 'ಟರ್ಮಿನೇಟರ್' ತಂತ್ರಜ್ಞಾನ, ಅಮೆರಿಕದ ಕಂಪೆನಿಗಳು ಅರಿಶಿನ ಹಾಗೂ ಬಾಸ್‌ಮತಿ ಅಕ್ಕಿಯ ಪೇಟೆಂಟ್‌ಗಳ ಬಗೆಗೆ, ಜಾಗತಿಕ ವ್ಯಾಪಾರ ಮತ್ತು ಪೇಟೆಂಟ್ ನೀತಿಗಳನ್ನು ಭಾರತದಂತಹ ತೃತೀಯ ಜಗತ್ತಿನ ರಾಷ್ಟ್ರಗಳ ಮೇಲೆ ಬಲವಂತವಾಗಿ ಹೇರುವಿಕೆಯ ಬಗೆಗೆ ತೀವ್ರ ಚರ್ಚೆ ಪ್ರಾರಂಭವಾಯಿತು. ಹೊಸ ತಂತ್ರಜ್ಞಾನ ಕೃಷಿ ಇಳುವರಿಯಲ್ಲಿ ಅತ್ಯಧಿಕ ಹೆಚ್ಚಳವನ್ನು ತೋರುತ್ತಿದ್ದರೂ ಜಗತ್ತಿನ ಅರ್ಧಕ್ಕೂ ಹೆಚ್ಚು ಜನ ಹಸಿವಿನಿಂದ ನರಳುತ್ತಿದ್ದಾರೆ (ಆಶಿಶ್ ಕೊಥಾರಿ, 1999). 1990ರಿಂದೀಚೆಗೆ ಭಾರತದ ಆರ್ಥಿಕ ನೀತಿಗಳಲ್ಲಿಯೂ ಬದಲಾವಣೆ ಕಂಡುಬಂದಿತು– ಸ್ವಾವಲಂಬನೆಯಿಂದ ಮುಕ್ತ ಆರ್ಥಿಕತೆ ಮತ್ತು ಖಾಸಗೀಕರಣದತ್ತ ಅದರ ಒಲವು ಬದಲಾಗತೊಡಗಿತು. ರಫ್ತು ಮಾರುಕಟ್ಟೆಯನ್ನು ಸಂತೃಪ್ತಗೊಳಿಸಲು ಕೃಷಿ ಕ್ಷೇತ್ರದಲ್ಲಿ ವಾಣಿಜ್ಯೀಕರಣಕ್ಕೆ ಹೆಚ್ಚು ಒತ್ತು ನೀಡಲಾಯಿತು. ಆಹಾರ ಧಾನ್ಯಗಳ ಉತ್ಪಾದನೆಯನ್ನು ಕಡೆಗಣಿಸಿ ಪುಷ್ಪಕೃಷಿ, ಕೈಗಾರಿಕಾ ಮತ್ಸ್ಯೋದ್ಯಮಗಳಿಗೆ ಉತ್ತೇಜನ ನೀಡಲಾಯಿತು. ವಾಣಿಜ್ಯ ಹಾಗೂ ಕೈಗಾರಿಕಾ ಹಂತದ ಕೃಷಿಗೆ ಅನುವಾಗುವಂತೆ ಭೂಸ್ವಾಮ್ಯ ಕಾನೂನುಗಳನ್ನೂ ಸಹ ಬದಲಿಸಿತು (ಆಶಿಶ್ ಕೊಥಾರಿ, 1999).

ರೈತರಿಗೆ ಕೃಷಿ ಮಾಡುವುದನ್ನು ಕಲಿಸುವ ಪುಸ್ತಕಗಳು ಖಂಡಿತಾ ಬೇಕಿಲ್ಲ. 'ಮೀನಿಗೆ ಈಜು ಕಲಿಸುವ ಮಾದರಿಯ' ಆಧುನಿಕ ಕೃಷಿ ಪುಸ್ತಕಗಳು ಬೇಕಿಲ್ಲ. ರೈತಾಪಿಯಲ್ಲಿ ವೈಜ್ಞಾನಿಕ ಸತ್ಯಗಳನ್ನು ನಿಸರ್ಗದ ತತ್ವಗಳ ಆಧಾರದ ಮೇಲೆ ಹೇಳುವ ಪುಸ್ತಕಗಳು ಬೇಕಿವೆ. ಇವುಗಳನ್ನು ಪ್ರಾಯೋಗಿಕವಾಗಿ ಚರ್ಚಿಸುವ ಲೇಖನಿ ಬೇಕಿದೆ (ಚನ್ನೇಶ್, ೨೦೦೪).

ಆಧುನಿಕ ಬೇಸಾಯದ ಹೊಡೆತಕ್ಕೆ ಸಿಲುಕಿ ಗ್ರಾಮಗಳಲ್ಲಿ ಕೃಷಿ ಸಂಸ್ಕೃತಿ ನಾಶವಾಗುತ್ತಿರುವ ಸಂದರ್ಭದಲ್ಲಿ, ನೆಲಮೂಲ ಜ್ಞಾನದಿಂದ ಜಾಗತೀಕರಣದ ಅಪಾಯವನ್ನು ಎದುರಿಸಲು ಸಾಧ್ಯ ಎನ್ನುವ ಕನ್ನಡ ಪುಸ್ತಕ ಪ್ರಾಧಿಕಾರವು ೨೦೦೬ ಮೇ ತಿಂಗಳಲ್ಲಿ 'ದೇಸಿ ಕೃಷಿ ಕಮ್ಮಟ' ನಡೆಸಿ ದೇಸಿ ಕೃಷಿಸಜ್ಞಾನವನ್ನು ದಾಖಲಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಲು ತೀರ್ಮಾನಿಸಿದೆ. ಈ ಕಮ್ಮಟದಲ್ಲಿ, 'ಕೃಷಿ ವಿಶ್ವವಿದ್ಯಾಲಯ, ಸಂಶೋಧನಾ ಕೇಂದ್ರಗಳ ತಜ್ಞರು ಬರೆದಿದ್ದೇ ಕೃಷಿ ಸಾಹಿತ್ಯವೆಂದು ವಿಜೃಂಭಿಸುತ್ತಿದೆ. ಆದರೆ ಅವರ ಅನುಭವ ಸೀಮಿತ. ನಾಡಿನ ಬಹುಸಂಖ್ಯಾತರ (ರೈತರ) ಜ್ಞಾನವನ್ನು ಜಗತ್ತಿನಿಂದ ವಂಚಿಸುವಂತೆ ಮಾಡುವುದು ಎಷ್ಟು ಸರಿ? ಕೃಷಿ ನಿಜವಾದ ವಾರಸುದಾರರಾದ ರೈತರಿಗೆ ಸಂಶೋಧಕರ ಪ್ರಬಂಧಗಳಿಂದ ಪ್ರಯೋಜನ ಆಗಿದೆಯೆ? ಐವತ್ತು ವರ್ಷಗಳ ಹಿಂದೆ ಸುಖದಿಂದ ಬದುಕುತ್ತಿದ್ದ ರೈತ ಈಗ ಆತ್ಮಹತ್ಯೆಗೆ ಮುಂದಾಗಿದ್ದಾನೆ. ಇಷ್ಟೊಂದು

ಸಂಶೋಧನೆ ನಡೆದ ಬಳಿಕವೂ! ಜಾಗತೀಕರಣದ ಕಿಡಿ ಸಾಂಪ್ರದಾಯಿಕ ಜ್ಞಾನವನ್ನು ಸುಟ್ಟು ಹಾಕುತ್ತಿದೆ. ಈಗಲೇ ಎಚ್ಚೆತ್ತುಕೊಳ್ಳದಿದ್ದರೆ ಮುಂದಿನ ಪೀಳಿಗೆ ಅನುಭವಿಸುವ ಕಷ್ಟಗಳಿಗೆ ನಾವೇ ಹೊಣೆಯಾಗುತ್ತೇವೆ. ಹಾಗಾಗಿ ಪ್ರಾಧಿಕಾರ ಈ ಕೆಲಸಕ್ಕೆ ಮುಂದಾಗಿದೆ' ಎಂದು ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ.ಎಸ್.ಜಿ.ಸಿದ್ಧರಾಮಯ್ಯನವರು ಹೇಳಿದ್ದಾರೆ (ಆನಂದತೀರ್ಥ ಪ್ಯಾಟಿ, ೨೦೦೬). ಈ ಮಾತುಗಳು ವಿವಾದಾಸ್ಪದ ಹಾಗೂ ಏಕಪಕ್ಷೀಯವಾದರೂ ಜೈವಿಕ ಸಮೃದ್ಧತೆಯನ್ನು, ಪಂಚಭೂತಗಳನ್ನೂ ಬಳಸಿಕೊಂಡ ನೆಲಮೂಲ ಜ್ಞಾನ ಇಂದು ಅಗತ್ಯವೆನ್ನುವುದರಲ್ಲಿ ಎರಡು ಮಾತಿಲ್ಲ. ಜಾನಪದ ಕ್ಷೇತ್ರದಲ್ಲಿ ಇಂಥ ಕೆಲಸ ಯಶಸ್ವಿಯಾಗಿದೆ. ಆದರೆ ಕೃಷಿವಲಯದಲ್ಲಿ ಕೆಲವು ಸ್ವಯಂಸೇವಾ ಸಂಸ್ಥೆಗಳು ಮಾತ್ರ ಸಾಂಪ್ರದಾಯಿಕ ಜ್ಞಾನ ಹುಡುಕಿ ದಾಖಲಿಸುತ್ತಿವೆ.

ಬದಲಿ ಕೃಷಿ ಮಾಧ್ಯಮ ಕೇಂದ್ರದ ನಿರ್ದೇಶಕರಾಗಿರುವ ಶಿವರಾಂ ಪೈಲೂರರ (೨೦೦೫) ಪ್ರಕಾರ ಕೃಷಿ ಸಾಹಿತ್ಯ ಮತ್ತು ಪತ್ರಿಕೋದ್ಯಮ ಮಾಹಿತಿ ಸಂವಹನವನ್ನೂ ಮೀರಿ ರೈತರನ್ನು ತಲುಪಬೇಕಿದೆ. ಅಂದರೆ,



೧. ರೈತರಿಗಾಗಿ ಅವಶ್ಯಕತೆ ಆಧಾರಿತ ಸಂವಹನ ವ್ಯವಸ್ಥೆ ಇರಬೇಕು.

೨. ಕೃಷಿ ಸಂವಹನದಲ್ಲಿ ಬದಲಿ ಪ್ರಯತ್ನಗಳನ್ನು ಉತ್ತೇಜಿಸುವುದು.

೩. ರೈತರಲ್ಲಿ ಸ್ವ-ಸಹಾಯ ಪತ್ರಿಕೋದ್ಯಮವನ್ನು ಉತ್ತೇಜಿಸುವುದು.



೪. ರೈತರ ಮತ್ತು ಸರ್ಕಾರದ/ವಿಜ್ಞಾನಿಗಳ ನಡುವಿನ ಅಂತರವನ್ನು ಕಡಿಮೆಮಾಡುವುದು.

೫. ರೈತರ ಅನ್ವೇಷಣೆ/ಸಂಶೋಧನೆ ಮತ್ತು ರೈತಪರ ವಿಷಯಗಳ ಮೇಲೆ ಕೇಂದ್ರೀಕರಿಸುವುದು.

೬. ಬದಲಿ ಕೃಷಿ ಮತ್ತು ಬದಲಿ ಕೃಷಿ ಮಾಧ್ಯಮಗಳ ಬಗೆಗೆ ಗ್ರಂಥಾಲಯವನ್ನು ಸ್ಥಾಪಿಸುವುದು, ಇವೇ ಮುಂತಾದುವು.

ಕೃಷಿಕರ ಬೇಕು-ಬಯಕೆಗೆ ಸ್ಪಂದಿಸುವ, ಕೃಷಿಕರ ಹಿತ ಬಯಸುವ ಮಾಹಿತಿ ಕೊರತೆ ಬಹುಕಾಲದಿಂದಲೂ ಇದ್ದು, ಕೃಷಿಕರ ಸಂವಹನ ಅರ್ಥಪೂರ್ಣ ಹಾಗೂ ಉಪಯುಕ್ತ ಆಗಬೇಕಾದರೆ ಕೃಷಿಕರು ಓದುಗರಾಗಿ ಮಾತ್ರವಲ್ಲ, ಬರಹಗಾರರಾಗಿಯೂ ರೂಪು ಪಡೆಯಬೇಕೆಂಬ ಆಶಯದಿಂದ ಪುತ್ತೂರಿನ 'ಫಾರ್ಮರ್ಸ್ ಫಸ್ಟ್' ಎಂಬ ಟ್ರಸ್ಟ್ 'ಕೃಷಿಕರ ಕೈಗೆ ಲೇಖನಿ' ಎಂಬ ಕೃಷಿ ಮತ್ತು ಗ್ರಾಮೀಣ ಪತ್ರಿಕೋದ್ಯಮ ಶಿಬಿರಗಳನ್ನು ನಡೆಸಿದೆ. ರೈತರಿಗಾಗಿ ಬರೆಯುವುದಕ್ಕಿಂತ ರೈತರೇ ಬರೆದಲ್ಲಿ ಗುಣಮಟ್ಟದಲ್ಲಿ ಅತ್ಯುತ್ತಮವಾಗುವುದೆನ್ನುವ ಪ್ರಸಾದ್ (೨೦೦೫) ಈ ಎರಡೂ ರೀತಿಯ ಬರಹಗಳ

ನಡುವಿನ ವ್ಯತ್ಯಾಸವನ್ನು ವಿವರಿಸುತ್ತಾರೆ. ರೈತರೇ ಸ್ವತಃ ಬರೆದಲ್ಲಿ ಅವರು ತಮ್ಮ ಅನುಭವಗಳನ್ನು ಸಹರೈತರಿಗೆ ಸಂವಹಿಸಿದರೆ, ವಿಜ್ಞಾನಿ ಅಥವಾ ವಿಸ್ತರಣ ಸಿಬ್ಬಂದಿ ತಮ್ಮ 'ಜ್ಞಾನ'ವನ್ನು ಸಂವಹಿಸಲು ಪ್ರಯತ್ನಿಸುತ್ತಾರೆ. ರೈತರ ಸಂವಹನದಲ್ಲಿ ಭಾಗವಹಿಸುವಿಕೆ ರೀತಿಯು ಸಂವಹನವಿದ್ದರೆ, ವಿಜ್ಞಾನಿಗಳ ಸಂವಹನದಲ್ಲಿ ನಿರ್ದೇಶ ರೀತಿಯು ಸಂವಹನವಿರುತ್ತದೆ. ರೈತರದು ಸಾಮಾನ್ಯವಾಗಿ ಸರಳ ಆಡುಮಾತಿನ, ಸುಲಭವಾಗಿ ಓದಿಸಿಕೊಂಡು ಹೋಗುವ ಭಾಷೆಯಾದರೆ, ವಿಷಯ ತಜ್ಞರದು ಸಂಕೀರ್ಣ, ಪಠ್ಯಪುಸ್ತಕದ ಹಾಗೂ ಓದಲು ಕಷ್ಟವಾಗುವ ಭಾಷೆಯಾಗಿರುತ್ತದೆ. ರೈತರದು ಸ್ವ-ಅನುಭವ ಆಧಾರಿತ ಬರವಣಿಗೆಯಾದರೆ ಇತರರದು ಇತರ ಮೂಲಗಳಿಂದ ಪಡೆದ ಜ್ಞಾನವಾಗಿರುತ್ತದೆ. ರೈತರ ಬರವಣಿಗೆಯಲ್ಲಿ ಭಾವನಾತ್ಮಕ ವಸ್ತು ವಿಷಯ ನಿರೂಪಣೆಯಿದ್ದರೆ ವಿಜ್ಞಾನಿಗಳದು ವಿಷಯದ ನಿರೂಪಣೆಯಷ್ಟೆ ಆಗಿರುತ್ತದೆ. ಪ್ರಸಾದ್ ಹೇಳುವಂತೆ ರೈತರದು ಆತ್ಮವಿಶ್ವಾಸದ, ಮಾನವ ಕೇಂದ್ರಿತ ಬರವಣಿಗೆ ಹಾಗೂ ಇತರರದು ಆತ್ವವಿಶ್ವಾಸದ ಕೊರತೆಯ, ಯಾಂತ್ರಿಕ ಮತ್ತು ಪರಕೀಯ ಬರವಣಿಗೆಯಾಗಿರುತ್ತದೆ.

## ೨.೭. ಭವಿಷ್ಯದ ಕೃಷಿ ಸಾಹಿತ್ಯ ಮತ್ತು ಇಂಟರ್‌ನೆಟ್

ಇಂದು ಎಲ್ಲ ಕೃಷಿ ಇಲಾಖೆಗಳು, ವಿಶ್ವವಿದ್ಯಾನಿಲಯಗಳು ಹಾಗೂ ಸಂಬಂಧಿಸಿದ ಇತರ ಇಲಾಖೆಗಳು ಇಂಟರ್‌ನೆಟ್ ವೆಬ್‌ಸೈಟ್‌ಗಳನ್ನು ಹೊಂದಿವೆ. ಅದರ ಮೂಲಕ ರೈತರಿಗೆ ಎಲ್ಲ ಮಾಹಿತಿ ಒದಗಿಸಲು ಪ್ರಯತ್ನಿಸುತ್ತಿವೆ. ಇನ್ನು ಕೆಲವೇ ವರ್ಷಗಳಲ್ಲಿ ಹಳ್ಳಿಹಳ್ಳಿಯಲ್ಲಿಯೂ ಇಂಟರ್‌ನೆಟ್ ಲಭ್ಯವಾಗಬಹುದು. ಆಗ ಪುಸ್ತಕ, ಪತ್ರಿಕೆ ಮುಂತಾದುವನ್ನು ಯಾರೂ ಓದುವುದಿಲ್ಲವೆಂಬ ಆತಂಕ ಕೆಲವರಲ್ಲಿದೆ. ಇಂಗ್ಲಿಷಿನಲ್ಲಿ ಈಗಾಗಲೇ ಬಹಳಷ್ಟು ಪುಸ್ತಕಗಳು ಇಂಟರ್‌ನೆಟ್‌ನಲ್ಲಿ ಉಚಿತವಾಗಿ ಲಭಿಸುತ್ತವೆ. ಕೃಷಿ ಸಾಹಿತ್ಯವನ್ನೊಳಗೊಂಡಂತೆ ಎಲ್ಲ ಕನ್ನಡ ಸಾಹಿತ್ಯವೂ ಡಿಜಿಟಲ್ ಸಾಹಿತ್ಯವಾಗಿಬಿಡುವುದರಲ್ಲಿ ತ್ತದೆಯೆ?

1999ರಲ್ಲಿ ಇಂಟೆಲ್ ಕಂಪೆನಿಯ ಮುಖ್ಯಸ್ಥನಾಗಿದ್ದ ಆಂಡಿ ಗ್ರೋವ್ 2004ರ ಹೊತ್ತಿಗೆ ಸಣ್ಣ ಕಿರಾಣಿ ಅಂಗಡಿಯಿಂದ ಹಿಡಿದು ಬೃಹತ್ ಏರೋಪ್ಲೇನ್ ಕೈಗಾರಿಕೆಗಳವರೆಗೆ ಎಲ್ಲವೂ ಇಂಟರ್‌ನೆಟ್ ಮೇಲೆ ಅವಲಂಬಿಸಬೇಕಾಗುತ್ತದೆ, ಇಲ್ಲದಿದ್ದಲ್ಲಿ ಅವುಗಳಿಗೆ ಅಸ್ತಿತ್ವೇ ಇರುವುದಿಲ್ಲವೆಂದು ಹೇಳಿದ್ದ (ಜಾನ್ ನಾಟನ್, 2006). ಆಗ ಆತನ ಮಾತಿಗೆ ಎಲ್ಲರೂ ನಕ್ಕಿದ್ದರು. ಇಂಟರ್‌ನೆಟ್ ಒಂದು ಆಧುನಿಕ ಫ್ಯಾಶನ್ ಆಗದೆ ವಿದ್ಯುಚ್ಛಕ್ತಿ ಅಥವಾ ಟೆಲಿಫೋನ್‌ನಂತೆ ಒಂದು ಅತ್ಯಂತ ಅವಶ್ಯಕ ಮಾಧ್ಯಮವಾಗುವುದೆಂದು ಗ್ರೋವ್ ನಂಬಿದ್ದ. ವಿದ್ಯುತ್ ಅಥವಾ ಟೆಲಿಫೋನ್ ಇಲ್ಲದೆ ಇಂದು ಯಾವುದೇ ವ್ಯಾಪಾರ ವಹಿವಾಟು ಸಾಧ್ಯವಿಲ್ಲ. ಅದೇ ರೀತಿ ಇಂಟರ್‌ನೆಟ್ ಇಲ್ಲದೆ ಈ ಸ್ಪರ್ಧಾತ್ಮಕ ಜಗತ್ತಿನಲ್ಲಿ

ಯಾವುದೇ ವ್ಯಾಪಾರ ವಹಿವಾಟು ನಡೆಸುವುದು ಸಾಧ್ಯವಿಲ್ಲವೆಂಬುದು ಆತನ ಅನಿಸಿಕೆಯಾಗಿತ್ತು.

ಅದೇ ರೀತಿಯೇ ಸಂವಹನ ಮಾಧ್ಯಮಗಳಲ್ಲೂ ಕ್ರಾಂತಿಯಾಗುತ್ತಿದೆ. ಸಂವಹನ ಮಾಧ್ಯಮಗಳಲ್ಲಿ ಎರಡು ರೀತಿಯ ತಂತ್ರಜ್ಞಾನವಿದೆಯೆಂದು ಜಾನ್ ನಾಟನ್ (2006) ಹೇಳುತ್ತಾರೆ. ಒಂದು 'ತಳ್ಳು' (Push), ಮತ್ತೊಂದು 'ಎಳೆ' (Pull) ತಂತ್ರಜ್ಞಾನ. ಈಗ ಇರುವ ದೂರದರ್ಶನ ತಂತ್ರಜ್ಞಾನ 'ತಳ್ಳು' ಮಾಧ್ಯಮ, ಅಂದರೆ, ಆಯಾ ಚಾನೆಲ್‌ನವರು ಬಿತ್ತರಿಸುವ (ತಳ್ಳುವ) ಕಾರ್ಯಕ್ರಮಗಳನ್ನಷ್ಟೇ ನಾವು ನೋಡಬೇಕು. ಆದರೆ ಇಂಟರ್‌ನೆಟ್ ಒಂದು 'ಎಳೆ'ಯುವ ಮಾಧ್ಯಮ, ಅಂದರೆ, ಬೇಕಾದನ್ನು ನಾವು 'ಎಳೆದು' ಪಡೆದುಕೊಳ್ಳಬಹುದು; ಆಯ್ಕೆ ನಮ್ಮ ಕೈಯಲ್ಲಿರುತ್ತದೆ.

ಇದು ಮುದ್ರಣ ಮತ್ತು ಸಾಹಿತ್ಯ ಕ್ಷೇತ್ರಕ್ಕೂ ಅನ್ವಯಿಸುತ್ತದೆ. ಈ ಕ್ಷೇತ್ರಗಳಲ್ಲಿನ ಇಂಟರ್‌ನೆಟ್‌ನ ಪರಿಣಾಮ ಹಾಗೂ ಪ್ರಭಾವ ಈಗಷ್ಟೇ ಪ್ರಾರಂಭವಾಗಿದೆ. ಪುಸ್ತಕಗಳನ್ನು ಡಿಜಿಟೀಕೃತಗೊಳಿಸಿ. ಅವು ವೆಬ್‌ನಲ್ಲಿ ಸಿಗುವಂತೆ ಮಾಡುವ ಪ್ರಯತ್ನಗಳು ೧೯೭೦ರಿಂದಲೂ ನಡೆಯುತ್ತಿವೆ (ಆಂಡ್ರಿಯಾಸ್ ವಾನ್ ಬಬ್ನಾಫ್, ೨೦೦೫). ೫೦,೦೦೦ಕ್ಕೂ ಹೆಚ್ಚು ಕಾಪಿರೈಟ್ ಇಲ್ಲದ ಪುಸ್ತಕಗಳು ಉಚಿತವಾಗಿ ವೆಬ್‌ನಲ್ಲಿ ಲಭ್ಯವಿರುವ ಪ್ರಾಜೆಕ್ಟ್ ಗುಟೆನ್‌ಬರ್ಗ್ 4ನೇ ಜುಲೈ 1971ರಲ್ಲಿ ಪ್ರಾರಂಭವಾಯಿತು.

ಉತ್ತರ ಅಮೆರಿಕಾದ ಕಾರ್ನೆಲ್ ವಿಶ್ವವಿದ್ಯಾನಿಲಯವು ತನ್ನ ಗ್ರಂಥಾಲಯದ ಆನ್‌ಲೈನ್ ಆವೃತ್ತಿಯನ್ನು ವೆಬ್‌ನಲ್ಲಿ ಹೊಂದಿದ್ದು (ವೆಬ್ ವಿಳಾಸ: http://chla.library.cornell.edu/c/chla/browse/a.html) ಅದರಲ್ಲಿ ಹತ್ತೊಂಭತ್ತನೇ ಶತಮಾನದ ಪ್ರಾರಂಭದಿಂದ ಪ್ರಕಟವಾಗಿರುವ ಎಲ್ಲ ವೈಜ್ಞಾನಿಕ ಇಂಗ್ಲಿಶ್ ಪುಸ್ತಕಗಳನ್ನು ಸಮಗ್ರವಾಗಿ ಮೊದಲನೆಯ ಪುಟದಿಂದ ಕೊನೆಯ ಪುಟದವರೆಗೂ ಡಿಜಿಟಲ್ ರೂಪದಲ್ಲಿ ಹೊಂದಿದೆ. ಅದರಲ್ಲಿ ಹತ್ತೊಂಭತ್ತನೆಯ ಶತಮಾನದ ಅಂತ್ಯದವರೆಗೂ ಕೃಷಿಸಾಹಿತ್ಯದ ೨೧೯ ಕೃತಿಗಳಿದ್ದು ಅವುಗಳ ಸಂಪೂರ್ಣ ಪಠ್ಯ ಉಚಿತವಾಗಿ ಇಂಟರ್‌ನೆಟ್‌ನಲ್ಲಿ ಲಭ್ಯವಿದೆ.

## ೩. ಸಂಶೋಧನಾ ವಿಧಿ ವಿಧಾನ

ಪ್ರತಿಯೊಂದು ಸಾಹಿತ್ಯ ಕೃತಿಯೂ ಒಂದು ಗೊತ್ತಾದ ಕಾಲದಲ್ಲಿ, ಗೊತ್ತಾದ ಜಾಗದಲ್ಲಿ ಲೇಖಕನ ಪರಿಸರ ಪ್ರಜ್ಞೆಗಳಿಗೆ ಅನುಗುಣವಾಗಿ ಸಿದ್ಧಗೊಂಡಿರುತ್ತದೆ. ಚರಿತ್ರೆಯೊಳಗೆ ನಡೆಯುವ ಸಾಂಸ್ಕೃತಿಕ ಚಲನೆಗಳಿಗೆ ಸ್ಪಂದಿಸುತ್ತ ಅವನ್ನು ವಿಶಿಷ್ಟ ರೀತಿಯಲ್ಲಿ ಕಾಣಿಸುವುದರಲ್ಲಿ ಸಾಹಿತ್ಯದ ಮಹತ್ವವಿದೆ. ಕೃಷಿ ಸಂಸ್ಕೃತಿ ಮತ್ತು ವಿಜ್ಞಾನದ ಸಮ್ಮಿಳನವಾಗಿರುವುದರಿಂದ, ಅಲ್ಲದೆ ೨೧ನೇ ಶತಮಾನದಲ್ಲಿ ಸಂಸ್ಕೃತಿಗಿಂತ ವಿಜ್ಞಾನದ್ದೇ ಮೇಲುಗೈಯಾಗಿರುವುದರಿಂದ ಕೃಷಿ ಸಾಹಿತ್ಯ ಬೆಳೆದುಬಂದ ಹಾದಿಯನ್ನು ಪ್ರಾರಂಭದಿಂದ ಗುರುತಿಸಿ ಅಧ್ಯಯನ ನಡೆಸುವುದು ಅವಶ್ಯಕವಾಗಿದೆ. ಈ ಹಿನ್ನೆಲೆಯಿಂದ ಪ್ರಸ್ತುತ ಸಂಶೋಧನೆಯಲ್ಲಿ ಸಂಶೋಧನಾ ಸಾಮಗ್ರಿ ಸಂಗ್ರಹ ಮತ್ತು ವ್ಯಾಖ್ಯಾನಗಳಿಗಾಗಿ ಅನುಸರಿಸಿದ ವಿವಿಧ ವಿಧಾನಗಳನ್ನು ವಿವರವಾಗಿ ನೀಡಲಾಗಿದೆ.

### ೩.೧ ಅಧ್ಯಯನ ಸಾಮಗ್ರಿ

ಅಧ್ಯಯನದ ಸಲುವಾಗಿ ಹತ್ತೊಂಬತ್ತನೇ ಶತಮಾನದ ಅಂತ್ಯದಿಂದ ಇದುವರೆಗೆ ಕನ್ನಡದಲ್ಲಿ ಪ್ರಕಟವಾಗಿರುವ ಕೃಷಿವಿಜ್ಞಾನ ಸಾಹಿತ್ಯದ ಅವಲೋಕನ, ಮಾಹಿತಿ ಸಂಗ್ರಹ ಹಾಗೂ ಟಿಪ್ಪಣಿ ಮಾಡಿಕೊಳ್ಳುವ ಕಾರ್ಯ ನಡೆಸಲಾಯಿತು. ಈ ಉದ್ದೇಶಕ್ಕಾಗಿ ಈ ಮುಂದೆ ಪಟ್ಟಿಮಾಡಿರುವ ಸ್ಥಳಗಳಿಗೆ ಭೇಟಿ ನೀಡಲಾಯಿತು:

೧. ಕೃಷಿ ವಿಶ್ವವಿದ್ಯಾನಿಲಯದ ಗ್ರಂಥಾಲಯ, ಬೆಂಗಳೂರು

೨. ಕನ್ನಡ ಅಧ್ಯಯನ ವಿಭಾಗದ ಗ್ರಂಥಾಲಯ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು

೩. ಬೆಂಗಳೂರು ವಿಶ್ವವಿದ್ಯಾನಿಲಯದ ಗ್ರಂಥಾಲಯ, ಬೆಂಗಳೂರು

೪. ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಾಲಯ, ಮೈಸೂರು

೫. ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯ, ಹಂಪಿ

೬. ಕೃಷಿ ಇಲಾಖೆಯ ನಿರ್ದೇಶನಾಲಯದ ಗ್ರಂಥಾಲಯ, ಬೆಂಗಳೂರು

೭. ಮಿಥಿಕ್ ಸೊಸೈಟಿಯ ಗ್ರಂಥಾಲಯ, ಬೆಂಗಳೂರು

೮. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್, ಬೆಂಗಳೂರು

೯. ಹಲವಾರು ಖಾಸಗಿ ಪುಸ್ತಕ ಸಂಗ್ರಹಣೆಗಳು ಹಾಗೂ ಹಲವಾರು ಕೃಷಿವಿಜ್ಞಾನ ಸಾಹಿತಿಗಳೊಂದಿಗೆ ವಿಷಯ ಚರ್ಚೆ ನಡೆಸಲಾಯಿತು.

### ೩.೨ ಅಧ್ಯಯನ ಸಾಮಗ್ರಿ ವರ್ಗೀಕರಣ

ಅವಲೋಕಿಸಿದ ಕೃಷಿವಿಜ್ಞಾನ ಸಾಹಿತ್ಯದ ಪ್ರಕಟಣೆಗಳ ಸಂಪೂರ್ಣ ವಿವರಗಳನ್ನು ದಾಖಲಿಸಿ ಅವುಗಳ ವಸ್ತುವಿಷಯಗಳ ಬಗೆಗೆ ಟಿಪ್ಪಣಿ ಮಾಡಿಕೊಳ್ಳಲಾಯಿತು. ಸಂಗ್ರಹಿಸಿದ ಮಾಹಿತಿ, ಟಿಪ್ಪಣಿಗಳನ್ನು ಅಧ್ಯಯನದ ಉದ್ದೇಶಗಳಿಗನುಗುಣವಾಗಿ, ಸಂಗ್ರಹಿಸಿದ ಮಾಹಿತಿಯನ್ನು ಈ ಮುಂದಿನಂತೆ ವರ್ಗೀಕರಿಸಿಕೊಳ್ಳಲಾಯಿತು:

೧. ಕೃಷಿವಿಜ್ಞಾನದ ಪುಸ್ತಕ ರೂಪದ ಸಾಹಿತ್ಯ

೨. ಕೃಷಿವಿಜ್ಞಾನ ಪತ್ರಿಕೆಗಳು

೩. ದಿನಪತ್ರಿಕೆ/ವಾರ್ತಾಪತ್ರಿಕೆಗಳಲ್ಲಿನ ಕೃಷಿ ಪುರವಣಿಗಳು ಮತ್ತು ಅಂಕಣಗಳು

೪. ಕೃಷಿ ಜಾನಪದ, ವಿಶೇಷವಾಗಿ ಕೃಷಿ ಗಾದೆಗಳು

ಕೃಷಿವಿಜ್ಞಾನ ಸಾಹಿತ್ಯ ವಿಕಾಸದ ತರ್ಕಬದ್ಧ ವಿಶ್ಲೇಷಣೆಗಾಗಿ ಸಂಗ್ರಹಿಸಿದ ಮಾಹಿತಿಯನ್ನು ಕಾಲಾವಧಿಯ ಆಧಾರದ ಮೇಲೆ ಮೂರು ಹಂತಗಳಾಗಿ ವಿಂಗಡಿಸಿಕೊಂಡು, ನಂತರ ಆ ವಸ್ತು ವಿಷಯಗಳ ವಿಶ್ಲೇಷಣಾ ಕಾರ್ಯವನ್ನು ಕೈಗೊಳ್ಳಲಾಯಿತು:

೧. ಮೊದಲನೆಯ ಹಂತ– ೧೯ನೆಯ ಶತಮಾನದ ಅಂತ್ಯದಿಂದ ೧೯೪೭ರವರೆಗೆ:

೨. ಎರಡನೆಯ ಹಂತ– ೧೯೪೮ರಿಂದ ೧೯೮೦ರವರೆಗೆ

೩. ಮೂರನೆಯ ಹಂತ– ೧೯೮೧ರಿಂದ ಇಂದಿನವರೆಗೂ

ಕೃಷಿವಿಜ್ಞಾನ ಸಾಹಿತ್ಯದ ಉಗಮ ಮತ್ತು ಬೆಳವಣಿಗೆಯನ್ನು ಈ ರೀತಿಯ ಕಾಲಾವಧಿಯ ಆಧಾರದ ಮೂರು ಹಂತಗಳಾಗಿ ವಿಂಗಡಿಸಿಕೊಳ್ಳಲು ಕಾರಣಗಳು:

೧. ಕೃಷಿವಿಜ್ಞಾನ ಸಾಹಿತ್ಯದ ಉಗಮ ೧೯ನೆಯ ಶತಮಾನದ ಅಂತ್ಯದಿಂದ ಪ್ರಾರಂಭವಾಗಿರುವುದನ್ನು ಕಾಣಬಹುದು.

೨. ೧೯೪೭ರವರೆಗೆ ಭಾರತ ಬ್ರಿಟಿಷರ ಆಡಳಿತದಲ್ಲಿದ್ದುದರಿಂದ ಮತ್ತು ಮೈಸೂರು ರಾಜ್ಯ ಮೈಸೂರು ಮಹಾರಾಜರ ಆಳ್ವಿಕೆಯಲ್ಲಿದ್ದುದರಿಂದ, ಸ್ವಾತಂತ್ರ್ಯಾನಂತರದ ಕೃಷಿವಿಜ್ಞಾನ ಸಾಹಿತ್ಯ ಕ್ಷೇತ್ರದ ಬೆಳವಣಿಗೆಯನ್ನು ತುಲನಾತ್ಮಕವಾಗಿ ನೋಡುವುದು ಸಾಧ್ಯ.

೩. ಸ್ವಾತಂತ್ರ್ಯಾನಂತರ ಭಾರತ ಅನುಭವಿಸಿದ ಆಹಾರ ಧಾನ್ಯಗಳ ಅಭಾವ ಹಾಗೂ ಅದರ ನಿವಾರಣೆಗೆ ನೂತನ ಭಾರತ ಸರ್ಕಾರ ಕೈಗೊಂಡ ಪರಿಹಾರೋಪಾಯಗಳು ಮತ್ತು ಅಂತಹ ಪರಿಹಾರ ಮಾರ್ಗವಾದ 'ಹಸಿರು ಕ್ರಾಂತಿ' ಉಂಟುಮಾಡಿದ ಭಾರತ ಕೃಷಿಕ್ಷೇತ್ರದಲ್ಲಿನ ಬದಲಾವಣೆಗಳ ವಿಶ್ಲೇಷಣೆ. ಈ ಬದಲಾವಣೆಗಳು ರೂಪಿಸಿದ ಕೃಷಿವಿಜ್ಞಾನ ಸಾಹಿತ್ಯ, ಅದರ ರೂಪುರೇಷೆಗಳು ಹಾಗೂ ಅವು ಮುನ್ನಡೆದ ದಿಕ್ಕಿನ ಅಧ್ಯಯನ ಸಾಧ್ಯತೆ.

೪. ಭಾರತದ ಕೃಷಿ ಕ್ಷೇತ್ರದಲ್ಲಿ ೧೯೮೦ರ ಅವಧಿ ತೀರಾ ಸಂದಿಗ್ಧವಾದುದು. ಅದು ಒಂದು ರೀತಿಯ ಕೃಷಿ ಕ್ಷೇತ್ರದಲ್ಲಿನ ಬೆಳವಣಿಗೆಗಳ ಮೌಲ್ಯಮಾಪನ ಸಮಯ. ಅದು ಹಸಿರು ಕ್ರಾಂತಿಯಿಂದಾದ ಪರಿಸರ, ಸಂಸ್ಕೃತಿ, ಸಾಮಾಜಿಕತೆ ಮತ್ತು ಆರ್ಥಿಕತೆಯ ಮೇಲುಂಟಾದ ಪರಿಣಾಮಗಳನ್ನು ವಿಶ್ಲೇಷಿಸಿ ಕೃಷಿ ಹೊಸದಿಕ್ಕಿನಲ್ಲಿ ಸಾಗಬೇಕೆಂಬ ಕೂಗು ಹೆಚ್ಚು ಸ್ಫುಟವಾಗತೊಡಗಿದ ಸಮಯ.

೫. 'ಹಸಿರು ಕ್ರಾಂತಿ'ಯನ್ನೇ ಅಂತಿಮ ಪರಿಹಾರವೆಂದುಕೊಂಡವರು ಬೆಚ್ಚಿಬೀಳುವಂತೆ ಕೃಷಿವಿಜ್ಞಾನ ಸಂಶೋಧನೆಗಳು ಮುನ್ನಡೆಯತೊಡಗಿದವು. ಅದರಲ್ಲೂ ಆಹಾರ ಸಮಸ್ಯೆಗೆ, ಸಸ್ಯ ಕೀಟ ಮತ್ತು ರೋಗಗಳ ಸಮಸ್ಯೆಗೆ ಜೀವತಂತ್ರಜ್ಞಾನ ಹಸಿರು ಕ್ರಾಂತಿಗಿಂತ ಹೆಚ್ಚು ಸುರಕ್ಷಿತ ಪರಿಹಾರ ಒದಗಿಸಿಕೊಡಬಲ್ಲದೆಂಬುದಾಗಿ ಕೆಲವರು ಹೇಳಿದರೆ ಅದು ಮತ್ತಷ್ಟು ಸಮಸ್ಯೆಗಳನ್ನು ತಂದೊಡ್ಡುತ್ತದೆ ಎಂದರು ಕೆಲವರು.

೬. ಇಡೀ ವಿಶ್ವವನ್ನು ಬೀಸುತ್ತಿರುವ ಜಾಗತೀಕರಣದಿಂದಾಗಿ ಪೇಟೆಂಟ್ ಮತ್ತು ಬೌದ್ಧಿಕ ಆಸ್ತಿ ಹಕ್ಕುಗಳ ಪರಿಕಲ್ಪನೆ ಬದಲಾಗಿರುವುದು, ಸರ್ಕಾರ ರೂಪಿಸುವ ರೈತ ವಿರೋಧಿ ಕೃಷಿ ನೀತಿಗಳು ಮುಂತಾದುವುಗಳಿಂದಾಗಿ ಭಾರತೀಯ ಕೃಷಿ ತನ್ನ ಸಾಂಪ್ರದಾಯಿಕ ಚೌಕಟ್ಟನ್ನು ತೊರೆದು ಸಂಪೂರ್ಣವಾಗಿ ವಾಣಿಜ್ಯ ಉದ್ದಿಮೆಯಾಗಬೇಕಾದ ಅನಿವಾರ್ಯ ಪರಿಸ್ಥಿತಿ ಬಂದೊದಗುತ್ತಿದೆ. ರೈತನ ವ್ಯವಸಾಯದ ಬದುಕನ್ನು ಸಂಪೂರ್ಣವಾಗಿ ಬಹುರಾಷ್ಟ್ರೀಯ ಕಂಪೆನಿಗಳು ನಿಯಂತ್ರಿಸಬಹುದಾಗಿದೆ.

ಈ ಎಲ್ಲ ಪರಿಸ್ಥಿತಿಗಳು ಕನ್ನಡದ ಕೃಷಿವಿಜ್ಞಾನ ಸಾಹಿತ್ಯದ ರೂಪುರೇಷೆಯ ಮೇಲೆ ಮಹತ್ತರ ಪರಿಣಾಮಗಳನ್ನು ಬೀರುತ್ತಿರುವುದರಿಂದ ಆ ಹಿನ್ನೆಲೆಯ ಹಾಗೂ ಆ

ಹಿನ್ನೆಲೆ ರೂಪಿಸುತ್ತಿರುವ ಸಾಹಿತ್ಯದ ಅಧ್ಯಯನ ಈ ರೀತಿಯ ಕಾಲಾವಧಿ ವಿಭಜನೆಯಿಂದ ಸಾಧ್ಯವಿದೆ.

**೩.೩ ಕ್ಷೇತ್ರ ಸಮೀಕ್ಷೆ**

ಇಂದು ಕೃಷಿ ಪತ್ರಿಕೋದ್ಯಮ ಅತ್ಯಂತ ಹುಲುಸಾಗಿ ಬೆಳೆದಿದೆ. ಕನ್ನಡದ ಎಲ್ಲ ದಿನಪತ್ರಿಕೆಗಳು ವಾರಕ್ಕೊಮ್ಮೆ ಪ್ರತ್ಯೇಕ ಕೃಷಿ ಪುರವಣಿ/ಅಂಕಣಗಳನ್ನೇ ಪ್ರಕಟಿಸುತ್ತಿವೆ. ಕೃಷಿವಿಜ್ಞಾನ ಪುಸ್ತಕಗಳು ಸೀಮಿತ ಜನರನ್ನು ಮಾತ್ರ ತಲುಪುತ್ತವೆ. ಆದರೆ ದಿನಪತ್ರಿಕೆಗಳು ಇಂದು ಹಳ್ಳಿಹಳ್ಳಿಗೂ ತಲುಪುತ್ತದೆ. ೧೯೨೪ರಿಂದ ಇತ್ತೀಚಿನವರೆಗೂ ಕೇವಲ ಒಂದೇ ಒಂದು ಕೃಷಿ ಪತ್ರಿಕೆ ಹೊಂದಿದ್ದ ಕನ್ನಡ ಕೃಷಿ ಪತ್ರಿಕಾರಂಗದಲ್ಲಿ ಇಂದು ಇಪ್ಪತ್ತಕ್ಕೂ ಹೆಚ್ಚು ಪತ್ರಿಕೆಗಳಿವೆ. ರೈತರಿಗೆ ಮಾಹಿತಿ ಕೊಡುವ ಕಾಳಜಿಯನ್ನು ಕೆಲ ಪತ್ರಿಕೆಗಳು ಹೊಂದಿದ್ದರೆ ಇನ್ನು ಕೆಲವು ಕೃಷಿ ಆಧುನೀಕರಣ ಹಾಗೂ ಜಾಗತೀಕರಣ ಉಂಟುಮಾಡಿಕೊಟ್ಟಿರುವ ಅವಕಾಶಗಳಿಂದಾಗಿ ಕೇವಲ ಜಾಹೀರಾತು ಪ್ರಕಟಿಸುವ ಪತ್ರಿಕೆಗಳಾಗಿವೆ. ಇಲ್ಲಿ ಲಾಭದ ಗಳಿಕೆ ಎಷ್ಟಿದೆಯೆಂದರೆ ಅನ್ಯ ಭಾಷೆಯವರು, ಕನ್ನಡ ಬರದವರೂ ಸಹ ಕನ್ನಡ ಕೃಷಿ ಪತ್ರಿಕೆಗಳನ್ನು ಹೊರತರುತ್ತಿದ್ದಾರೆ. ಇದಲ್ಲದೆ ಈಗ ಇಂಟರ್‌ನೆಟ್ ಯುಗ. ಈಗಾಗಲೇ ಕನ್ನಡದ ಕೃಷಿವಿಜ್ಞಾನ ಮಾಹಿತಿ ಇಂಟರ್‌ನೆಟ್‌ನಲ್ಲಿ ಲಭ್ಯವಿದೆ. ಇಂಟರ್‌ನೆಟ್ ಮೂಲಕ ಕೃಷಿ ಉತ್ಪನ್ನದ ಬೆಲೆ ಇತ್ಯಾದಿ ತಿಳಿದುಕೊಳ್ಳುವುದರ ಜೊತೆಗೆ ಇಂಟರ್‌ನೆಟ್ ಮೂಲಕ ವ್ಯಾಪಾರ ವಹಿವಾಟು ನಡೆಸುವ ರೈತರೂ ಇದ್ದಾರೆ.

ಕೃಷಿವಿಜ್ಞಾನದ ಕನ್ನಡ ಪತ್ರಿಕೆ/ಪುರವಣಿ/ಅಂಕಣಗಳಲ್ಲಿ ಪ್ರಕಟವಾಗುವ ಕೃಷಿವಿಜ್ಞಾನ ಲೇಖನ, ಮಾಹಿತಿಗಳ ಬಗೆಗೆ ರೈತರಿಗೆ ಅರಿವಿದೆಯೆ? ಅವು ರೈತರ ಬದುಕಿನ ಮೇಲೆ ಎಷ್ಟು ಪ್ರಭಾವ ಬೀರುತ್ತಿವೆ ಎನ್ನುವುದರ ಅಧ್ಯಯನ ನಡೆಸಲಾಯಿತು. ಅದಕ್ಕಾಗಿ ಪ್ರತ್ಯೇಕ ಪ್ರಶ್ನಾವಳಿಯೊಂದನ್ನು ಸಿದ್ಧಪಡಿಸಿಕೊಂಡು ಅದನ್ನು ಪೂರ್ವಪರೀಕ್ಷೆಗೊಳಪಡಿಸಲಾಯಿತು. ಪೂರ್ವಪರೀಕ್ಷೆಯ ನಂತರ ಕಂಡುಬಂದ ಕೆಲವೊಂದು ದೋಷಗಳನ್ನು ಸರಿಪಡಿಸಿ ಅಂತಿಯ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಮಾಹಿತಿಯನ್ನು ಸಂಗ್ರಹಿಸಲಾಯಿತು. ಪ್ರಶ್ನಾವಳಿಯ ಮಾದರಿಯನ್ನು ಅನುಬಂಧ ೧ರಲ್ಲಿ ಕೊಡಲಾಗಿದೆ.

ರೈತರನ್ನು ಖುದ್ದಾಗಿ ಭೇಟಿಮಾಡಿ ಅವರಿಂದ ಮಾಹಿತಿ ಸಂಗ್ರಹಿಸಲು ಭೌಗೋಳಿಕ, ಸಾಂಸ್ಕೃತಿಕ, ಸಾಕ್ಷರತೆಯ ಹಾಗೂ ಕೃಷಿ ಪರಿಸರದ ದೃಷ್ಟಿಯಿಂದ ಎರಡು ಪ್ರತ್ಯೇಕ ಪ್ರದೇಶಗಳನ್ನು ಆರಿಸಿಕೊಳ್ಳಲಾಯಿತು:

೧. ಕೋಲಾರ ಜಿಲ್ಲೆಯ ಕೋಲಾರ ತಾಲ್ಲೂಕಿನ ಕೊಂಡರಾಜನಹಳ್ಳಿ, ಮದ್ದೇರಿ, ಕೋಡಿಹಳ್ಳಿ ಹಾಗೂ ಅಣ್ಣೇರಿ ಗ್ರಾಮಗಳ ಪ್ರದೇಶ. ಕೋಲಾರ ಜಿಲ್ಲೆ ೧೩.೦೯ ಉತ್ತರ ಅಕ್ಷಾಂಶ

ಹಾಗೂ ೭೮.೧೧ ಪೂರ್ವ ರೇಖಾಂಶಗಳಲ್ಲಿ ಸ್ಥಿತವಾಗಿದ್ದು ಕರ್ನಾಟಕದ ದಕ್ಷಿಣ ಪೂರ್ವ ಭಾಗದಲ್ಲಿದೆ. ಆಂಧ್ರಪ್ರದೇಶ ಹಾಗೂ ತಮಿಳುನಾಡುಗಳು ಇದರ ಗಡಿಭಾಗಗಳು. ಬಹುಪಾಲು ಮಳೆಯಾಶ್ರಿತ ಬೇಸಾಯದ, ಬಯಲುಸೀಮೆಯ ಈ ಜಿಲ್ಲೆ ದೇಶದಲ್ಲೇ ಹೆಚ್ಚಿನ ಸಂಖ್ಯೆಯ ಕೆರೆಗಳನ್ನು ಹೊಂದಿದೆ. ಉತ್ತಮ ಮಳೆಯಾಗಿ ಕೆರೆಗಳಲ್ಲಿ ಸಾಕಷ್ಟು ನೀರು ಸಂಗ್ರಹವಾದಲ್ಲಿ ಕೆಲವೆಡೆ ವರ್ಷಕ್ಕೆ ಮೂರು ಬೆಳೆಗಳನ್ನು ತೆಗೆದಿರುವ ಉದಾಹರಣೆಗಳೂ ಇವೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಮಳೆಯ ವಿಫಲತೆಯಿಂದಾಗಿ ಹಾಗೂ ಹೆಚ್ಚಿದ ಕೊಳವೆ ಬಾವಿಗಳ ಸಂಖ್ಯೆಯಿಂದಾಗಿ ಅಂತರ್ಜಲ ಮಟ್ಟ ಅಪಾಯಕಾರಿ ಮಟ್ಟಕ್ಕೆ ಇಳಿದು ಕೆಲವು ತಾಲ್ಲೂಕುಗಳನ್ನು ಸರ್ಕಾರವು 'ಕಪ್ಪು ಪ್ರದೇಶ'ವೆಂದು ಘೋಷಿಸಿ ಅಲ್ಲಿ ಕೊಳವೆ ಬಾವಿ ಕೊರೆಯುವುದನ್ನು ನಿಷೇಧಿಸಿತ್ತು.

ಕೋಲಾರ ತಾಲ್ಲೂಕಿನ ಪ್ರಮುಖ ಬೆಳೆಗಳೆಂದರೆ ರಾಗಿ, ಬತ್ತ, ನೆಲಗಡಲೆ, ಆಲೂಗೆಡ್ಡೆ, ಟೊಮೇಟೊ ಮತ್ತು ವಿವಿಧ ತರಕಾರಿಗಳು. ರೇಷ್ಮೆ ಮತ್ತು ಹೈನುಗಾರಿಕೆ ರೈತರಿಗೆ ನಿರಂತರ ಆದಾಯ ತಂದುಕೊಡುವ ಉಪ ಕೃಷಿಕಸುಬುಗಳು. ಕೋಲಾರ ತಾಲ್ಲೂಕಿನ ಸಾಕ್ಷರತೆ ಶೇ.೬೩.೧೪ರಷ್ಟಿದೆ.

೨. ಶಿವಮೊಗ್ಗ ಜಿಲ್ಲೆ ೧೩.೫೬ ಉತ್ತರ ಅಕ್ಷಾಂಶ ಮತ್ತು ೭೫.೩೮ ಪೂರ್ವ ರೇಖಾಂಶಗಳಲ್ಲಿ ಸ್ಥಿತವಾಗಿದ್ದು ಪಶ್ಚಿಮಘಟ್ಟಗಳ ಮಲೆನಾಡಿನಲ್ಲಿದೆ. ಕೋಲಾರ ಜಿಲ್ಲೆಗಿಂತ ಸಾಕ್ಷರತೆ ಹೆಚ್ಚಿರುವ (ಶೆ. ೬೮.೧೪) ಹಾಗೂ ಕೋಲಾರದಿಂದ ಸಾಂಸ್ಕೃತಿಕವಾಗಿ ವಿಭಿನ್ನವಾಗಿರುವ ಮಲೆನಾಡಿನ ತೀರ್ಥಹಳ್ಳಿ ತಾಲ್ಲೂಕಿನ ವಾಟಗಾರು, ತನಿಕಲ್, ಗುಬ್ಬಿಗ ಕಡೇಗದ್ದೆ, ಬೇಳೂರು ಮತ್ತು ಆರಗ ಗ್ರಾಮಗಳ ಪ್ರದೇಶಗಳಲ್ಲಿ ಕ್ಷೇತ್ರ ಸಮೀಕ್ಷೆ ನಡೆಸಲಾಯಿತು.

ಅಧಿಕ ಮಳೆಯಾಗುವ ಪಶ್ಚಿಮಘಟ್ಟಗಳ ಈ ತಾಲ್ಲೂಕಿನ ಪ್ರಮುಖ ಆಹಾರ ಬೆಳೆ ಬತ್ತ. ಸಾಮಾನ್ಯವಾಗಿ ಬತ್ತವನ್ನು ಸಮತಟ್ಟಾದ ಪ್ರದೇಶಗಳಲ್ಲಿ ಬೆಳೆಯುತ್ತಿದ್ದು ಬೆಟ್ಟಗುಡ್ಡಗಳಲ್ಲಿ ಅಡಿಕೆ ತೋಟಗಳನ್ನು ಹೊಂದಿರುತ್ತಾರೆ. ಅಡಿಕೆ ಇಲ್ಲಿನ ಪ್ರಮುಖ ವಾಣಿಜ್ಯ ಬೆಳೆ. ಕೆಲವರ್ಷಗಳಿಂದೀಚೆಗೆ ವೆನಿಲ್ಲಾ ಬೆಳೆಯನ್ನೂ ವಿಸ್ತೃತವಾಗಿ ಬೆಳೆಯಲಾಗುತ್ತಿದೆ.

ಪ್ರಶ್ನಾವಳಿಯಲ್ಲಿ ರೈತರ ಹಾಗೂ ಅವರ ಕುಟುಂಬದ ಮಾಹಿತಿ ಹಾಗೂ ವಾಸಸ್ಥಳ. ರೈತರ ವಯಸ್ಸು, ಶೈಕ್ಷಣಿಕ ಮಟ್ಟ, ರೈತರ ಭೂ ಹಿಡುವಳಿ ಗಾತ್ರ, ಸಮೂಹ ಮಾಧ್ಯಮಗಳಾದ ದಿನಪತ್ರಿಕೆ, ನಿಯತಕಾಲಿಕಗಳನ್ನು, ದೂರದರ್ಶನ ಮುಂತಾದುವುಗಳಲ್ಲಿ ಅವರ

ಭಾಗವಹಿಸುವಿಕೆ, ದಿನಪತ್ರಿಕೆಗಳಲ್ಲಿನ ಕೃಷಿ ಅಂಕಣ/ಲೇಖನಗಳನ್ನು, ಕೃಷಿ ನಿಯತಕಾಲಿಕೆಗಳನ್ನು ರೈತರು ಓದುತ್ತಾರೆಯೆ, ಕೃಷಿ ಅಂಕಣ/ಲೇಖನ, ಪತ್ರಿಕೆಗಳಲ್ಲಿನ ಬರಹ ರೈತರಿಗೆ ಸುಲಭವಾಗಿ ಅರ್ಥವಾಯುತ್ತದೆಯೆ, ಆ ಬರಹಗಳು ಅವರಿಗೆ ಅನ್ವಯಿಸುವಂತಿರುತ್ತವೆಯೆ, ರೈತರು ಅವನ್ನು ಅನುಸರಿಸುತ್ತಾರೆಯೆ, ಅವುಗಳನ್ನು ಅನುಸರಿಸುವುದು ಸುಲಭವೆ, ಅವುಗಳನ್ನು ಅನುಸರಿಸುವುದರಿಂದ ಅವರಿಗೆ ಲಾಭವಾಗುತ್ತದೆಯೆ, ಅಂತಹ ಸಾಹಿತ್ಯದಿಂದ ರೈತರು ಏನನ್ನು ನಿರೀಕ್ಷಿಸುತ್ತಾರೆ ಹಾಗೂ ಬರಹದ ರೀತಿ ಮತ್ತು ವಸ್ತು ವಿಷಯ ಹೇಗಿರಬೇಕು ಎಂಬುದರ ಬಗೆಗೆ ಮಾಹಿತಿ ಸಂಗ್ರಹಿಸಲಾಯಿತು.

**೩.೪ ಮಾಹಿತಿ ವಿಶ್ಲೇಷಣೆ**

೧. ಪರಾಮರ್ಶಿಸಿದ ಸಾಹಿತ್ಯದ ವಸ್ತು ವಿಶೇಷಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಿ, ಅವಲೋಕನಗಳನ್ನು ತರ್ಕಬದ್ಧವಾಗಿ ದಾಖಲಿಸಲಾಯಿತು.

೨. ಪ್ರಶ್ನಾವಳಿಯ ಮೂಲಕ ಸಂಗ್ರಹಿಸಿದ ಎರಡು ವಿಭಿನ್ನ ಪ್ರದೇಶದ ರೈತರ ಕೃಷಿ ಪತ್ರಿಕೋದ್ಯಮ ಸಾಹಿತ್ಯದ ಬಗೆಗಿನ ಅಭಿಪ್ರಾಯಗಳ ಮಾಹಿತಿಯನ್ನು ವಿಶ್ಲೇಷಿಸಿ, ಫಲಿತಾಂಶಗಳನ್ನು ವಿವರಿಸಿ ವಿವಿಧ ಕೋಷ್ಟಕಗಳಲ್ಲಿ ನೀಡಲಾಗಿದೆ.

೩. ಸಂಗ್ರಹಿಸಿದ ರೈತರ ಮೇಲಿನ ಕೃಷಿ ಸಾಹಿತ್ಯ ಪ್ರಭಾವದ ಅಂಕಿಅಂಶಗಳನ್ನು ಸಂಖ್ಯಾಶಾಸ್ತ್ರೀಯ ವಿಶ್ಲೇಷಣಾ ವಿಧಾನವಾದ $X^2$ ಪರೀಕ್ಷೆಗೆ ಒಳಪಡಿಸಿ ಪ್ರಭಾವದ ಗಮನಾರ್ಹತೆಯನ್ನು ತುಲನಾತ್ಮಕವಾಗಿ ಕಂಡುಹಿಡಿಯಲಾಯಿತು.

೪. ಈ ಅಧ್ಯಯನದನ್ವಯ ಕೃಷಿವಿಜ್ಞಾನ ಸಾಹಿತ್ಯ ಕ್ಷೇತ್ರದಲ್ಲಿ ಮುಂದೆ ನಡೆಸಬಹುದಾದ ಅಧ್ಯಯನಗಳನ್ನು ಗುರುತಿಸಲಾಗಿದೆ.

# ೪. ಫಲಿತಾಂಶ ಮತ್ತು ವಿಶ್ಲೇಷಣೆ

ಹಲವಾರು ಗ್ರಂಥಾಲಯ ಹಾಗೂ ಸಂಸ್ಥೆಗಳಿಗೆ ಭೇಟಿನೀಡಿ ಸಂಗ್ರಹಿಸಿದ ಕೃಷಿವಿಜ್ಞಾನ ಸಾಹಿತ್ಯದ ಪ್ರಕಟಣೆಗಳ ಸಂಪೂರ್ಣ ವಿವರ ಹಾಗೂ ವಸ್ತುವಿಷಯಗಳ ಟಿಪ್ಪಣಿಗಳನ್ನು ಅಧ್ಯಯನದ ಉದ್ದೇಶಗಳಿಗನುಗುಣವಾಗಿ, ತರ್ಕಬದ್ಧವಾಗಿ ವಿಂಗಡಿಸಿಕೊಂಡು ಲಭಿಸಿದ ಫಲಿತಾಂಶಗಳನ್ನು ಮತ್ತು ಪ್ರಶ್ನಾವಳಿಯ ಮೂಲಕ ಸಂಗ್ರಹಿಸಿದ ಎರಡು ವಿಭಿನ್ನ ಪ್ರದೇಶದ ರೈತರ ಕೃಷಿ ಪತ್ರಿಕೋದ್ಯಮ ಸಾಹಿತ್ಯದ ಬಗೆಗಿನ ಅಭಿಪ್ರಾಯಗಳ ಮಾಹಿತಿಯನ್ನು ವಿಶ್ಲೇಷಿಸಿ, ಪಡೆದ ಫಲಿತಾಂಶಗಳನ್ನು ಈ ಕೆಳಕಂಡ ಶೀರ್ಷಿಕೆಗಳಾಗಿ ವಿಂಗಡಿಸಿ ನೀಡಲಾಗಿದೆ.

## ೪.೧ ಕನ್ನಡದಲ್ಲಿ ಕೃಷಿವಿಜ್ಞಾನ ಸಾಹಿತ್ಯದ ಉಗಮ

ಕನ್ನಡದಲ್ಲಿ ಕೃಷಿ ಸಾಹಿತ್ಯದ ಉಗಮದ ಚರಿತ್ರೆಯ ಅಧ್ಯಯನಕ್ಕೆ ಪೂರಕವಾಗಿ ಕರ್ನಾಟಕದಲ್ಲಿನ ಕೃಷಿ ಅಭಿವೃದ್ಧಿಯ ಇತಿಹಾಸವನ್ನೂ ಅರಿಯುವುದು ಅತ್ಯವಶ್ಯಕವಾಗಿದೆ. ಯಾವುದೇ ಸಾಹಿತ್ಯ ಆಯಾ ಲೇಖಕನ ಪರಿಸರ ಪ್ರಜ್ಞೆಗಳಿಗೆ ಅನುಗುಣವಾಗಿ ಸಿದ್ಧಗೊಂಡಿರುತ್ತದೆ. ಸಾಹಿತ್ಯ ಸೃಷ್ಟಿ ಆಯಾ ಕಾಲದ ಚಾರಿತ್ರಿಕ ಸಂದರ್ಭಗಳೊಂದಿಗೆ ನೇರ ಸಂಬಂಧ ಹೊಂದಿರುತ್ತದೆ. ಚರಿತ್ರೆಯೊಳಗೆ ನಡೆಯುವ ಅನೇಕ ಸಾಂಸ್ಕೃತಿಕ ಚಲನೆಗಳಿಗೆ ಸ್ಪಂದಿಸುತ್ತ ಅವನ್ನು ವಿಶಿಷ್ಟ ರೀತಿಯಲ್ಲಿ ಕಾಣಿಸುವುದರಲ್ಲಿ ಸೃಜನಶೀಲ ಸಾಹಿತ್ಯಕ್ಕೆ ಸಾಧ್ಯವಿರುವಂತೆ ಆಯಾಕಾಲದ ವೈಜ್ಞಾನಿಕ ಚಲನೆಗಳನ್ನು ಕಾಣಿಸುವುದು ವಿಚಾರ ಸಾಹಿತ್ಯಕ್ಕೆ ಸಾಧ್ಯವಿದೆ. ಹಾಗಾಗಿ ಕರ್ನಾಟಕದ ಕೃಷಿ ಇತಿಹಾಸದ ಅವಲೋಕನದೊಂದಿಗೆ ಕನ್ನಡದಲ್ಲಿ ಕೃಷಿ ಸಾಹಿತ್ಯದ ಉಗಮದ ಚರಿತ್ರೆಯನ್ನೂ ಅರಿಯುವ ಪ್ರಯತ್ನವನ್ನು ಮಾಡಲಾಗಿದೆ. ಈ ದಿಸೆಯಲ್ಲಿ ಕರ್ನಾಟಕದ ಸಂಕ್ಷಿಪ್ತ ಕೃಷಿ ಇತಿಹಾಸ ಈ ಮುಂದೆ ನೀಡಲಾಗಿದೆ.

ಭಾರತದ ದಕ್ಷಿಣ ಪ್ರಸ್ಥಭೂಮಿಯು ಅತ್ಯಂತ ಪ್ರಾಚೀನ ನಿರ್ಮಾಣವೆಂದು ಭೂವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ (ಬ್ರಿಜೆಟ್ ಮತ್ತು ರೇಮಂಡ್, ೧೯೮೩). ಒಂದು ಕಾಲದಲ್ಲಿ ಸಾಗರದ ಭಾಗವಾಗಿದ್ದ ಈ ಪ್ರದೇಶ ಕಾಲಾಂತರದಲ್ಲಿ ಮೇಲೆದ್ದು ಹಲವಾರು ರೂಪಾಂತರಗಳನ್ನು ಹೊಂದಿ ವೈವಿಧ್ಯ ಜೀವಸಂಕುಲದ ವಾಸಕ್ಕೆ ಸೂಕ್ತವಾಗಿರುವ ಪರಿಸರವನ್ನು ಹೊಂದಿದೆ. ಸಹಸ್ರಾರು ವರ್ಷಗಳಿಂದ ಸಸ್ಯಶ್ಯಾಮಲೆಯಾಗಿ ಸಮೃದ್ಧಿಹೊಂದಿದ ನಾಡೆಂದು ಪ್ರಖ್ಯಾತಿಪಡೆದು ಉಜ್ವಲ ಸಂಸ್ಕೃತಿಯ ಪರಂಪರೆಯನ್ನು ಬೆಳೆಸಿಕೊಂಡು ಬಂದಿದೆ.

ಕರ್ನಾಟಕ ರಾಜ್ಯವು ದಕ್ಷಿಣ ಭಾರತದ ಮಧ್ಯಭಾಗದಲ್ಲಿನ ಪೂರ್ವ ರೇಖಾಂಶ ೭೪°-೧೫'ರಿಂದ ೭೮°-೩೦' ಹಾಗೂ ಅಕ್ಷಾಂಶ ೧೧°-೩೦'ರಿಂದ ೧೮°-೩೦'ವರೆಗಿನ ಪ್ರದೇಶವನ್ನು ಆವರಿಸಿದೆ. ಕೃಷಿ ಎಂದಿನಿಂದಲೂ ಕರ್ನಾಟಕದ ಜನತೆಯ ಪ್ರಮುಖ ಜೀವನೋಪಾಯದ ಉದ್ಯೋಗವಾಗಿ ಬೆಳೆದುಬಂದಿದೆ.

ಕೃಷಿಗೆ ಸಂಬಂಧಿಸಿದಂತೆ ಕರ್ನಾಟಕವನ್ನು ಸಮುದ್ರ ಸಾಮೀಪ್ಯ, ಭೂಮೇಲ್ಮೈಲಕ್ಷಣ, ಹವಾಮಾನ ಪರಿಸ್ಥಿತಿಗಳ ಆಧಾರದ ಮೇಲೆ ಕರ್ನಾಟಕ ರಾಜ್ಯವನ್ನು ಸ್ಥೂಲವಾಗಿ (೧) ಕರಾವಳಿ ಪ್ರದೇಶ (ಕಡಲತೀರದ ಮೈದಾನ) (೨) ಘಟ್ಟದ ಪ್ರದೇಶ (ಪರ್ವತಶ್ರೇಣಿ ಪ್ರದೇಶ, ಮಲೆನಾಡು) (೩) ಉತ್ತರದ ಮೈದಾನ ಪ್ರದೇಶ ಮತ್ತು (೪) ದಕ್ಷಿಣದ ಮೈದಾನ ಪ್ರದೇಶ ಎಂಬ ಪ್ರಾಕೃತಿಕ ವಿಭಾಗಗಳಾಗಿ ವಿಭಜಿಸಲಾಗಿದೆ.

೧. **ಕರಾವಳಿ ಪ್ರದೇಶ:** ಒಂದು ಕಡೆ ಕಡಲು, ಮತ್ತೊಂದು ಕಡೆ ಸಹ್ಯಾದ್ರಿ ಪರ್ವತಶ್ರೇಣಿ; ಮಧ್ಯದಲ್ಲಿನ ೨೦-೩೦ ಕಿ.ಮೀ. ಕಿರುಅಗಲದ ಪಟ್ಟಿಯಿದ್ದು ಪೂರ್ವದಿಂದ ಪಶ್ಚಿಮದೆಡೆಗೆ ಇಳುಕಲಾಗಿದೆ. ಇದು ಮೈದಾನ ಪಟ್ಟಿಯಾಗಿದ್ದರೂ ಅಲ್ಲಲ್ಲಿ ಸಹ್ಯಾದ್ರಿ ಬೆಟ್ಟಗಳ ಚಾಚು ಇಲ್ಲವೆ ಎತ್ತರವಾಗಿರುವ ಸಣ್ಣಸಣ್ಣ ಬಿಡಿಬೆಟ್ಟಗಳು ತೋರಿಬರುತ್ತವೆ. ಇಲ್ಲಿಯ ಮಣ್ಣಿಗೆ ಮೆಕ್ಕಲು ಮಣ್ಣೆಂದು ಕರೆಯುತ್ತಾರೆ. ನೈಸರ್ಗಿಕವಾಗಿ ಇಲ್ಲಿನ ಭೂಮಿಗಳು ಅಷ್ಟೊಂದು ಫಲವತ್ತಾಗಿರುವುದಿಲ್ಲ. ಸಾರಜನಕದ ಮಟ್ಟ ಸರ್ವಸಾಧಾರಣವಾಗಿದ್ದರೂ ಈ ಮಣ್ಣುಗಳಲ್ಲಿ ರಂಜಕ ಹಾಗೂ ಸೂಕ್ಷ್ಮ ಪೋಷಕಾಂಶಗಳ ಕೊರತೆ ಹೆಚ್ಚು. ಈ ಮಣ್ಣಿನಲ್ಲಿ ಹುಳಿ ಅಂಶ ಹೆಚ್ಚು. ಭತ್ತ, ತೆಂಗು, ಅಡಿಕೆ, ಗೋಡಂಬಿ ಇಲ್ಲಿನ ಪ್ರಮುಖ ಬೆಳೆಗಳು. ಇತ್ತೀಚೆಗೆ ವೆನಿಲ್ಲಾ ಸಹ ಬೆಳೆಯಲಾಗುತ್ತಿದೆ. ವರ್ಷಪೂರ್ತಿಯೆಲ್ಲಾ ಬೆಚ್ಚನೆ ಹವೆಯಿರುವುದರಿಂದ ಭತ್ತವನ್ನು ವರ್ಷದ ಮೂರು ಕಾಲಗಳಲ್ಲಿ ಬೆಳೆಯುಬಹುದು. ಹೀಗೆ ಬೆಳೆಯಲು ನೀರಿನಾಶ್ರಯವಿರಬೇಕಾಗುತ್ತದೆ. ಇಲ್ಲಿನ ವಾರ್ಷಿಕ ಮಳೆ ೩೦೦-೪೫೦ ಮಿ.ಮೀ.

೨. **ಘಟ್ಟದ ಪ್ರದೇಶ:** ಈ ಪ್ರದೇಶವನ್ನು ಸಹ್ಯಾದ್ರಿ ಪರ್ವತ ಪ್ರದೇಶ ಹಾಗೂ ಮಲೆನಾಡೆಂದು ಕರೆಯುತ್ತಾರೆ. ಇದು ಕೆಲವೆಡೆ ಸಮುದ್ರಮಟ್ಟದಿಂದ ೫೦೦೦ ಅಡಿ ಎತ್ತರವಾಗಿದೆ. ಇದರ ಬಹುಭಾಗ ದಟ್ಟ ಅರಣ್ಯದಿಂದ ಕೂಡಿದೆ. ಸಹ್ಯಾದ್ರಿ ಪರ್ವತ ಶ್ರೇಣಿಗಳಿಗೆ ಪಶ್ಚಿಮ ಘಟ್ಟಗಳೆಂದೂ ಹೆಸರು. ಇಲ್ಲಿನ ವಾರ್ಷಿಕ ಮಳೆ ೩೦೦-೭೫೦ ಮಿ.ಮೀ. ಈ ಪ್ರದೇಶದ ದಕ್ಷಿಣ ಭಾಗದಲ್ಲಿ ಕಾಫಿ, ಏಲಕ್ಕಿ, ಅಡಿಕೆ ತೋಟಗಳಿವೆ. ಮಧ್ಯದಲ್ಲಿನ ಗದ್ದೆಗಳಲ್ಲಿ ಭತ್ತವನ್ನು ಬೆಳೆಯುತ್ತಾರೆ. ಅಡಿಕೆ ತೋಟಗಳಲ್ಲಿ ತೆಂಗು, ಮೆಣಸು, ಬಾಳೆ, ವೆನಿಲ್ಲಾಗಳು ಉಪಬೆಳೆಗಳು. ಇಲ್ಲಿಯ ಮಣ್ಣು ಅತ್ಯಂತ ಫಲವತ್ತಾಗಿರುವುದಲ್ಲದೆ ಹೆಚ್ಚು ಸಾವಯವ ಪದಾರ್ಥಗಳಿಂದ ಕೂಡಿರುತ್ತದೆ.

೩. **ಉತ್ತರದ ಮೈದಾನ ಪ್ರದೇಶ:** ಇದು ಚಿತ್ರದುರ್ಗದಿಂದ ಮೇಲಿನ ಕರ್ನಾಟಕದ ಉತ್ತರದ ಜಿಲ್ಲೆಗಳಾದ ಧಾರವಾಡ, ಬಳ್ಳಾರಿ, ರಾಯಚೂರು, ಬಳ್ಳಾರಿ, ಬಿಜಾಪುರ, ಗುಲಬರ್ಗಾ, ಬೀದರ್ ಪ್ರದೇಶಗಳನ್ನೊಳಗೊಂಡಿದೆ. ರಾಜ್ಯದ ಉತ್ತರ ಭಾಗದಲ್ಲಿ ಕಪ್ಪು ಬಣ್ಣದ ಎರೆಭೂಮಿ ಹೆಚ್ಚು ಇದ್ದು ಅಲ್ಲಲ್ಲಿ ಮರಳುಕೂಡಿದ ಕೆಂಪುಭೂಮಿಯೂ ಇರುವುದು. ಸಾಧಾರಣವಾಗಿ ಆಳವಾಗಿರುತ್ತದೆ; ಫಲವತ್ತತೆಯೂ ಸಾಧಾರಣ ಹೆಚ್ಚಿರುತ್ತದೆ. ಈ ಪ್ರದೇಶದಲ್ಲಿ ೨೦೦-೩೫೦ ಮಿ.ಮೀ.ನಷ್ಟು ಮಳೆಯಾಗುತ್ತದೆ. ಇಲ್ಲಿ ಮಳೆಯು ಕಡಿಮೆಯಾಗಿರುವಂತೆ ಅದರ ಬೀಳುವಿಕೆಯೂ ಅನಿಶ್ಚಿತವಾದುದು. ಇದು ಬಹುಪಾಲು ಒಣಪ್ರದೇಶ. ಮಳೆಯಿಂದಲೇ ಕಬ್ಬು, ನೆಲಗಡಲೆ, ಮೆಣಸಿನಕಾಯಿ, ಬೇಳೆಕಾಳು, ಜೋಳ, ಹರಳು ಇತ್ಯಾದಿ ಬೆಳೆಗಳು ಬೆಳೆಯುತ್ತವೆ. ಮುಂಗಾರಿಯಲ್ಲಿ ಬಿತ್ತಿ, ಹಿಂಗಾರಿಯಲ್ಲಿ ಸುಗ್ಗಿ ಮಾಡುವ ಹತ್ತಿಯು ಈ ಪ್ರದೇಶದ ಮುಖ್ಯ ಹಣದ ಬೆಳೆ.

೪. **ದಕ್ಷಿಣದ ಮೈದಾನ ಪ್ರದೇಶ:** ಈ ಪ್ರದೇಶದಲ್ಲಿ ಕರ್ನಾಟಕದ ದಕ್ಷಿಣದ ಜಿಲ್ಲೆಗಳಾದ ಕೋಲಾರ, ಬೆಂಗಳೂರು, ಮಂಡ್ಯ, ತುಮಕೂರು, ಚಿತ್ರದುರ್ಗ, ಹಾಸನ ಮತ್ತು ಚಿಕ್ಕಮಗಳೂರಿನ ಕೆಲಭಾಗಗಳು ಸೇರುತ್ತವೆ. ಇದನ್ನು ಬಯಲುನಾಡು ಹಾಗೂ ಎರೆನಾಡು ಎಂದೂ ಕರೆಯುವರು. ಇದು ರಾಜ್ಯದ ಒಣಪ್ರದೇಶ. ಇಲ್ಲಿ ೩೫೦-೭೦೦ ಮಿ.ಮೀ. ಮಳೆಯಾಗುತ್ತದೆ. ನೈಋತ್ಯ ಹಾಗೂ ಈಶಾನ್ಯ ಮಾರುತಗಳೆರಡರಿಂದಲೂ ಮಳೆ ಬರುತ್ತಿದ್ದರೂ ಈಶಾನ್ಯ ಮಾರುತದಿಂದಲೇ ಹೆಚ್ಚು. ಸೆಪ್ಟೆಂಬರ್ ಹಾಗೂ ಅಕ್ಟೋಬರ್ ತಿಂಗಳಲ್ಲಿ ಅಧಿಕ ಮಳೆ. ದಕ್ಷಿಣ ಕೆಂಪುಭೂಮಿಯಲ್ಲಿ ರಾಗಿ, ಕಡಲೆಕಾಯಿ, ಹರಳು, ಹುರುಳಿ ಮೊದಲಾದ ಬೆಳೆ ಬೆಳೆಯುತ್ತಾರೆ. ಈ ವಿಭಾಗದ ದಕ್ಷಿಣ ಭಾಗದಲ್ಲಿ ಹಲವಾರು ಕೆರೆಗಳಿರುವುದರಿಂದ ಅವುಗಳ ನೀರಿನಾಶ್ರಯದಿಂದ ಭತ್ತ, ರಾಗಿ, ಮುಸುಕಿನ ಜೋಳ, ನೆಲಗಡಲೆಗಳನ್ನು ಬೇಸಿಗೆಯಲ್ಲಿಯೂ ಬೆಳೆಯುತ್ತಾರೆ. ಅನಿರ್ಬಂಧಿತ ಕೊಳವೆ ಬಾವಿಗಳಿಂದಾಗಿ ಅಂತರ್ಜಲ ಅಪಾಯಕಾರಿ ಮಟ್ಟ ಮುಟ್ಟಿದೆ. ಹತ್ತಿ, ಭತ್ತ, ಮುಸುಕಿನ ಜೋಳ, ನೆಲಗಡಲೆ, ಸೂರ್ಯಕಾಂತಿ ಮುಂತಾದುವು ಪ್ರಮುಖ ನೀರಾವರಿ ಬೆಳೆಗಳು.

ಕರ್ನಾಟಕ ರಾಜ್ಯದ ಪ್ರಾಕೃತಿಕ ವಿಭಾಗಗಳು ನಾಲ್ಕೇ ಆಗಿದ್ದರೂ ವ್ಯವಸಾಯದ ದೃಷ್ಟಿಯಿಂದ ಅವುಗಳು ಉಪವಿಭಾಗಗೊಂಡು ಒಟ್ಟು ಹತ್ತು ಕೃಷಿ-ಹವಾಮಾನ ವಲಯಗಳನ್ನಾಗಿ ವಿಭಜಿಸಲಾಗಿದೆ. ಅವುಗಳೆಂದರೆ:

೧. ವಾಯುವ್ಯ ಸಂಕ್ರಮಣ ವಲಯ

೨. ವಾಯುವ್ಯ ಒಣ ವಲಯ

೩. ಉತ್ತರ ಒಣ ವಲಯ

೪. ಮಧ್ಯ ಒಣ ವಲಯ

೫. ಪೂರ್ವ ಒಣ ವಲಯ

೬. ದಕ್ಷಿಣ ಒಣ ವಲಯ

೭. ದಕ್ಷಿಣ ಸಂಕ್ರಮಣ ವಲಯ

೮. ಉತ್ತರ ಸಂಕ್ರಮಣ ವಲಯ

೯. ಬೆಟ್ಟಗುಡ್ಡ ವಲಯ

೧೦. ಕರಾವಳಿ ವಲಯ

ಕೃಷಿಯ ಆವಿಷ್ಕಾರ ಮಾನವನಿಂದ ಸುಮಾರು ಹತ್ತು ಸಾವಿರ ವರ್ಷಗಳ ಹಿಂದೆ ನಡೆದಿದೆಯೆಂದು ಪುರಾತತ್ವ ಶೋಧಕರು ತಮ್ಮ ಅಧ್ಯಯನಗಳಿಂದ ತಿಳಿಸಿದ್ದಾರೆ. ಕ್ರಿ.ಪೂ. ೩೦೦೦ ವರ್ಷಗಳ ಹಿಂದೆಯೇ ಸಿಂಧು ನಾಗರಿಕತೆ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ದಕ್ಷಿಣ ಭಾರತದಲ್ಲಿದ್ದ ನವಶಿಲಾಯುಗದ ವಸತಿಸ್ಥಾನಗಳನ್ನು ಸಂಶೋಧಕರು ಗುರುತಿಸಿದ್ದಾರೆ. ಅವುಗಳಲ್ಲಿ ಕರ್ನಾಟಕದಲ್ಲಿನ ಮುಖ್ಯ ಸ್ಥಳಗಳೆಂದರೆ ಈಗಿನ ಉತ್ತರ ಕರ್ನಾಟಕದಲ್ಲಿರುವ ಕೊಡೇಕಲ್, ಉತ್ತನೂರು, ಕುಪ್ಗಲ್ ಮತ್ತು ಪಲ್ಲವಾಯ್. ಆ ಸ್ಥಳಗಳಲ್ಲಿ ದೊರಕಿರುವ ಶಿಲಾ ಕೊಡಲಿಗಳು, ಕಾಳು ಪುಡಿಮಾಡುವ ಗುಂಡುಕಲ್ಲುಗಳು ಹಾಗೂ ಇತರ ಆಧಾರಗಳಿಂದ ಅವರು ಆಗಲೇ ಬೇಸಾಯದ ಬದುಕನ್ನು ನಡೆಸುತ್ತಿದ್ದರೆಂದು ಊಹಿಸಲಾಗಿದೆ. ಉತ್ತನೂರಿನಲ್ಲಿ ಸುಟ್ಟ ಸಗಣಿಯ ರಾಶಿಗಳು ಕಂಡುಬಂದಿರುವುದರಿಂದ ಕೃಷಿಯೊಂದಿಗೆ ಜಾನುವಾರು ಸಾಕಣೆಯೂ ಜೊತೆಜೊತೆಯಲ್ಲಿಯೇ ನಡೆಯುತ್ತಿತ್ತೆಂದು ಹೇಳಲಾಗುತ್ತದೆ. ಆ ಬೂದಿಯ ರಾಶಿಯಲ್ಲಿ ದನಗಳ ಗೊರಸಿನ ಗುರುತುಗಳೂ ಸಹ ಕಂಡುಬಂದಿವೆ (ಇರ್ಫನ್ ಹಬೀಬ್, ೨೦೦೧).

ಕೃಷಿಗೆ ಪೂರಕವಾಗಿರುವ ಕೆರೆಗಳ ಚರಿತ್ರೆಯನ್ನು ಅಧ್ಯಯನ ಕೃಷಿಯ ಚರಿತ್ರೆಯನ್ನು ಅರಿಯಲು ಸಹಾಯಕವಾಗುತ್ತದೆ. ಕ್ರಿ.ಪೂ. ೧೦೦೦ ವರ್ಷಗಳ ಹಿಂದೆಯೇ ಕರ್ನಾಟಕದಲ್ಲಿ ಬೃಹತ್‌ಶಿಲಾಯುಗದ ಜನರು ಕೆರೆಗಳನ್ನು ನಿರ್ಮಿಸಿದ್ದರೆಂದು ಸಂಶೋಧಕರು ತಿಳಿಸಿದ್ದಾರೆ. ಆದೋನಿ, ಬನವಾಸಿ, ಚಂದ್ರವಳ್ಳಿ ಮತ್ತು ತಾಳಗುಂದದಲ್ಲಿ ದೊರೆತಿರುವ ಶಾಸನಗಳು ಕೆರೆಗಳ ನಿರ್ಮಾಣಗಳ ಬಗ್ಗೆ ತಿಳಿಸುತ್ತವೆ. ಕೋಲಾರ ಜಿಲ್ಲೆಯ ಪ್ರಖ್ಯಾತ ಬೇತಮಂಗಲದ ಕೆರೆ ಸುಮಾರು ೧೦೦೦ ವರ್ಷಗಳ ಹಿಂದೆಯೇ ನಿರ್ಮಿಸಲಾಗಿದೆಯೆಂದು ಅಲ್ಲಿ ದೊರೆತಿರುವ ಎರಡು ಶಾಸನಗಳು ಹೇಳುತ್ತವೆ. ಚಿತ್ರದುರ್ಗದ ಬಳಿಯಿರುವ ಚಂದ್ರವಳ್ಳಿಯ ಕೆರೆಯನ್ನು ಮೊದಲ ಕದಂಬ ದೊರೆ ಮಯೂರ ವರ್ಮ (ಕ್ರಿ.ಶ. ೩೫೦) ನಿರ್ಮಿಸಿದನೆಂದು ಅಲ್ಲಿನ ಶಾಸನ ಹೇಳುತ್ತದೆನ್ನುತ್ತಾರೆ ಸಂಶೋಧಕರು (ದೀಕ್ಷಿತ್ ಮತ್ತು ಇತರರು, ೧೯೯೩).

ಈಗಿರುವ ಕರ್ನಾಟಕ ರಾಜ್ಯದ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ಕೃಷಿ ಪ್ರಮುಖ ಜೀವನಾಧಾರದ ಕಸುಬಾಗಿ ನಡೆದುಕೊಂಡು ಬಂದಿದ್ದರೂ ೧೮ನೇ ಶತಮಾನದಿಂದೀಚೆಗೆ ಕೃಷಿ ವಿಧಾನಗಳಲ್ಲಿ ಹಾಗೂ ಅದರ ಅಭಿವೃದ್ಧಿಯಲ್ಲಿ ಒಂದು ರೀತಿಯ ವ್ಯವಸ್ಥಿತ ಬೆಳವಣಿಗೆಯನ್ನು ಕಾಣಬಹುದು. ೧೮ನೇ ಶತಮಾನಕ್ಕೆ ಮೊದಲು ಕರ್ನಾಟಕದಲ್ಲಿ ಮೆಣಸಿನಕಾಯಿ, ನೆಲಗಡಲೆ, ಟೊಮ್ಯಾಟೊ, ಕಾಫಿ, ಚಹಾ ಮುಂತಾದ ಬೆಳೆಗಳು ಇರಲೇ ಇಲ್ಲ. ವಾಸ್ಕೋ–ಡ–ಗಾಮಾನ ಆಗಮನದ ನಂತರದ ವ್ಯಾಪಾರ ವಹಿವಾಟುಗಳಿಂದ ಹಾಗೂ ಜನರ ಖಂಡಾಂತರ ಸಂಚಾರದಿಂದಾಗಿ ಹತ್ತು ಹಲವಾರು ಬೆಳೆಗಳು ಭಾರತ ಪ್ರವೇಶಿಸಿದವು.

ಮೈಸೂರು ರಾಜ್ಯವನ್ನು ಮೊದಲು ಆಳಿದವರಲ್ಲಿ ಕೃಷಿಯನ್ನು ವ್ಯವಸ್ಥಿತವಾಗಿ ಅಭಿವೃದ್ಧಿಪಡಿಸಲು ಪ್ರಯತ್ನಿಸಿದವರಲ್ಲಿ ಟಿಪ್ಪೂ ಸುಲ್ತಾನ್ ಸಹ ಒಬ್ಬ. ೧೭೮೭ರ ಡಿಸೆಂಬರ್‌ನಲ್ಲಿ ಆತ ಹುಸೇನ್ ಆಲಿ ಮತ್ತು ಶೇಖ್ ಇಬ್ರಾಹಿಂ ಎಂಬ ತನ್ನ ರಾಯಭಾರಿಗಳನ್ನು ಫ್ರಾನ್ಸ್‌ನ ದ್ವೀಪವಾಗಿದ್ದ ಮಾರಿಷಸ್‌ಗೆ ಕಳುಹಿಸಿ ಅವರಿಂದ ವಿವಿಧ ಸಸ್ಯಗಳು ಮತ್ತು ಬೀಜಗಳನ್ನು ತರಿಸಿಕೊಂಡ. ಅವರು ೧೭೮೮ರ ಏಪ್ರಿಲ್‌ನಲ್ಲಿ ಮಂಗಳೂರಿಗೆ ಬಂದಿಳಿದಾಗ ಅವರು ತಂದಿದ್ದ ಸಸ್ಯ ಮತ್ತು ಬೀಜಗಳಿದ್ದ ಇಪ್ಪತ್ತು ಪೆಟ್ಟಿಗೆಗಳನ್ನು ಶ್ರೀರಂಗಪಟ್ಟಣಕ್ಕೆ ತರಿಸಿಕೊಳ್ಳಲು ಟಿಪ್ಪೂ ಸುಲ್ತಾನ್ ಒಂಟೆ ಮತ್ತು ಕುದುರೆಗಳನ್ನು ಕಳುಹಿಸಿದ. ಶ್ರೀರಂಗಪಟ್ಟಣದಲ್ಲಿ ತನ್ನ ಅರಮನೆಯ ಬಳಿಯೇ ತನಗೆ ಪ್ರಿಯವಾದ 'ಲಾಲ್‌ಬಾಗ್'ನಲ್ಲಿ ಮೊದಲ ಬಾರಿಗೆ ಏಪ್ರಿಕಾಟ್, ಸೇಬು, ರಾಸ್ಪ್‌ಬೆರ್ರಿ, ಬ್ಲ್ಯಾಕ್ ಬೆರ್ರಿ, ದ್ರಾಕ್ಷಿ, ಅಂಜೂರ, ಕಮರಾಕ್ಷಿ, ಗೋಡಂಬಿ, ಸೀಬೆಹಣ್ಣು, ಕರ್ಜೂರ, ಪಪಾಯ ಹಾಗೂ ಹಲವಾರು ವಿಧದ ಹೂಗಳನ್ನು ಬೆಳೆಸಿದ. ತನ್ನಲ್ಲಿನ 'ವಿಶಿಷ್ಟ' ಸಸ್ಯಗಳ ಬೀಜಗಳನ್ನು ರೈತರಿಗೆ ನೀಡಿ ಬದಲಿಗೆ ಅವರಿಂದ ಕೃಷಿ ಫಸಲನ್ನು ವಿನಿಮಯವಾಗಿ ಪಡೆಯುತ್ತಿದ್ದ. ರೇಷ್ಮೆಕೃಷಿಯನ್ನು ವಾಣಿಜ್ಯ ಕಸುಬನ್ನಾಗಿ ಮಾಡಿದ್ದೇ ಟಿಪ್ಪೂ ಸುಲ್ತಾನ್. ಶ್ರೀರಂಗಪಟ್ಟಣದಲ್ಲಿನ ಆತನ ಅಚ್ಚುಮೆಚ್ಚಿನ 'ಲಾಲ್‌ಬಾಗ್' ಅನ್ನು ಬ್ರಿಟಿಷರು ಟಿಪ್ಪೂನೊಂದಿಗಿನ ಅಂತಿಮ ಯುದ್ಧದಲ್ಲಿ ಸಂಪೂರ್ಣ ನಾಶಮಾಡಿದರು.

ಟಿಪ್ಪೂನ ಸಾವಿನ ನಂತರ ಮೈಸೂರು ಯೂರೋಪಿಯನ್ನರ ಪ್ರಭಾವಕ್ಕೆ ಒಳಗಾಯಿತು. ಭಾರತದ ಗವರ್ನರ್ ಜನರಲ್ ಆಗಿ ಮಾರ್ಕ್ವಿಸ್ ವೆಲ್ಲೆಸ್ಲಿ ಅಧಿಕಾರ ವಹಿಸಿಕೊಂಡರು. ಯುದ್ಧಾನಂತರದ ಆಡಳಿತ ಹಾಗೂ ಸಾಮಾಜಿಕ ಅವ್ಯವಸ್ಥೆಯನ್ನು ಸರಿಪಡಿಸಿ ಮೈಸೂರಿನ ಒಡೆಯರ್‌ರವರಿಗೆ ರಾಜ್ಯಾಡಳಿತ ಬಿಟ್ಟುಕೊಟ್ಟರು. ಆಗಿನ ಮೈಸೂರು ರಾಜ್ಯದ ಜನರ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸುವ ಸಲುವಾಗಿ ಹಲವಾರು ಸುಧಾರಣೆಗಳನ್ನು ತರಲು ನಿರ್ಧರಿಸಿದರು. ಅದಕ್ಕೆ ಪೂರ್ವಸಿದ್ಧತೆಯಾಗಿ ಅವರು ಮೈಸೂರು

ರಾಜ್ಯದ ಭೌಗೋಳಿಕ, ಸಾಂಸ್ಕೃತಿಕ, ಆರ್ಥಿಕ ಹಾಗೂ ಕೃಷಿಯ ಸ್ಥಿತಿಗತಿಯನ್ನು ತಿಳಿಯಲು ಒಂದು ವಿಸ್ತೃತ ಸಮೀಕ್ಷೆ ನಡೆಸಲು ತೀರ್ಮಾನಿಸಿ ಆ ಕಾರ್ಯಕ್ಕಾಗಿ ಡಾ. ಫ್ರಾನ್ಸಿಸ್ ಬುಖನನ್ ಎಂಬ ಬ್ರಿಟಿಷ್ ವ್ಯಕ್ತಿಯನ್ನು ನೇಮಿಸಿದರು. ಫ್ರಾನ್ಸಿಸ್ ಬುಖನನ್‌ರವರು ಮದ್ರಾಸಿನಿಂದ ಪಯಣ ಆರಂಭಿಸಿ ಮೈಸೂರು ರಾಜ್ಯ, ಕೆನರಾ ಹಾಗೂ ಮಲಬಾರ್‌ಗಳವರೆಗೆ ತಮ್ಮ ಸಮೀಕ್ಷೆಯನ್ನು ನಡೆಸಿ ವರದಿಯನ್ನು ಗವರ್ನರ್ ಜನರಲ್‌ರವರಿಗೆ ಸಲ್ಲಿಸಿದರು. ಈ ವರದಿ ರಾಜ್ಯದಲ್ಲಿನ ಕೃಷಿಯ ಬಗೆಗೆ ನಡೆಸಿದ ಯಾವುದೇ ಸಮೀಕ್ಷೆಗಳ ಮೊಟ್ಟಮೊದಲ ವರದಿಯಾಗಿದೆ.

ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ಬೆಂಗಳೂರಿನ ಪ್ರಖ್ಯಾತ ತೋಟ (ನಂತರ ಲಾಲ್‌ಬಾಗ್ ಎಂದು ಕರೆಯಲ್ಪಟ್ಟ) ಮೇಜರ್ ವಾ ಎಂಬ ಬ್ರಿಟಿಷ್ ಸಸ್ಯಶಾಸ್ತ್ರಜ್ಞನ ಸ್ವಾಧೀನದಲ್ಲಿತ್ತು. ಟಿಪ್ಪು ಸುಲ್ತಾನನ ಕುಟುಂಬದಿಂದ ಆತ ಆ ತೋಟವನ್ನು ಹೇಗೆ ಪಡೆದುಕೊಂಡ ಎಂಬುದು ಇಂದಿಗೂ ರಹಸ್ಯವಾಗಿದೆ. ಆತ ಆ ತೋಟದಲ್ಲಿ ಹಲವಾರು ಹಣ್ಣು ಹೂಗಳ ಬೆಳೆಗಳನ್ನು ಬೆಳೆಸುವುದರ ಜೊತೆಗೆ ಹಲವಾರು ಆಹಾರ ಧಾನ್ಯಗಳನ್ನೂ ಸಹ ಬೆಳೆಸುತ್ತಿದ್ದ. ೧೮೧೯ರಲ್ಲಿ ಆತ ಅದನ್ನು ಭಾರತದ ಗವರ್ನರ್ ಜನರಲ್‌ರವರಿಗೆ ಕೊಡುಗೆಯಾಗಿ ನೀಡಲು ತೀರ್ಮಾನಿಸಿದ ಹಾಗೂ ಆನಂತರ ಅದು ಕಲ್ಕತ್ತಾದ ಇಂಪೀರಿಯಲ್ ಬಟಾನಿಕಲ್ ಗಾರ್ಡನ್‌ರವರ ಸುಪರ್ದಿಗೆ ಬಂದಿತು.

ಸರ್ ಮಾರ್ಕ್ ಕಬ್ಬನ್‌ರವರು ಮೈಸೂರು ಮಹಾರಾಜರ ಸರ್ಕಾರಕ್ಕೆ ಕಮೀಶನರ್ ಆಗಿ ಆಗಮಿಸಿದ ನಂತರ ಮೈಸೂರಿನ ಕೃಷಿಯಲ್ಲಿ ಹಲವಾರು ಬದಲಾವಣೆಗಳು ಕಂಡವು. ಲಾಲ್‌ಬಾಗ್‌ನ ಅಭಿವೃದ್ಧಿಯ ಜೊತೆಗೆ ರೈತರನ್ನು ವಾಣಿಜ್ಯ ಬೆಳೆಗಳನ್ನು ಬೆಳೆಯುವಂತೆ ಉತ್ತೇಜಿಸಿದರು. ಅವರು ಕಮೀಶನರ್ ಆಗಿ ಅಧಿಕಾರ ವಹಿಸಿಕೊಂಡಾಗ ಮೈಸೂರು ರಾಜ್ಯದ ಸರ್ಕಾರವು ಇಂಪೀರಿಯಲ್ ಸರ್ಕಾರಕ್ಕೆ ೮೦ ಲಕ್ಷ ರೂಗಳ ಸಾಲ ತೀರಿಸಬೇಕಿತ್ತು. ರೈತರ ಆದಾಯವನ್ನು ಹೆಚ್ಚಿಸದಿದ್ದಲ್ಲಿ ಅವರಿಂದ  ಹೆಚ್ಚಿನ ಕಂದಾಯವನ್ನು ಪಡೆದು ಸರ್ಕಾರದ ಸಾಲವನ್ನು ತೀರಿಸಲು ಸಾಧ್ಯವಿಲ್ಲವೆಂದು ಅರಿತ ಕಬ್ಬನ್ ರೈತರಿಗೆ ಹೆಚ್ಚಿನ ಆದಾಯ ತಂದುಕೊಡುವಂತಹ ಉದ್ದ ನೂಲಿನ ಹತ್ತಿ, ಹಣ್ಣು ತರಕಾರಿಗಳು ಮತ್ತು ಮಲೆನಾಡು ಪ್ರದೇಶಗಳಲ್ಲಿ ಕಾಫಿಯಂತಹ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಉತ್ತೇಜಿಸಿದರು. ನಿರಂತರ ಆದಾಯ ಕೊಡುವಂತಹ ರೇಷ್ಮೆಕೃಷಿಯಲ್ಲಿಯೂ ಸಹ ಆಸಕ್ತಿ ತೋರಿದರು. ಇದರಿಂದಾಗಿ ರೈತರ ಆದಾಯ ಹೆಚ್ಚಾಗಿದ್ದಲ್ಲದೆ ಸರ್ಕಾರದ ಸಾಲವೂ ತೀರಿತು.

ಕೃಷಿಯ ಇಳುವರಿಯನ್ನು ಹೆಚ್ಚಿಸಬೇಕಾದಲ್ಲಿ ಉತ್ತಮ ಬಿತ್ತನೆ ಸಾಮಗ್ರಿಯನ್ನು ರೈತನಿಗೆ ಒದಗಿಸಬೇಕಾಗಿರುವುದು ಅತ್ಯವಶ್ಯಕವೆಂದು ಮನಗಂಡ ಸರ್ ಕಬ್ಬನ್ ಲಾಲ್‌ಬಾಗನ್ನು 'ಕಲ್ಕತ್ತಾದ ಕೃಷಿ-ತೋಟಗಾರಿಕಾ ಸಂಘ'ಕ್ಕೆ ನೀಡಿ ಅಲ್ಲಿ ವ್ಯವಸಾಯದ ಬೆಳೆಗಳ ಬಗ್ಗೆ

ಸಂಶೋಧನೆ ನಡೆಸುವಂತೆ ಸೂಚಿಸಿದರು. ಆ ಕಾರ್ಯಕ್ಕಾಗಿ ಬ್ರಿಟಿಷ್ ವ್ಯಕ್ತಿಯಾದ ವಿಲಿಯಂ ಮನ್ರೊ ಎಂಬಾತನನ್ನು ನೇಮಿಸಿ ಆತನನ್ನು ಕೃಷಿ-ತೋಟಗಾರಿಕಾ ಸಂಘದ ಬೆಂಗಳೂರು ಶಾಖೆಯ ಕಾರ್ಯದರ್ಶಿಯನ್ನಾಗಿ ಮಾಡಿದರು. ಆ ತೋಟದಲ್ಲಿ ದುಡಿಯಲು ಕೇಂದ್ರ ಕಾರಾಗೃಹದ ಖೈದಿಗಳನ್ನು ಒದಗಿಸಿದರು. ಆ ಸಮಯದಲ್ಲಿ ಕೃಷಿ ಮತ್ತು ತೋಟಗಾರಿಕಾ ಅಭಿವೃದ್ಧಿಯ ಹಲವಾರು ಪ್ರಯತ್ನಗಳು ಲಾಲ್‌ಬಾಗ್‌ನಲ್ಲಿ ನಡೆದವು. ಮನ್ರೊ ತನ್ನ ಸಂಘದ ಕೇಂದ್ರ ಕಚೇರಿಯೊಂದಿಗೆ ನಡೆಸಿದ ಪತ್ರವ್ಯವಹಾರಗಳು ವರದಿಯ ರೂಪದಲ್ಲಿ ಪ್ರಕಟವಾಗಿದ್ದು ಆ ಕಾರ್ಯಗಳ ಬಗೆಗಿನ ಮಾಹಿತಿಯನ್ನು ತಿಳಿಸುತ್ತವೆ. ೧೮೪೨ರಲ್ಲಿ ಕೃಷಿ-ತೋಟಗಾರಿಕಾ ಸಂಘವು ನಿಷ್ಕ್ರಿಯವಾಗಿ ಲಾಲ್‌ಬಾಗ್ ಮತ್ತೆ ಚೀಫ್ ಕಮೀಶನರ್‌ರವರ ಆಡಳಿತದಡಿಯಲ್ಲಿಯೇ ಬಂದಿತು.

ಲಾಲ್‌ಬಾಗ್ ಅನ್ನು ಸರ್ಕಾರಿ ಸಸ್ಯೋದ್ಯಾನವನ್ನಾಗಿ ಮಾಡಿದ ಕೀರ್ತಿ ೧೮೫೬ರಲ್ಲಿ ದಕ್ಷಿಣ ಭಾರತದ ಅರಣ್ಯ ಪ್ರಧಾನ ಸಂರಕ್ಷಕರಾಗಿದ್ದ ಡಾ. ಕ್ಲೆಗ್‌ಹಾರ್ನ್‌ರವರಿಗೆ ಸಲ್ಲುತ್ತದೆ. ಅವರು ಆಗಸ್ಟ್ ೧೮೫೬ರಲ್ಲಿ ಮದ್ರಾಸ್ ಕೃಷಿ-ತೋಟಗಾರಿಕಾ ಸಂಘದ ಸೂಪರಿಂಟೆಂಡೆಂಟರಾಗಿದ್ದ ಜೆಫ್ರಿಯವರೊಂದಿಗೆ ಬೆಂಗಳೂರಿಗೆ ಭೇಟಿ ನೀಡಿ ಚೀಫ್ ಕಮೀಶನರ್‌ರವರೊಂದಿಗೆ ಮೈಸೂರು ರಾಜ್ಯದಲ್ಲಿ ಸಸ್ಯೋದ್ಯಾನ ಸ್ಥಾಪಿಸುವ ಬಗ್ಗೆ ಚರ್ಚಿಸಿದರು. ರಾಜ್ಯದಲ್ಲಿ ವಾಣಿಜ್ಯ ಕೃಷಿಯ ಬಗ್ಗೆ ಆಸಕ್ತಿ ತೋರುತ್ತಿದ್ದ ಚೀಫ್ ಕಮೀಶನರ್ ಕಬ್ಬನ್‌ರವರು ಒಪ್ಪಿ ಅದಕ್ಕಾಗಿ ಅತ್ಯಂತ ಸೂಕ್ತ ಸ್ಥಳವಾಗಿದ್ದ ಲಾಲ್‌ಬಾಗನ್ನು ಆಯ್ಕೆಮಾಡಿದರು.

ಲಾಲ್‌ಬಾಗನ್ನು ಪುನರ್ವಿನ್ಯಾಸಗೊಳಿಸಿ ಕೃಷಿ ಮತ್ತು ತೋಟಗಾರಿಕಾ ಬೆಳೆಗಳನ್ನು ಬೆಳೆಸಿ ರೈತರಿಗೆ ಯಶಸ್ವಿ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಿದರು. ಲಾಲ್‌ಬಾಗ್‌ನ ಸೂಪರಿಂಟೆಂಡೆಂಟರಾಗಿ ಬ್ರಿಟನ್ನಿನ ಕ್ಯೂ ಗಾರ್ಡನ್ ಮೇಲುಸ್ತುವಾರಿ ನೋಡಿಕೊಳ್ಳುತ್ತಿದ್ದ ಹಾಗೂ ಬೆಲ್‌ಫಾಸ್ಟ್ ಗಾರ್ಡನ್ಸ್‌ನ ಆಡಳಿತ ಮಂಡಳಿಯ ಪ್ರಶಂಸೆ ಗಳಿಸಿದ್ದ ವಿಲಿಯಂ ನ್ಯೂರವರನ್ನು ಏಪ್ರಿಲ್ ೧೮೫೮ರಲ್ಲಿ ನೇಮಿಸಲಾಯಿತು. ಸರ್ ಮಾರ್ಕ್ ಕಬ್ಬನ್‌ರವರು ೧೮೩೧ರಿಂದ ೧೮೬೧ರವರೆಗೆ ಚೀಫ್ ಕಮೀಶನರ್ ಆಗಿದ್ದ ಅವಧಿಯಲ್ಲಿ ರಾಜ್ಯದ ಕೃಷಿ ಮತ್ತು ಸಂಬಂಧಿತ ಕ್ಷೇತ್ರಗಳಲ್ಲಿ ಮಹತ್ತರ ಅಭಿವೃದ್ಧಿ ಕಂಡುಬಂದಿತು. 'ಸರ್ಕಾರಿ ಉದ್ಯಾನವನಗಳ ಇಲಾಖೆ' ಮಾತ್ರ ಇದ್ದು ಯಾವುದೇ ಕೃಷಿ ಅಥವಾ ತೋಟಗಾರಿಕೆ ಇಲಾಖೆಗಳು ಇಲ್ಲದ ಸಮಯದಲ್ಲಿ ಅವರು ಅಭಿವೃದ್ಧಿ ಇಲಾಖೆಗಳ ಸಚಿವಾಲಯವನ್ನು ಸ್ಥಾಪಿಸಿದರು. ನಂತರದ ಕೃಷಿ ಮತ್ತು ತೋಟಗಾರಿಕೆ ಇಲಾಖೆಗಳ ಪ್ರಾರಂಭಕ್ಕೆ ಇದೇ ಬುನಾದಿಯಾಯ್ತು. ನಂತರದ ಕಮೀಶನರ್ ಆಗಿ ನೇಮಕಗೊಂಡ ಬೌರಿಂಗ್‌ರವರು ಕಬ್ಬನ್‌ರವರ ಸ್ಮರಣಾರ್ಥ ಬೆಂಗಳೂರಿನ 'ಅಠಾರ ಕಚೇರಿ' ಎದುರಿಗಿನ ಉದ್ಯಾನವನಕ್ಕೆ ಕಬ್ಬನ್‌ರವರ ಹೆಸರೇ ಇಟ್ಟರು.

ಮೈಸೂರು ರಾಜ್ಯದ ಚರಿತ್ರೆಯಲ್ಲಿಯೇ ಮೊಟ್ಟಮೊದಲ ಬಾರಿಗೆ ೧೬ನೇ ಫೆಬ್ರವರಿ ೧೮೬೭ರಂದು ಲಾಲ್‌ಬಾಗ್‌ನ ಬ್ಯಾಂಡ್ ಸ್ಟ್ಯಾಂಡ್‌ನಲ್ಲಿ ಹಣ್ಣು, ಹೂ, ತರಕಾರಿಗಳ ಹಾಗೂ ವಾಣಿಜ್ಯ ಕೃಷಿ ಉತ್ಪನ್ನಗಳ ಪ್ರದರ್ಶನವನ್ನು ಏರ್ಪಡಿಸಲಾಯಿತು. ವಿಲಿಯಂ ನ್ಯೂರವರು ಹಲವಾರು ರೈತರನ್ನು ಸಹ ಈ ಪ್ರದರ್ಶನಕ್ಕೆ ಆಹ್ವಾನಿಸಿದ್ದರು. ಲಾಲ್‌ಬಾಗ್ ಒಂದು ರೀತಿಯಲ್ಲಿ ಕೃಷಿ ಮಾಹಿತಿ ಒದಗಿಸುವ ಕೇಂದ್ರವಾಗಿತ್ತು. ಕ್ರಮೇಣ ಲಾಲ್‌ಬಾಗ್‌ನ ಪ್ರದರ್ಶನಗಳು ತೋಟಗಾರಿಕಾ ಬೆಳೆಗಳಿಗೆ ಮಾತ್ರ ಸೀಮಿತವಾಯಿತು.

ಉದ್ಯಾನವನದ ಉಸ್ತುವಾರಿ ೧೮೭೪ರಲ್ಲಿ ಜಾನ್ ಕ್ಯಾಮೆರೋನ್‌ರವರು ವಹಿಸಿಕೊಂಡರು. ಅನಂತರ ೧೮೮೧ರಲ್ಲಿ ಉದ್ಯಾನವನ ಮೈಸೂರು ಮಹಾರಾಜರ ಸರ್ಕಾರದ ಆಡಳಿತಕ್ಕೊಳಪಟ್ಟಿತು. ೪೫ ಎಕರೆಗಳಷ್ಟಿದ್ದ ಲಾಲ್‌ಬಾಗ್ ಮಹಾರಾಜರ ಆಡಳಿತೆಯಲ್ಲಿ ಹತ್ತೊಂಬತ್ತನೇ ಶತಮಾನದ ಅಂತ್ಯದ ವೇಳೆಗೆ ೧೦೦ ಎಕರೆಗಳನ್ನೂ ಮೀರಿತ್ತು.

ಜಾನ್ ಕ್ಯಾಮೆರೋನ್‌ರವರು ೧೯೦೮ರಲ್ಲಿ ನಿವೃತ್ತರಾಗುವವರೆಗೂ ೩೪ ವರ್ಷಗಳ ಕಾಲ ಕೃಷಿಯ ಅಭಿವೃದ್ಧಿಗೆ ಬಹಳಷ್ಟು ಶ್ರಮಿಸಿದರು. ಅವರ ಸಮಯದಲ್ಲಿ ಲಾಲ್‌ಬಾಗ್‌ನಲ್ಲಿ ಕೃಷಿ ಮತ್ತು ತೋಟಗಾರಿಕೆಗೆ ಸಂಬಂಧಿಸಿದಂತೆ ಹಲವಾರು ಪ್ರಯೋಗಗಳು ನಡೆದವು. ಅವುಗಳಲ್ಲಿ ಪ್ರಮುಖವಾದುವುಗಳೆಂದರೆ:

೧. ಬಮಯ್ಯ ಹತ್ತಿ, ಅಮೆರಿಕನ್ ಮೇಲ್ಭೂಮಿ ಹತ್ತಿ, ಫಿಜಿ ಹತ್ತಿ, ಈಜಿಪ್ಷಿಯನ್ ಹತ್ತಿ, ಪೆರುವಿಯನ್ ಹತ್ತಿ ಮುಂತಾದುವನ್ನು ಬೆಳೆಸಿ ವರದಿಮಾಡಲಾಗಿದೆ.

೨. ಸಿಯರಾ ರಬ್ಬರ್, ಪ್ಯಾರಾ ರಬ್ಬರ್, ಆಫ್ರಿಕನ್ ರಬ್ಬರ್, ಇಂಡಿಯಾ ರಬ್ಬರ್‌ಗಳನ್ನು ಬೆಳೆಸಿ ವಿತರಣೆಗಾಗಿ ವೃದ್ಧಿಗೊಳಿಸಲಾಗಿದೆ.

೩. ಬ್ಲ್ಯಾಕ್ ಹ್ಯಾಂಬರ್ಗ್, ಗ್ರೋಸ್ ಕೋಲ್ಮನ್, ಮಸ್ಕಟ್ ಆಫ್ ಅಲೆಕ್ಸಾಂಡ್ರಿಯ, ಕಾಬೂಲ್ ಮುಂತಾದ ದ್ರಾಕ್ಷಿಗಳನ್ನು ಬೆಳೆಸುವ ಪ್ರಯತ್ನ ಮಾಡಲಾಗಿದೆ.

೪. ಸೇಬು, ಏಪ್ರಿಕಾಟ್, ಪೀಚ್, ನೆಕ್ಟರೀನ್ಸ್, ಪ್ಲಮ್, ಲಿಚಿ ಮುಂತಾದ ಹಣ್ಣಿನ ಬೆಳೆಗಳನ್ನು ಬೆಳೆಸುವ ಪ್ರಯತ್ನ ನಡೆಸಲಾಗಿದೆ.

೫. ಆಲೂಗೆಡ್ಡೆ ಮತ್ತು ಶೇಂಗಾ ಬೆಳೆಗಳನ್ನು ಬೆಳೆಸಿ ರಾಜ್ಯದಾದ್ಯಂತ ಪರಿಚಯಿಸಲಾಯಿತು.

೬. ಕರ್ಜೂರ ಮತ್ತು ಸವಾಮೀಸ್, ನೀಗ್ರೊ, ಗೋಲ್ಡನ್ ಮತ್ತು ಹಸಿರು ತೆಂಗಿನಕಾಯಿಗಳನ್ನು ಬೆಳೆಸಿ ಪರಿಚಯಿಸಲಾಯಿತು.

೭. ಲೈಬೀರಿಯನ್ ಮತ್ತು ಅರೇಬಿಯನ್ ಕಾಫಿಗಳನ್ನು ಬೆಳೆಸಿ ಅವುಗಳ ನಡುವೆ ಕಸಿಮಾಡುವ ಪ್ರಯೋಗಗಳನ್ನು ನಡೆಸಲಾಯಿತು.

೮. ಸಿಸಾಲ್, ಫ್ಲೋರಿಡಾ ಮತ್ತು ಅಮೆರಿಕನ್ ಕತ್ತಾಳೆಗಳನ್ನು ಬೆಳೆಸಿ ರೈತರಿಗೆ ವಿತರಿಸಲಾಗಿದೆ.

೯. ಜಪಾನ್ ರೇಷ್ಮೆಯನ್ನು ಮೊಟ್ಟಮೊದಲಬಾರಿಗೆ ಲಾಲ್‌ಬಾಗ್‌ನಲ್ಲಿ ಪ್ರಯತ್ನಿಸಲಾಯಿತು.

೧೮೯೫ರ ಫೆಬ್ರವರಿ ೧ರಂದು ಪಟ್ಟಾಭಿಷಿಕ್ತರಾದ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರು ರಾಜ್ಯದ ಕೃಷಿ ಅಭಿವೃದ್ಧಿಯಲ್ಲಿ ಮಹತ್ತರ ಪಾತ್ರ ವಹಿಸಿದ್ದಾರೆ. ಕೃಷ್ಣರಾಜ ಒಡೆಯರ್‌ರವರ ದೂರದೃಷ್ಟಿಯ ವಿವೇಚನೆಯಿಂದ ರಾಜ್ಯದಲ್ಲಿ ವಿದ್ಯುತ್ ಉತ್ಪಾದನೆಯ ಹಾಗೂ ನೀರಾವರಿ ಪ್ರಾಯೋಜನೆಗಳು ರೂಪುಗೊಂಡವು. ದೇಶವಿದೇಶಗಳಿಂದ ಕೃಷಿ ತಜ್ಞರನ್ನು ಆಹ್ವಾನಿಸಿ ಅವರಿಗೆ ರಾಜ್ಯದ ಕೃಷಿ ಅಭಿವೃದ್ಧಿಯಲ್ಲಿ ತೊಡಗಲು ಉತ್ತೇಜನ ನೀಡಿದರು. ಅವರಲ್ಲಿ ಪ್ರಮುಖರಾದವರೆಂದರೆ ಈಗಾಗಲೇ ಉಲ್ಲೇಖಿಸಿರುವ ಡಾ.ಲೆಹ್‌ಮನ್, ಜಿ.ಎಚ್.ಕ್ರುಂಬೀಗಲ್ ಮತ್ತು ಡಾ.ಎಲ್.ಸಿ.ಕೋಲ್‌ಮನ್. ಇವರ ಸಲಹೆಯ ಮೇರೆಗೇ ಮಹಾರಾಜರು ೧೯೦೪ರಲ್ಲಿ ಪ್ರಾಯೋಗಿಕ ಕೃಷಿ ಕ್ಷೇತ್ರ, ೧೯೧೩ರಲ್ಲಿ ಹೆಬ್ಬಾಳದ ಮೈಸೂರು ಕೃಷಿ ಶಾಲೆ ಹಾಗೂ ಲಾಲ್‌ಬಾಗ್‌ನಲ್ಲಿ ತೋಟಗಾರಿಕೆ ಶಾಲೆಯನ್ನು ಮಂಜೂರು ಮಾಡಿದ್ದರು. ಅತ್ಯಂತ ಬಲಿಷ್ಠ ಹಾಗೂ ಪ್ರಖ್ಯಾತ ಅಮೃತಮಹಲ್ ಎತ್ತುಗಳ ತಳಿ ಸಂವರ್ಧನೆ, ಸಂರಕ್ಷಣೆ ಹಾಗೂ ಅಭಿವೃದ್ಧಿಗಾಗಿ ವಿಸ್ತಾರ ಜಾಗವನ್ನು ಮೀಸಲಿಟ್ಟು 'ಅಮೃತಮಹಲ್ ಕಾವಲ್' ನಿರ್ಮಿಸಿದರು. ರೈತರಿಗೆ ಉತ್ತೇಜನ ನೀಡಲು ವಾರ್ಷಿಕ ದಸರಾ ವಸ್ತುಪ್ರದರ್ಶನದಲ್ಲಿ ಕೃಷಿ ಮತ್ತು ತೋಟಗಾರಿಕಾ ಉತ್ಪನ್ನಗಳ ಪ್ರದರ್ಶನಕ್ಕೆ ಆಹ್ವಾನ ನೀಡಿ ಬಹುಮಾನ ನೀಡುತ್ತಿದ್ದರು. ಇಂದು ರೈತರಿಗೆ ವರದಾನವಾಗಿರುವ ಕೃಷ್ಣರಾಜ ಸಾಗರ ಅಣೆಕಟ್ಟು ಅವರ ಕೊಡುಗೆಯೇ ಆಗಿದೆ.

**೪.೧.೧. ಕೃಷಿ ಇಲಾಖೆಯ ಸ್ಥಾಪನೆ**

ಲಾಲ್‌ಬಾಗ್‌ನಲ್ಲಿ ಕೃಷಿ ಬೆಳೆಗಳ ಹಾಗೂ ವಿಶೇಷವಾಗಿ ತೋಟಗಾರಿಕೆ ಬೆಳೆಗಳ ಬಗ್ಗೆ ಪ್ರಯೋಗ, ಸಂಶೋಧನೆಗಳು ನಡೆಯುತ್ತಿದ್ದವು. ಕೃಷಿ ಬೆಳೆಗಳ ಬಗ್ಗೆ ಮಾತ್ರ ಪ್ರಯೋಗಗಳನ್ನು ನಡೆಸುವ ಸಲುವಾಗಿ ೧೮೮೬ರಲ್ಲಿ ಸರ್ಕಾರವು ಪ್ರತ್ಯೇಕ ಕಚೇರಿಯೊಂದನ್ನು ಪ್ರಾರಂಭಿಸಿತು. ಪೋಲಿಸ್, ಅರಣ್ಯ ಮತ್ತು ಪ್ಲಾಂಟೇಶನ್‌ಗಳ ಇನ್‌ಸ್ಪೆಕ್ಟರ್ ಜನರಲ್‌ರವರು ಇದರು ಮುಖ್ಯಸ್ಥರಾಗಿದ್ದರು. ೧೮೯೨ರಲ್ಲಿ ಪೋಲಿಸ್ ಪೋರ್ಟ್‌ಫೋಲಿಯೋವನ್ನು ಪ್ರತ್ಯೇಕಿಸಿ ಅರಣ್ಯ, ಪ್ಲಾಂಟೇಶನ್ ಮತ್ತು ಕೃಷಿ ಸಂಶೋಧನಾ ಕಾರ್ಯಗಳನ್ನು ಮಾತ್ರ ಇನ್‌ಸ್ಪೆಕ್ಟರ್ ಜನರಲ್‌ರವರು ಮುಂದುವರಿಸಿದರು. ಈ ಸಮಯದಲ್ಲಿ ಕೃಷಿಗೆ ಪ್ರತ್ಯೇಕ ಇಲಾಖೆಯುವನ್ನು ಸ್ಥಾಪಿಸುವ ಅವಶ್ಯಕತೆಯನ್ನು ಮೈಸೂರಿನ ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರು ಮನಗಂಡು ೧೮೯೯ರಲ್ಲಿ 'ಕೃಷಿ ಇಲಾಖೆ'ಯನ್ನು ಸ್ಥಾಪಿಸಿದರು. ಜರ್ಮನ್ ದೇಶದವರಾದ ಡಾ.ಲೆಹ್‌ಮನ್‌ರವರನ್ನು 'ಕೃಷಿ ರಾಸಾಯನಶಾಸ್ತ್ರಜ್ಞ' ಎಂಬ

ಪದನಾಮದೊಂದಿಗೆ ಇಲಾಖೆಯ ಮುಖ್ಯಸ್ಥರನ್ನಾಗಿ ನೇಮಿಸಲಾಯಿತು. ಅವರು ಈಗಿನ ಸೆಂಟ್ರಲ್ ಕಾಲೇಜಿಗೆ ಹೊಂದಿಕೊಂಡಂತಿರುವ ಕಟ್ಟಡವೊಂದರಲ್ಲಿ ಒಂದು ಸುಸಜ್ಜಿತ ಕೃಷಿ ರಾಸಾಯನ ಶಾಸ್ತ್ರಜ್ಞರ ಪ್ರಯೋಗಾಲಯವನ್ನು ಸ್ಥಾಪಿಸಿದರು. ಇಲಾಖೆಯ ಪ್ರಾರಂಭದನಂತರ ಲಾಲ್‌ಬಾಗ್‌ನಲ್ಲಿ ತೋಟಗಾರಿಕೆಗೆ ಸಂಬಂಧಿಸಿದ ಸಂಶೋಧನೆ ಮತ್ತು ಪ್ರಯೋಗಗಳನ್ನು ಮಾತ್ರ ಮುಂದುವರಿಸಲಾಯಿತು. ಡಾ. ಲೆಹ್‌ಮನ್‌ರವರ ಶಿಫಾರಸ್ಸಿನ ಮೇರೆಗೆ ರಾಜ್ಯದಲ್ಲಿ ಕಂದಾಯ ಇಲಾಖೆಯ ಒಂದು ಭಾಗವಾಗಿದ್ದ ಕೃಷಿಯನ್ನು ೧೯೧೨ರಲ್ಲಿ ಪ್ರತ್ಯೇಕಗೊಳಿಸಲಾಯಿತು.

ಸ್ವಾತಂತ್ರ್ಯೋತ್ತರ ಭಾರತದ ಮೈಸೂರು ರಾಜ್ಯದಲ್ಲಿ ತೋಟಗಾರಿಕಾ ಅಭಿವೃದ್ಧಿಗೆ ಶ್ರಮಿಸಿದವರಲ್ಲಿ ಡಾ.ಎಂ.ಎಚ್.ಮರಿಗೌಡರು ಪ್ರಮುಖರು. ೧೯೫೧ರಿಂದ ೧೯೭೪ರವರೆಗೆ ಅಹರ್ನಿಶಿ ದುಡಿದ ಮರಿಗೌಡರು ೧೯೬೫ರಲ್ಲಿ ರಾಜ್ಯದ ಕೃಷಿ ಇಲಾಖೆಯನ್ನು ವಿಭಾಗಿಸಿ ಭಾರತದಲ್ಲಿಯೇ ಮೊಟ್ಟಮೊದಲ ಪ್ರತ್ಯೇಕ ತೋಟಗಾರಿಕಾ ಇಲಾಖೆಯೊಂದನ್ನು ಸ್ಥಾಪಿಸಲು ಕಾರಣಕರ್ತರಾಗಿದ್ದಾರೆ.

೧೯೦೪-೦೫ರಲ್ಲಿ ಹೆಬ್ಬಾಳ ಗ್ರಾಮದಲ್ಲಿ ಸುಮಾರು ೩೦ ಎಕರೆಗಳ ಸ್ಥಳದಲ್ಲಿ ಪ್ರಾಯೋಗಿಕ ಕೃಷಿ ಕ್ಷೇತ್ರವನ್ನು ಪ್ರಾರಂಭಿಸಿದ್ದು ಮೈಸೂರಿನ ಕೃಷಿ ಇಲಾಖೆಯ ಮಹತ್ತರ ತಿರುವುಗಳಲ್ಲೊಂದು. ಅಲ್ಲಿ ಆಸಕ್ತ ರೈತರಿಗೆ ಸುಧಾರಿತ ಬೇಸಾಯ ಪದ್ಧತಿಗಳ ಬಗೆಗೆ, ಕೃಷಿ ಸಲಕರಣೆಗಳ ಬಳಕೆಯ ಬಗೆಗೆ, ಬೀಜೋತ್ಪಾದನೆಯ ಸುಧಾರಿತ ವಿಧಾನಗಳ ಬಗೆಗೆ, ರಾಸಾಯನಿಕ ಗೊಬ್ಬರಗಳ ಬಳಕೆಯ ಬಗೆಗೆ ಹಾಗೂ ಬೆಲ್ಲದ ತಯಾರಿಕೆಯ ಬಗೆಗೆ ತರಬೇತಿ ಹಾಗೂ ಪ್ರಾತ್ಯಕ್ಷಿಕೆಗಳನ್ನು ನೀಡಲು ಪ್ರಾರಂಭಿಸಿದರು. ಲೆಹ್‌ಮನ್‌ರವರ ಈ ಕಾರ್ಯಗಳಿಂದಾಗಿ ರಾಜ್ಯದಲ್ಲಿ ಹೆಬ್ಬಾಳ ಮತ್ತು ಲಾಲ್‌ಬಾಗ್ ಎರಡೂ ಕೃಷಿ ಸಂಶೋಧನಾ ಕೇಂದ್ರಗಳಾದುವು. ೨೦ನೆಯ ಶತಮಾನದ ಪ್ರಾರಂಭದಿಂದಲೂ ಹೆಬ್ಬಾಳ ಕೃಷಿ ಶಿಕ್ಷಣದಲ್ಲಿ ಮಹತ್ತರ ಪಾತ್ರ ವಹಿಸಿದೆ. ಡಾ. ಲೆಹ್‌ಮನ್‌ರವರ ನಂತರ ೧೯೦೮ರಲ್ಲಿ ಕೆನಡಾದ ಡಾ.ಲೆಸ್ಲಿ ಕೋಲ್‌ಮನ್ ಇಲಾಖೆಯ 'ಕೃಷಿ ರಾಸಾಯನಶಾಸ್ತ್ರಜ್ಞ'ರಾದರು. ಅವರು ಇಪ್ಪತ್ತೈದು ವರ್ಷಗಳಿಗೂ ಹೆಚ್ಚು ಕಾಲ ಇಲಾಖೆಯನ್ನು ಮುನ್ನಡೆಸಿದರು. ಇಲಾಖೆಯ ಒಟ್ಟಾರೆ ಅಭಿವೃದ್ಧಿಗೆ ಕೋಲ್‌ಮನ್‌ರವರೇ ಬಹುಪಾಲು ಕಾರಣಕರ್ತರು. ಕೀಟಶಾಸ್ತ್ರ, ಶಿಲೀಂಧ್ರಶಾಸ್ತ್ರ ಮತ್ತು ಸಸ್ಯಶಾಸ್ತ್ರ ವಿಭಾಗಗಳನ್ನು ಪ್ರಾರಂಭಿಸಿದರು. ಅಡಿಕೆ ಮತ್ತು ಕಾಫಿಬೆಳೆಗಳು ಕೊಳೆರೋಗದಿಂದ ವಿನಾಶದ ಹಾದಿಯತ್ತ ಇರುವಾಗ ಬೋರ್ಡೋ ಮಿಶ್ರಣ ಸಿಂಪಡಿಸುವುದನ್ನು ಪರಿಚಯಿಸಿದವರು ಕೋಲ್‌ಮನ್‌ರವರೆ. ಮೊದಲಬಾರಿಗೆ ಪ್ರತ್ಯೇಕ ಕೃಷಿಶಾಲೆಯನ್ನು ಪ್ರಾರಂಭಿಸಬೇಕೆಂಬ ಆಲೋಚನೆಯನ್ನು ಮುಂದಿಟ್ಟರು. ಮಂಡ್ಯದಲ್ಲಿ ಸಕ್ಕರೆ ಕಾರ್ಖಾನೆಯನ್ನು ಪ್ರಾರಂಭಿಸಿದವರೂ ಸಹ ಕೋಲ್‌ಮನ್‌ರವರೆ.

### ೪.೧.೨. ಕೃಷಿ ಶಾಲೆ ಮತ್ತು ಕೃಷಿ ಕಾಲೇಜಿನ ಸ್ಥಾಪನೆ

ಡಾ. ಲೆಸ್ಲೀ ಕೋಲ್‌ಮನ್‌ರವರ ಮಾರ್ಗದರ್ಶನದಲ್ಲಿ ೧೯೧೩ರಲ್ಲಿ ಹೆಬ್ಬಾಳದಲ್ಲಿ 'ಮೈಸೂರು ಕೃಷಿಶಾಲೆ'ಯನ್ನು ಪ್ರಾರಂಭಿಸಲಾಯಿತು. ಮೊದಲಿಗೆ ಅಲ್ಲಿ ಎರಡು ವರ್ಷಗಳ ಸರ್ಟಿಫಿಕೇಟ್ ತರಬೇತಿ ಕೋರ್ಸ್ ನಡೆಸುತ್ತಿದ್ದು ಅನಂತರ ಮೂರು ವರ್ಷಗಳ ಕೃಷಿ ಡಿಪ್ಲೊಮೊ ಕೋರ್ಸ್ ಪ್ರಾರಂಭಿಸಲಾಯಿತು. ಆ ಶಾಲೆಗೆ ಡಾ.ಕೋಲ್‌ಮನ್‌ರವರೇ ಪ್ರಾಂಶುಪಾಲರಾಗಿದ್ದರು. ಸ್ಥಳೀಯ ಕೃಷಿ ಸಮಸ್ಯೆಗಳ ನಿವಾರಣೆಗಾಗಿ ಡಾ.ಕೋಲ್‌ಮನ್‌ರವರು ತುಮಕೂರು ಜಿಲ್ಲೆಯ ಚಿಕ್ಕನಹಳ್ಳಿಯಲ್ಲಿ ೧೯೧೬ರಲ್ಲಿ ಕೃಷಿ ಶಾಲೆಯೊಂದನ್ನು ಸ್ಥಾಪಿಸಿದರು. ನಂತರ ಇದೇ ಉದ್ದೇಶಕ್ಕಾಗಿ ಮಂಡ್ಯ ಜಿಲ್ಲೆಯ ಸೋಮನಹಳ್ಳಿಯಲ್ಲಿ ಹಾಗೂ ಬೆಂಗಳೂರು ಜಿಲ್ಲೆಯ ಆನೇಕಲ್‌ನಲ್ಲಿ ಕೃಷಿ ಶಾಲೆಗಳನ್ನು ಪ್ರಾರಂಭಿಸಿದರು. ಇದೇ ರೀತಿಯಲ್ಲಿ ಅಡಕೆ ಬೆಳೆಯ ಸಂಶೋಧನೆಗಾಗಿ ಬಾಳೆಹೊನ್ನೂರಿನಲ್ಲಿ, ಕಬ್ಬು, ಭತ್ತ ಮತ್ತು ರಾಗಿ ಬೆಳೆಗಳ ಸಂಶೋಧನೆಗಾಗಿ ಮಂಡ್ಯದ ವಿ.ಸಿ.ಫಾರಂನಲ್ಲಿ ಹಾಗೂ ಎಣ್ಣೆಕಾಳು ಬೆಳೆಗಳ ಸಂಶೋಧನೆಗಾಗಿ ಬಬ್ಬೂರಿನಲ್ಲಿ ಕೃಷಿ ಸಂಶೋಧನಾ ಕೇಂದ್ರಗಳನ್ನು ಸ್ಥಾಪಿಸಿದರು.

ಹೆಬ್ಬಾಳದ ಕೃಷಿ ಶಾಲೆ ತನ್ನ ಬೋಧನಾ ಕ್ರಮದಿಂದ ಹಾಗೂ ನುರಿತ ಅಧ್ಯಾಪಕರಿಂದಾಗಿ ಪ್ರಖ್ಯಾತವಾಗಿ ಅಲ್ಲಿ ಶಿಕ್ಷಣ ಪಡೆಯಲು ಸಿಲೋನ್, ಬರ್ಮಾ, ಮಲಯಾ, ದಕ್ಷಿಣ ಆಫ್ರಿಕಾ ಮತ್ತು ವಿಶ್ವದ ಇತರೆಡೆಗಳಿಂದ ವಿದ್ಯಾರ್ಥಿಗಳು ಬರತೊಡಗಿದರು. ಇದರಿಂದ ಉತ್ತೇಜನಗೊಂಡ ಡಾ.ಕೋಲ್‌ಮನ್‌ರವರು ಶಾಲೆಯನ್ನು ಕಾಲೇಜಿನ ದರ್ಜೆಗೇರಿಸುವ ಪ್ರಯತ್ನ ನಡೆಸಿದರು. ಆದರೆ ಅದು ಸಫಲವಾಗಲು ಬಹಳ ಸಮಯವೇ ಹಿಡಿಯಿತು. ಆಗಿನ ಕೃಷಿ ಸಚಿವರಾಗಿದ್ದ ಎಂ.ಎ.ಶ್ರೀನಿವಾಸನ್‌ರವರೂ ಆಸಕ್ತಿ ತೋರಿದುದರಿಂದ ೧೯೪೬ರಲ್ಲಿ 'ಮೈಸೂರು ಕೃಷಿ ಕಾಲೇಜು' ಹೆಬ್ಬಾಳದಲ್ಲಿ ಸ್ಥಾಪಿತವಾಯಿತು. ಆನಂತರ ಕೃಷಿ ಕಾಲೇಜಿನ ಜೊತೆಜೊತೆಯಲ್ಲಿಯೇ ನಡೆದುಬಂದ ಶಾಲೆಯ ಕಾರ್ಯನಿರ್ವಹಣೆಯನ್ನು ೧೯೫೭ರಲ್ಲಿ ಸ್ಥಗಿತಗೊಳಿಸಲಾಯಿತು. ಕೃಷಿ ಕಾಲೇಜಿನ ನಿರ್ವಹಣೆಯನ್ನು ಕೃಷಿ ಇಲಾಖೆಗೆ ವಹಿಸಿದರೂ ಅದು ಮೈಸೂರು ವಿಶ್ವವಿದ್ಯಾನಿಲಯದ ಭಾಗವಾಗಿತ್ತು.

ಕೃಷಿ ಕಾಲೇಜಿನ ಮೊದಲ ಪ್ರಾಂಶುಪಾಲರಾಗಿ ಡಾ.ಬಿ.ಟಿ.ನಾರಾಯಣನ್‌ರವರನ್ನು ನೇಮಿಸಲಾಯಿತು. ಮೈಸೂರು ಕೃಷಿ ಶಾಲೆಯ ಆವರಣದಲ್ಲೇ ಸ್ಥಳಕ್ಕಾಗಿ ಹೆಣಗಾಡಿ, ತಾತ್ಕಾಲಿಕವಾಗಿ ನಿರ್ಮಿಸಿದ 'ಲಾಹೋರ್ ಶೆಡ್ಡು'ಗಳನ್ನೇ ತರಗತಿ ಕೋಣೆ, ಪ್ರಯೋಗಾಲಯ, ವಿದ್ಯಾರ್ಥಿನಿಲಯಗಳನ್ನಾಗಿಸಲಾಯಿತು. ಕೃಷಿಯನ್ನು ಪಠ್ಯವಾಗಿ ಓದಲು ಮುಂದೆ ಯಾರೂ ಬರದಿದ್ದ ಆ ಸಮಯದಲ್ಲಿ ಕಷ್ಟಪಟ್ಟು ೨೫ ಜನ ವಿದ್ಯಾರ್ಥಿಗಳನ್ನು ಹುಡುಕಿ ತರಗತಿಗಳನ್ನು ಪ್ರಾರಂಭಿಸಿದರು. ಆ ಹುಡುಗರಿಗೆ ಧೈರ್ಯ ತುಂಬಲು ಪ್ರಾಂಶುಪಾಲರು ಸಂಜೆಯ

ಹೊತ್ತು ಅವರ ಜೊತೆಯಲ್ಲಿಯೇ ಇರತೊಡಗಿದರು. ಎರಡು ವರ್ಷದ ಇಂಟರ್‌ಮೀಡಿಯೇಟ್ ಮುಗಿಸಿದ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಒದಗಿಸಿ ಮೂರು ವರ್ಷದ ಕೃಷಿ ಬ್ಯಾಚಲರ್ ಡಿಗ್ರಿ ಪದವಿಯನ್ನು ನೀಡಲಾಗುತ್ತಿತ್ತು. ನಂತರ ೧೯೫೮ರಲ್ಲಿ ರಾಜ್ಯ ಸರ್ಕಾರ ಇಂಟರ್‌ಮೀಡಿಯೇಟ್ ಬದಲು ಒಂದು ವರ್ಷದ ಪದವಿ ಪೂರ್ವ ಪರೀಕ್ಷೆ ಆರಂಭಿಸಿದಾಗ ಮೂರು ವರ್ಷದ ಕೃಷಿ ಪದವಿಯನ್ನು ನಾಲ್ಕು ವರ್ಷಗಳಿಗೇರಿಸಲಾಯಿತು. ಪದವಿ ಪೂರ್ವ ಪರೀಕ್ಷೆ ಎರಡು ವರ್ಷಗಳಿಗೇರಿಸಿದಾಗ ಕೃಷಿ ಪದವಿಯ ಅವಧಿಯಲ್ಲಿ ಯಾವುದೇ ಬದಲಾವಣೆಯನ್ನು ಮಾಡಲಿಲ್ಲ.

ಕೃಷಿ ಕಾಲೇಜಿಗೆ ಒಂದು ಶಾಶ್ವತ ಕಟ್ಟಡದ ಅವಶ್ಯಕತೆಯನ್ನು ಮನಗಂಡ ಆಗಿನ ಮುಖ್ಯ ಮಂತ್ರಿಗಳಾದ ಶ್ರೀ ಕೆಂಗಲ್ ಹನುಮಂತಯ್ಯನವರು ಹೆಬ್ಬಾಳದ ಬೆಂಗಳೂರು-ಬಳ್ಳಾರಿ ಹೆದ್ದಾರಿಯ ಬದಿಯ ವಿಸ್ತಾರ ಭೂಮಿಯಲ್ಲಿ ೨೫ನೇ ಜನವರಿ ೧೯೫೬ರಂದು ಶಿಲಾನ್ಯಾಸ ಮಾಡಿದರು. ೧೯೫೯ರಲ್ಲಿ ಹೊಸ ಕಟ್ಟಡಕ್ಕೆ ಕಾಲೇಜನ್ನು ವರ್ಗಾಯಿಸಲಾಯಿತು.

**೪.೧.೩. ಕೃಷಿ ವಿಶ್ವವಿದ್ಯಾನಿಲಯದ ಸ್ಥಾಪನೆ**

೧೯೬೩ರ ರಾಜ್ಯ ಶಾಸನಸಭೆಯಲ್ಲಿ ವಿಶ್ವವಿದ್ಯಾನಿಲಯಗಳ ಅಧಿನಿಯಮ (೧೯೬೩ರ ಅಧಿನಿಯಮ ೨೨) ಅಂಗೀಕೃತವಾಗಿ ೧೯೬೪ರಲ್ಲಿ ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯವು ಸ್ಥಾಪಿತವಾಯಿತು ಹಾಗೂ ಅದನ್ನು ಆಗಿನ ಉಪ ರಾಷ್ಟ್ರಪತಿಗಳಾದ ಸನ್ಮಾನ್ಯ ಡಾ.ಜಾಕೀರ್ ಹುಸೇನ್‌ರವರು ಉದ್ಘಾಟಿಸಿದರು. ಕೃಷಿ ವಿಶ್ವವಿದ್ಯಾನಿಲಯದ ಮೊಟ್ಟಮೊದಲ ಉಪಕುಲಪತಿಗಳಾಗಿ ಡಾ.ಕೆ.ಸಿ.ನಾಯಕ್‌ರವರನ್ನು ಹಾಗೂ ಕೃಷಿ ಕಾಲೇಜಿನ ಪ್ರಾಂಶುಪಾಲರಾಗಿದ್ದ ಡಾ.ಎಂ.ಪುಟ್ಟರುದ್ರಯ್ಯನವರನ್ನು ಕೃಷಿ ಕಾಲೇಜಿನ ಮೊದಲ ಶಿಕ್ಷಣ ನಿರ್ದೇಶಕರನ್ನಾಗಿ ನೇಮಿಸಲಾಯಿತು. ೧೯೭೫ರಲ್ಲಿ ಹೆಬ್ಬಾಳದಿಂದ ೮ ಕಿ.ಮೀ. ದೂರದಲ್ಲಿ ಗಾಂಧಿ ಕೃಷಿ ವಿಜ್ಞಾನ ಕೇಂದ್ರವನ್ನು ಸ್ಥಾಪಿಸಲಾಯಿತು ಹಾಗೂ ಕ್ರಮೇಣ ಹೆಬ್ಬಾಳದಿಂದ ಎಲ್ಲ ಆಡಳಿತ ನಿರ್ವಹಣೆ ಹಾಗೂ ಬಹುಪಾಲು ವಿಭಾಗಗಳನ್ನು ಗಾಂಧಿ ಕೃಷಿ ವಿಜ್ಞಾನ ಕೇಂದ್ರಕ್ಕೆ ವರ್ಗಾಯಿಸಲಾಗಿದೆ.

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯವನ್ನು ೧೯೮೬ರಲ್ಲಿ ವಿಭಜಿಸಿ ಧಾರವಾಡದಲ್ಲಿ ಕೇಂದ್ರ ಕಾರ್ಯಸ್ಥಾನವಿರುವ ಮತ್ತೊಂದು ಕೃಷಿ ವಿಶ್ವವಿದ್ಯಾನಿಲಯವನ್ನು ರಚಿಸಲಾಯಿತು. ೨೦೦೫-೦೬ನೇ ಸಾಲಿನಲ್ಲಿ ಪ್ರಾಣಿಶಾಸ್ತ್ರ ವಿಭಾಗಗಳನ್ನು ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ವ್ಯಾಪ್ತಿಯಿಂದ ಬೇರ್ಪಡಿಸಿ ಬೀದರಿನಲ್ಲಿ ಸ್ಥಾಪಿಸಿರುವ ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಶ್ವವಿದ್ಯಾನಿಲಯಕ್ಕೆ ವರ್ಗಾಯಿಸಲಾಯಿತು.

### ೪.೧.೪ ಏಕೀಕರಣದ ನಂತರದ ಕೃಷಿ ಅಭಿವೃದ್ಧಿ

ಕರ್ನಾಟಕ ರಾಜ್ಯವು ೧೯೫೬ರ ನವೆಂಬರ್ ತಿಂಗಳಿನಲ್ಲಿ ಅಸ್ತಿತ್ವಕ್ಕೆ ಬಂದಾಗ ಎರಡನೆಯ ಪಂಚವಾರ್ಷಿಕ ಯೋಜನೆಗಾಗಿ ಒಂದು ಸಮಗ್ರ ಕೃಷಿ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸಲು ರಾಜ್ಯಕ್ಕೆ ಅವಕಾಶ ದೊರಕಲಿಲ್ಲ. ಹೀಗಾಗಿ ಒಗ್ಗೂಡಿದ ಬೇರೆ ಬೇರೆ ಪ್ರಾಂತ್ಯಗಳ ಎಲ್ಲಾ ಯೋಜನೆಗಳನ್ನೂ ಒಟ್ಟುಗೂಡಿಸಿ ಅನುಷ್ಠಾನಗೊಳಿಸಲು ಮಾತ್ರ ರಾಜ್ಯಕ್ಕೆ ಸಾಧ್ಯವಾಯಿತು. ಅದೇ ಸಮಯದಲ್ಲಿ ಮೂರನೆಯ ಪಂಚವಾರ್ಷಿಕ ಯೋಜನೆಯನ್ನು ರೂಪಿಸಲಾಯಿತು ಮತ್ತು ೧೯೬೧ರಿಂದ ೧೯೬೬ರವರೆಗೆ ಅದನ್ನು ಅನುಷ್ಠಾನಗೊಳಿಸಲಾಯಿತು. ಒಂದು ರೀತಿಯಲ್ಲಿ ಹೊಸ ರಾಜ್ಯಕ್ಕೆ ಮೂರನೆಯ ಪಂಚವಾರ್ಷಿಕ ಯೋಜನೆಯೇ ಮೊದಲ ಪಂಚವಾರ್ಷಿಕ ಯೋಜನೆಯಾಯಿತು.

ರಾಜ್ಯದಲ್ಲಿನ ಕೃಷಿ ಅಭಿವೃದ್ಧಿಯನ್ನು ಸಾಮಾನ್ಯವಾಗಿ ನಾಲ್ಕು ಹಂತಗಳನ್ನಾಗಿ ವಿಂಗಡಿಸಬಹುದಾಗಿದೆ. ಮೊದಲನೆಯ ಹಂತವು ೧೯೫೬ರಿಂದ ೧೯೬೬ರವರೆಗಿನ ವಿವಿಧ ಕೃಷಿ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸೀಮಿತವಾಗಿದೆ. ಈ ಹಂತದಲ್ಲಿ ಸಾಂಪ್ರದಾಯಿಕ ಅಭಿವೃದ್ಧಿ ಕ್ರಮಗಳಾದ ಸಾಗುವಳಿ ಪ್ರದೇಶದ ವಿಸ್ತೀರ್ಣದ ಹೆಚ್ಚಳ, ನೀರಾವರಿ ಮೂಲಗಳನ್ನು ಹೆಚ್ಚಿಸುವಿಕೆ, ರಾಸಾಯನಿಕ ಗೊಬ್ಬರಗಳ ಬಳಕೆಯನ್ನು ಜನಪ್ರಿಯಗೊಳಿಸುವಿಕೆ, ಸುಧಾರಿತ ಬೀಜಗಳ ಬಳಕೆಯನ್ನು ಹೆಚ್ಚಿಸುವಿಕೆ, ಜಪಾನ್ ಪದ್ಧತಿಯ ಭತ್ತದ ಸಾಗುವಳಿಯನ್ನು ಜನಪ್ರಿಗೊಳಿಸುವಿಕೆ ಇತ್ಯಾದಿಗಳಿಗೆ ಒತ್ತು ನೀಡಲಾಗಿದೆ. ಇದರ ಮೂಲ ಉದ್ದೇಶವು ಕೃಷಿ ಉತ್ಪಾದನೆಯನ್ನು ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಹೆಚ್ಚಿಸುವುದಾಗಿತ್ತು. ಎರಡನೆಯ ಹಂತವು ೧೯೬೬ರಿಂದ ೧೯೮೦ರವರೆಗಿನ ಅವಧಿಗೆ ಸೀಮಿತಗೊಂಡಿದೆ. ಈ ಅವಧಿಯಲ್ಲಿ ಹೆಚ್ಚಿನ ಒತ್ತನ್ನು ಸಾಂದ್ರ ಬೇಸಾಯಕ್ಕೆ ನೀಡಲಾಯಿತು. ಹೊಸ ತಂತ್ರಜ್ಞಾನವು ಹೆಚ್ಚಿನ ಕೃಷಿ ಉತ್ಪಾದನೆಗೆ ದಾರಿ ಮಾಡಿಕೊಟ್ಟಿತು. ಮುಖ್ಯವಾಗಿ ಸಂಕರ ತಳಿಗಳು ಮತ್ತು ಅಧಿಕ ಇಳುವರಿ ತಳಿಗಳು ಹೆಚ್ಚಿನ ಉತ್ಪಾದನೆಗೆ ಕಾರಣವಾದವು. ಏಕದಳ ಧಾನ್ಯಗಳ ಉತ್ಪಾದನೆಯು ಸಂಕರ ಹಾಗೂ ಅಧಿಕ ಇಳುವರಿ ತಳಿಗಳ ಕಾರಣವಾಗಿ ಬಹಳವಾಗಿ ಹೆಚ್ಚಿತು. ಮೂರನೆಯ ಹಂತದ ಅವಧಿಯು ೧೯೮೦ರಿಂದ ೧೯೯೫ರವರೆಗೆ ಸೀಮಿತಗೊಂಡಿದೆ. ಈ ಅವಧಿಯಲ್ಲಿ ಬಡತನ ರೇಖೆಯಿಂದ ಕೆಳಗಿರುವ ಮತ್ತು ಸೌಲಭ್ಯ ವಂಚಿತರಾದ ರೈತ ಸಮುದಾಯಕ್ಕೆ ಅದರಲ್ಲೂ ಮುಖ್ಯವಾಗಿ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ, ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರೈತರಿಗೆ, ಕುಷ್ಕಿ ಸಾಗುವಳಿ ರೈತರಿಗೆ ಆಧುನಿಕ ತಂತ್ರಜ್ಞಾನ ಲಭಿಸಿ ಹೆಚ್ಚಿನ ಕೃಷಿ ಉತ್ಪಾದನೆಯ ಮೂಲಕ ಅವರುಗಳು ಮೇಲಕ್ಕೆ ಬರಲಿ ಎಂಬ ಉದ್ದೇಶವನ್ನು ಹೊಂದಲಾಗಿತ್ತು. ನಾಲ್ಕನೆಯ ಹಂತವು ೧೯೯೫ರಿಂದ ಪ್ರಾರಂಭವಾಗಿದೆ. ರಾಜ್ಯ ಸರ್ಕಾರವು ತನ್ನದೇ ಆದ ಕೃಷಿ ನೀತಿಯೊಂದನ್ನು ೧೯೯೫ರಲ್ಲಿ ಹೊರತಂದಿತು. ಈ ಕೃಷಿ ನೀತಿಯಲ್ಲಿ ಬದಲಾಗುತ್ತಿರುವ ಕೃಷಿ ಸನ್ನಿವೇಶಗಳಿಗೆ

ಅನುಗುಣವಾಗಿ, ಕೃಷಿಯ ಜಾಗತೀಕರಣ ಹಾಗೂ ಉದಾರೀಕರಣಕ್ಕೆ ಅನುಗುಣವಾಗಿ ವಿಶ್ವ ಮಾರುಕಟ್ಟೆಯ ಸನ್ನಿವೇಶಕ್ಕೆ ಅನುಗುಣವಾಗಿ ಸಮಗ್ರ ಬೆಳವಣಿಗೆಯನ್ನು ಸಾಧಿಸಲು ಮತ್ತು ಕೃಷಿ ಹಾಗೂ ಅದಕ್ಕೆ ಸಂಬಂಧಿಸಿದ ಉದ್ದಿಮೆಗಳಲ್ಲಿ ಹೆಚ್ಚಿನ ಬೆಳವಣಿಗೆ ಗತಿಯನ್ನು ಹೊಂದಲು ವಿಶೇಷ ಒತ್ತನ್ನು ನೀಡಲಾಗಿದೆ.

**೪.೧.೫. ಜಲಾನಯನ ಅಭಿವೃದ್ಧಿ**

ಸ್ವಾತಂತ್ರ್ಯ ಪೂರ್ವದಲ್ಲಿ ರಾಜ ಮಹಾರಾಜರುಗಳು ಮತ್ತು ಪಾಳೆಯಗಾರರು ಗ್ರಾಮಗಳಲ್ಲಿ ಹೊಂಡ, ಕಲ್ಯಾಣಿ, ಗೋಕಟ್ಟೆ, ಕೆರೆಕುಂಟೆಗಳನ್ನು ನಿರ್ಮಿಸಿ ನೀರಿನ ಸಂಗ್ರಹಣೆ ಹಾಗೂ ಸಂರಕ್ಷಣೆ ಕಾರ್ಯಗಳನ್ನು ನಡೆಸುತ್ತಿದ್ದರು. ಅನಂತರ ಬಂದ ಬ್ರಿಟಿಷರು ಬರಪರಿಹಾರ ಹಾಗೂ ಭೂ ಸವಕಳಿ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ಪ್ರಯತ್ನ ನಡೆಸಿದರು. ಇಂಪೀರಿಯಲ್ ಸರ್ಕಾರ ನೇಮಿಸಿದ ರಾಯಲ್ ಆಯೋಗವು ದೇಶದ ತೀವ್ರ ಬರ ಸಮಸ್ಯೆಯ ಪರಿಹಾರಕ್ಕೆ ಹಲವಾರು ಶಿಫಾರಸ್ಸುಗಳನ್ನು ಮಾಡಿತು. ಅವುಗಳಲ್ಲಿ ಒಣ ಭೂಮಿ ಅಭಿವೃದ್ಧಿ ಸಂಶೋಧನಾ ಕೇಂದ್ರದ ಸ್ಥಾಪನೆಯು ಅತ್ಯಂತ ಮಹತ್ವದ್ದು. ದೇಶದಲ್ಲಿ ಸ್ಥಾಪನೆಯಾದ ೫ ಸಂಶೋಧನಾ ಕೇಂದ್ರಗಳಲ್ಲಿ ೩ ಕೇಂದ್ರಗಳು ಕರ್ನಾಟಕ ರಾಜ್ಯದ ಬಿಜಾಪುರ, ಹಗರಿ ಮತ್ತು ರಾಯಚೂರಿನಲ್ಲಿ ಸ್ಥಾಪನೆಯಾದವು. ಈ ಕೇಂದ್ರಗಳಲ್ಲಿ ಮಣ್ಣು ಮತ್ತು ನೀರಿನ ಸಂರಕ್ಷಣೆಯ ಸಂಶೋಧನೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಯಿತು.

ಮೊದಲ ಪಂಚವಾರ್ಷಿಕ ಯೋಜನೆಯ (೧೯೫೧-೫೬) ಅವಧಿಯಲ್ಲಿ ಯೋಜನಕಾರರು ಮತ್ತು ವಿಜ್ಞಾನಿಗಳಿಗೆ ದೇಶದಲ್ಲಿರುವ ಮಣ್ಣು ಸವಕಳಿ ಸಮಸ್ಯೆಯ ಅರಿವಿದ್ದಿತು. ಆದರೆ ಈ ಸಮಸ್ಯೆಗೆ ವೈಜ್ಞಾನಿಕ ಪರಿಹಾರೋಪಾಯಗಳು ಲಭ್ಯವಿರಲಿಲ್ಲ. ಆದ್ದರಿಂದ, ಸರಕಾರವು ಮೊದಲೆರಡು ಪಂಚವಾರ್ಷಿಕ ಯೋಜನೆಗಳಲ್ಲಿ ಒಂಭತ್ತು ಮಣ್ಣು ಮತ್ತು ನೀರು ಸಂರಕ್ಷಣಾ ಸಂಶೋಧನಾ ಪ್ರಾತ್ಯಕ್ಷಿಕೆ ಮತ್ತು ತರಬೇತಿ ಕೇಂದ್ರಗಳನ್ನು ಸ್ಥಾಪಿಸಿತು. ಅಂಥ ಒಂದು ಸಂಶೋಧನಾ ಕೇಂದ್ರ ಕರ್ನಾಟಕದ ಬಳ್ಳಾರಿಯಲ್ಲಿ ೧೯೫೪ರಲ್ಲಿ ಸ್ಥಾಪನೆಯಾಯಿತು. ಈ ಸಂಶೋಧನಾ ಕೇಂದ್ರದ ಮುಖ್ಯ ಕಾರ್ಯವು ಶುಷ್ಕ ಮತ್ತು ಅರೆಶುಷ್ಕವಲಯಗಳಲ್ಲಿ ಭೂ ಸವಕಳಿಯ ನಿಯಂತ್ರಣ ಹಾಗೂ ಮಳೆಯ ನೀರನ್ನು ಸ್ಥಳದಲ್ಲಿಯೇ ಇಂಗಿಸುವುದರ ಮೇಲೆ ಕೇಂದ್ರೀಕರಿಸುವುದಾಗಿದ್ದಿತು. ೧೯೬೦ರಲ್ಲಿ ಮೈಸೂರು ಸರ್ಕಾರವು ಭೂಸುಧಾರಣಾ ಕಾಯಿದೆ ಮತ್ತು ನಿಯಮಗಳನ್ನು ಜಾರಿಗೆ ತಂದಿತು. ಮುಂದೆ ಭಾರತ ಸರ್ಕಾರವು ಜಲಾಶಯಗಳಲ್ಲಿ ಹೂಳು ತಡೆಯುವ ಉದ್ದೇಶದಿಂದ ೧೯೬೨ರಲ್ಲಿ ನದೀಕಣಿವೆ ಯೋಜನೆಯನ್ನು ಪ್ರಾರಂಭಿಸಿತು.

ಮಣ್ಣು ಮತ್ತು ನೀರು ಸಂರಕ್ಷಣಾ ಯೋಜನೆಗಳು ಹಾಗೂ ಕಾರ್ಯಕ್ರಮಗಳು ಜನ ಸಹಭಾಗಿತ್ವವಿಲ್ಲದೆ ಹಾಗೂ ಇತರ ಇಲಾಖೆಗಳಾದ ತೋಟಗಾರಿಕೆ, ಅರಣ್ಯ ಮತ್ತು ಪಶುಸಂಗೋಪನೆಗಳ ಸಹಭಾಗಿತ್ವವಿಲ್ಲದೆ ಕೇವಲ ಸರ್ಕಾರದ ಕಾರ್ಯಕ್ರಮಗಳಾಗಿ ಉಳಿದವು.

೧೯೭೦ರ ದಶಕದಲ್ಲಿ ಮಳೆಯಾಶ್ರಿತ ಕೃಷಿಗೆ ಪ್ರಾಮುಖ್ಯತೆಯನ್ನು ನೀಡಲಾಯಿತು ಹಾಗೂ ಇದೇ ಸಮಯದಲ್ಲಿ ಮಳೆ ಆಶ್ರಿತ ಕೃಷಿಯ ಸಮಸ್ಯೆಗಳನ್ನು ಎದುರಿಸಲು ಬಹುವಿಭಾಗೀಯ ಸಮನ್ವಯ ವಿಧಾನಗಳ ಕುರಿತು ವಿಚಾರ ಮಾಡಲಾಯಿತು. ಭಾರತೀಯ ಕೃಷಿ ಅನುಸಂಧಾನ ಪರಿಷತ್ ೧೯೭೧ರಲ್ಲಿ ಅಖಿಲ ಭಾರತ ಮಳೆಯಾಶ್ರಿತ ಕೃಷಿ ಸಮಗ್ರ ಸಂಶೋಧನಾ ಯೋಜನೆಯನ್ನು ಪ್ರಾರಂಭಿಸಿತು. ಇಂತಹ ಯೋಜನೆಗಳನ್ನು ಕರ್ನಾಟಕದಲ್ಲಿ ೩ ಸ್ಥಳಗಳಲ್ಲಿ - ಬೆಂಗಳೂರಿನ ಗಾಂಧಿ ಕೃಷಿ ವಿಜ್ಞಾನ ಕೇಂದ್ರ, ಬಿಜಾಪುರದ ಕೃಷಿ ಸಂಶೋಧನಾ ಕೇಂದ್ರ ಮತ್ತು ಬಳ್ಳಾರಿಯ ಕೇಂದ್ರ ಮಣ್ಣು ಮತ್ತು ನೀರು ಸಂರಕ್ಷಣಾ ಸಂಶೋಧನಾ ಮತ್ತು ತರಬೇತಿ ಸಂಸ್ಥೆಗಳಲ್ಲಿ ಪ್ರಾರಂಭಿಸಲಾಯಿತು. ಅನಂತರ ಸಂಶೋಧನಾ ಫಲಿತಾಂಶಗಳನ್ನು ರೈತರಿಗೆ ತಲುಪಿಸುವ ಉದ್ದೇಶದಿಂದ ಕಾರ್ಯವಾಹಿ ಸಂಶೋಧನಾ ಯೋಜನೆಗಳನ್ನು ಪ್ರಾರಂಭಿಸಲಾಯಿತು. ಕೇಂದ್ರ ಸರ್ಕಾರವು ೧೯೭೩-೭೪ರಲ್ಲಿ ಪದೇಪದೇ ಬರಗಾಲಕ್ಕೆ ತುತ್ತಾಗುವ ಪ್ರದೇಶಗಳಲ್ಲಿ ಬರಗಾಲದ ಸಮಸ್ಯೆಗಳನ್ನು ನಿವಾರಿಸುವ ಉದ್ದೇಶದಿಂದ ಬರಗಾಲಪೀಡಿತ ಪ್ರದೇಶಾಭಿವೃದ್ಧಿ ಯೋಜನೆಯನ್ನು (ಡಿ.ಪಿ.ಎ.ಪಿ.) ಆರಂಭ ಮಾಡಿತು. ಮರುಭೂಮೀಕರಣ ಹಾಗೂ ಹವಾಮಾನ ವೈಪರೀತ್ಯಗಳಿಂದಾಗಿ ಕೃಷಿ, ಜಾನುವಾರು ಹಾಗೂ ಮನುಷ್ಯರ ಮೇಲೆ ಉಂಟಾಗುವ ದುಷ್ಪರಿಣಾಮಗಳ ಪ್ರಭಾವವನ್ನು ಕಡಿಮೆ ಮಾಡುವ ಉದ್ದೇಶದಿಂದ ರಾಷ್ಟ್ರೀಯ ಕೃಷಿ ಆಯೋಗದ ಶಿಫಾರಸ್ಸಿನಂತೆ ೧೯೭೭-೭೮ರಲ್ಲಿ ಮರುಭೂಮಿ ಅಭಿವೃದ್ಧಿ ಯೋಜನೆಯನ್ನು ಪ್ರಾರಂಭಿಸಿತು. ಈ ಅವಧಿಯಲ್ಲಿ ಬಹುವಿಭಾಗೀಯ ಸಹಬಾಗಿತ್ವದಿಂದ ಜಲಾನಯನ ಅಭಿವೃದ್ಧಿಗೆ ಚಾಲನೆ ದೊರೆಯಿತಾದರೂ ಮಣ್ಣು ಮತ್ತು ನೀರು ಸಂರಕ್ಷಣೆ ಚಟುವಟಿಕೆಗಳಲ್ಲಿ ಜನ ಸಹಭಾಗಿತ್ವದ ಕೊರತೆ ಇತ್ತು.

ಇಂತಹ ಕೊರತೆಯನ್ನು ನಿವಾರಿಸುವ ಉದ್ದೇಶದಿಂದ ವಿಶ್ವಬ್ಯಾಂಕ್ ನೆರವಿನ ಯೋಜನೆಯಾದ ಕಬ್ಬಾಳ ನಾಲಾ ಜಲಾನಯನ ಯೋಜನೆಯನ್ನು ೧೯೮೪ರಲ್ಲಿ ಅನುಷ್ಠಾನಗೊಳಿಸಲಾಯಿತು. ಈ ಯೋಜನೆಯಲ್ಲಿ ಕೃಷಿ, ಅರಣ್ಯ ಮತ್ತು ತೋಟಗಾರಿಕೆ ಇಲಾಖೆಯ ಅಧಿಕಾರಿಗಳು ಒಬ್ಬ ಯೋಜನಾ ನಿರ್ದೇಶಕರ ಮಾರ್ಗದರ್ಶನ ಮತ್ತು ಮುಂದಾಳತ್ವದಲ್ಲಿ ಕಾರ್ಯನಿರ್ವಹಿಸಲಾಯಿತು. ಅನಂತರ ಕರ್ನಾಟಕ ಸರ್ಕಾರವು ಪ್ರತಿ ಕಂದಾಯ ವಿಭಾಗದಲ್ಲಿ ಒಂದೊಂದು ಕೃಷಿ ಭೂಮಿ ಅಭಿವೃದ್ಧಿ ಮಂಡಳಿಯನ್ನು ಪ್ರಾರಂಭಿಸಿ ಪ್ರತಿ ಜಿಲ್ಲೆಯಲ್ಲಿಯೂ ಜಲಾನಯನ ಅಭಿವೃದ್ಧಿ ಕಾರ್ಯಕ್ರಮವನ್ನು

ಅನುಷ್ಠಾನಗೊಳಿಸುವ ವ್ಯವಸ್ಥೆ ಮಾಡಿತು. ಆಡಳಿತಾತ್ಮಕ (ಆರ್ಥಿಕ) ಹಾಗೂ ಯೋಜನಾಕಾರರೊಂದಿಗೆ ಚಟುವಟಿಕೆಗಳ ಸಮನ್ವಯ ಸಾಧಿಸಲು ರಾಜ್ಯಮಟ್ಟದಲ್ಲಿ ಒಬ್ಬ ನಿರ್ದೇಶಕರ ಮುಖ್ಯಸ್ಥಿಕೆಯಲ್ಲಿ ರಾಜ್ಯ ಜಲಾನಯನ ಅಭಿವೃದ್ಧಿ ಕೋಶವನ್ನು ಸ್ಥಾಪಿಸಲಾಯಿತು.

ಸರ್ಕಾರವು ೧೯೯೩ರಲ್ಲಿ ಹನುಮಂತರಾವ್ ಸಮಿತಿಯನ್ನು ರಚಿಸಿ ವಿವಿಧ ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳಾದ ಡಿ.ಪಿ.ಎ.ಪಿ., ಡಿ.ಡಿ.ಪಿ. ಮತ್ತು ಐ.ಡಬ್ಲ್ಯೂ.ಡಿ.ಪಿ.ಗಳನ್ನು ಸಮರ್ಥವಾಗಿ ಅನುಷ್ಠಾನಗೊಳಿಸಲು ಕಾರ್ಯತಂತ್ರ ಯೋಜನೆ ರೂಪಿಸಲು ಕೇಳಿಕೊಳ್ಳಲಾಯಿತು. ಡಾ.ಹನುಮಂತರಾವ್ ಸಮಿತಿಯು ೧೯೯೪ರಲ್ಲಿ ತಮ್ಮ ವರದಿಯನ್ನು ಸಲ್ಲಿಸಿ ಯೋಜನೆ ಕಾರ್ಯಾನುಷ್ಠಾನ ಮತ್ತು ನಿರ್ವಹಣೆಯ ಹೊಣೆಗಾರಿಕೆಯನ್ನು ಜನರ ಸಂಘಸಂಸ್ಥೆಗಳಿಗೆ ಒಪ್ಪಿಸಲು ಶಿಫಾರಸ್ಸು ಮಾಡಿತು. ಜಲಾನಯನ ಅಭಿವೃದ್ಧಿ ಮಾರ್ಗವು ಗಣನೀಯವಾದ ಬದಲಾವಣೆಯನ್ನು ಹೊಂದಿ ಸುಭದ್ರವಾದರೂ ಜನಸಹಭಾಗಿತ್ವ ನೀತಿಯು ಸಾಕಷ್ಟು ಚಾಲನೆಯನ್ನು ಪಡೆಯಲಿಲ್ಲ.

ಕೃಷಿಗೆ ಅತ್ಯವಶ್ಯಕವಾದ ಮಣ್ಣು ಮತ್ತು ನೀರಿನ ಸಂರಕ್ಷಣೆ ಕಾರ್ಯಕ್ರಮದ ನಿರ್ವಹಣೆ ೨೦೦೦ದವರೆಗೂ ಕರ್ನಾಟಕ ರಾಜ್ಯ ಕೃಷಿ ಇಲಾಖೆಯ ನಿಯಂತ್ರಣದಲ್ಲಿತ್ತು. ಜಲಾನಯನ ಅಭಿವೃದ್ಧಿಯನ್ನು ಹೆಚ್ಚು ವೃತ್ತಿಪರವನ್ನಾಗಿ ಮಾಡಲು ಮತ್ತು ಇತರ ಇಲಾಖೆ ಹಾಗೂ ವಿಭಾಗಗಳ ಸಮನ್ವಯ, ಸಹಭಾಗಿತ್ವದೊಂದಿಗೆ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸಲು ಸಾಧ್ಯವಾಗುವಂತೆ ಪ್ರತ್ಯೇಕ ಜಲಾನಯದ ಅಭಿವೃದ್ಧಿ ಇಲಾಖೆಯನ್ನು ಪ್ರಾರಂಭಿಸಲಾಯಿತು. ಈ ಇಲಾಖೆಗೆ ಕೃಷಿ, ಭೂ ಸಂರಕ್ಷಣೆ, ಅರಣ್ಯೀಕರಣ, ತೋಟಗಾರಿಕೆ, ಜಾನುವಾರು ಮತ್ತು ಹುಲ್ಲುಗಾವಲು ಅಭಿವೃದ್ಧಿ ಹಾಗೂ ಇತರ ಆದಾಯಗಳಿಕೆ ಕಾರ್ಯಗಳು ಮುಂತಾದ ಚಟುವಟಿಕೆಗಳ ರಚನೆ, ಯೋಜನೆ ಮತ್ತು ಅನುಷ್ಠಾನಗೊಳಿಸಲು ಸಮನ್ವಯ ಕಾರ್ಯನಡೆಸುವ ಹೊಣೆಗಾರಿಕೆಯನ್ನು ವಹಿಸಿಕೊಡಲಾಗಿದೆ.

**೪.೧.೬. ವಿಶ್ವ ವಾಣಿಜ್ಯ ಸಂಸ್ಥೆ ಘಟಕ**

ಕೃಷಿ ಇಲಾಖೆಯಡಿ ಡಿಸೆಂಬರ್ ೨೦೦೨ರಲ್ಲಿ ವಿಶ್ವ ವಾಣಿಜ್ಯ ಸಂಸ್ಥೆ ಘಟಕವನ್ನು ಸ್ಥಾಪಿಸಲಾಗಿದೆ (ವಾರ್ಷಿಕ ವರದಿ, ಕೃಷಿ ಇಲಾಖೆ, ೨೦೦೫). ವಿಶ್ವ ವಾಣಿಜ್ಯ ಸಂಸ್ಥೆ ಒಪ್ಪಂದದಡಿ ಕೃಷಿ ಸಂಬಂಧಿತ ಒಪ್ಪಂದಗಳ ಬಗೆಗಿನ ಇತ್ತೀಚಿನ ಬೆಳವಣಿಗೆಗಳ ಬಗೆಗೆ ಕ್ಷೇತ್ರ ಸಿಬ್ಬಂದಿ ಹಾಗೂ ರೈತ ಸಮುದಾಯದಲ್ಲಿ ವ್ಯಾಪಕ ಪ್ರಚಾರ ನೀಡುವುದು ಈ ಘಟಕದ ಧ್ಯೇಯವಾಗಿದೆ. ಈ ಘಟಕದಿಂದ ವಿಶ್ವ ವಾಣಿಜ್ಯ ಸಂಸ್ಥೆಯ ಒಪ್ಪಂದ, ಕೃಷಿ ಹಾಗೂ ಆಹಾರ ಸಂಬಂಧಿತ ವಿಷಯಗಳ ಬಗ್ಗೆ ಅಧ್ಯಯನ ಮಾಡಲು ಕರ್ನಾಟಕ

ಸರ್ಕಾರ ನೇಮಿಸಿದ ಡಾ.ಪ್ರೇಮನಾಥ್ ಸಮಿತಿಯ ವರದಿಯನ್ನು ವಿಶ್ವ ವಾಣಿಜ್ಯ ಒಪ್ಪಂದದಿಂದ ರಾಜ್ಯದ ಕೃಷಿ ವಲಯದ ಮೇಲೆ ಆಗುವ ಪರಿಣಾಮ, ಜಾಗತೀಕರಣ ಮತ್ತು ವಾಣಿಜ್ಯ ಉದಾರೀಕರಣದಿಂದಾಗುವ ಬದಲಾವಣೆಗೆ ಹೊಂದಿಕೊಳ್ಳುವ ಕುರಿತ ವಿಚಾರಗಳನ್ನು ಪ್ರಚಾರ ಪಡಿಸಲಾಗುತ್ತಿದೆ.

ಡಾ.ಜಿ.ಕೆ.ವೀರೇಶ್‌ರವರ ಅಧ್ಯಕ್ಷತೆಯಲ್ಲಿ ಸಸ್ಯತಳಿಗಳ ಮತ್ತು ರೈತರ ಹಕ್ಕುಗಳ ಅಧಿನಿಯಮ ೨೦೦೧ರ ಅನುಷ್ಠಾನಕ್ಕೆ ರಾಜ್ಯ ಮಟ್ಟದ ಸಮಿತಿ ಹಾಗೂ ಕೃಷಿ ಆಯುಕ್ತರ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಉಪಸಮಿತಿಯನ್ನು ರಚಿಸಲಾಗಿದೆ. ಅಲ್ಲದೆ, ರಾಜ್ಯದ ಎರಡು ಕೃಷಿ ವಿಶ್ವವಿದ್ಯಾನಿಲಯಗಳ ವ್ಯಾಪ್ತಿಗೆ ಪ್ರತ್ಯೇಕವಾಗಿ ಒಂದೊಂದು ರಾಜ್ಯಮಟ್ಟದ ತಾಂತ್ರಿಕ ಸಮಿತಿಗಳನ್ನು ಮತ್ತು ಜಿಲ್ಲಾಮಟ್ಟದಲ್ಲಿ ಸಸ್ಯತಳಿಗಳನ್ನು ಗುರುತಿಸಿ ಮಾಹಿತಿ ಸಂಗ್ರಹಿಸಲು ಜಿಲ್ಲಾ ಜಂಟಿ ಕೃಷಿ ನಿರ್ದೇಶಕರ ಅಧ್ಯಕ್ಷತೆಯಲ್ಲಿ ತಾಂತ್ರಿಕ ಸಮಿತಿಗಳನ್ನು ಈ ಕೆಳಕಂಡ ಉದ್ದೇಶಗಳಿಗಾಗಿ ರಚಿಸಲಾಗಿದೆ:

- ಭೌಗೋಳಿಕ ಸೂಚನೆಗಳನ್ವಯ ಸ್ಥಳೀಯ ತಳಿಗಳನ್ನು ಗುರುತಿಸುವುದು.
- ಸ್ಥಳೀಯ ಸಸ್ಯತಳಿಗಳ ರಕ್ಷಣೆಗೆ ಮಾಹಿತಿಯನ್ನು ಸಂಗ್ರಹಿಸುವುದು.
- ನಶಿಸಿಹೋಗಿರುವ ತಳಿಗಳ ಬಗ್ಗೆ ಮಾಹಿತಿ ಸಂಗ್ರಹಿಸುವುದು.
- ತಾಲ್ಲೂಕು ಮಟ್ಟದಲ್ಲಿ ಸಸ್ಯ ತಳಿಗಳ ಬಗ್ಗೆ ಮೂಲ ಮಾಹಿತಿಯನ್ನು ಸಂಗ್ರಹಿಸುವುದು.
- ರೈತರ ತಳಿಗಳನ್ನು ಗುರುತಿಸಿ ಅವುಗಳ ದಾಖಲಾತಿಗಾಗಿ ರೈತರಿಗೆ ಮಾರ್ಗದರ್ಶನ ನೀಡುವುದು.

### ೪.೨ ಕೃಷಿವಿಜ್ಞಾನ ಸಾಹಿತ್ಯದ ದಿಕ್ಕುದೆಸೆಗಳು

ಈ ಮೇಲೆ ವಿವರಿಸಿರುವ ಕೃಷಿ ಕ್ಷೇತ್ರದ ಈ ಅಭಿವೃದ್ಧಿಗಳ ಹಿನ್ನೆಲೆಯಲ್ಲಿ ಕೃಷಿವಿಜ್ಞಾನ ಸಾಹಿತ್ಯದ ಉಗಮ ಮತ್ತು ಬೆಳವಣಿಗೆಯನ್ನು ಗುರುತಿಸಿ ವಿಶ್ಲೇಷಿಸಬಹುದು. ಕೃಷಿ ಸಾಹಿತ್ಯ ಬೆಳವಣಿಗೆಯ ಅಧ್ಯಯನದಲ್ಲಿ ಮೂರು ಹಂತಗಳನ್ನು ಗುರುತಿಸಿಕೊಳ್ಳಲಾಗಿದೆ:

೧. ಮೊದಲನೇ ಹಂತ– ೧೯ನೇ ಶತಮಾನದ ಅಂತ್ಯದಿಂದ ೧೯೪೭ರವರೆಗೆ

೨. ಎರಡನೇ ಹಂತ– ೧೯೪೮ರಿಂದ ೧೯೮೦ರವರೆಗೆ

೩. ಮೂರನೇ ಹಂತ– ೧೯೮೧ರಿಂದ ಇಂದಿನವರೆಗೆ

ಈ ಮೇಲಿನ ಮೂರೂ ಹಂತಗಳಿಗೆ ಲಿಖಿತ ದಾಖಲೆಗಳಿವೆ. ಅದಕ್ಕೂ ಹಿಂದೆ ಕೃಷಿ ಜ್ಞಾನವಿರಲಿಲ್ಲವೆಂದಲ್ಲ. ಮೌಖಿಕವಾಗಿ ತಲೆಮಾರಿನಿಂದ ತಲೆಮಾರಿಗೆ, ಸಮುದಾಯದಿಂದ ಸಮುದಾಯಕ್ಕೆ ಕೃಷಿ ಜ್ಞಾನ ಹರಿದುಬರುತ್ತಿತ್ತು.

### ೪.೨.೧ ಜಾನಪದ ಕೃಷಿ ಸಾಹಿತ್ಯ

ಕೃಷಿಯೇ ಜನರ ಬದುಕಾಗಿದ್ದಾಗ ಹಾಗೂ ಜೀವನಾಧಾರವಾಗಿದ್ದಾಗ ಕೃಷಿಯ ಬಗೆಗಿನ ಜ್ಞಾನ, ತಲೆಮಾರಿನಿಂದ ತಲೆಮಾರಿಗೆ ದೊರಕುತ್ತಿದ್ದ ಭೂಮಿಯ ಹಾಗೆ ಪಿತ್ರಾರ್ಜಿತವಾಗಿಯೇ ದೊರಕುತ್ತಿತ್ತು. ಆಗ ಅವರಿಗೆ ಬಾಹ್ಯ ಜ್ಞಾನ ಪರಿಕರದ ಆವಶ್ಯಕತೆ ಇರಲಿಲ್ಲ. ಮೌಖಿಕ ಜ್ಞಾನ ಪರಂಪರೆಯ ಅರಿವಷ್ಟೇ ಇದ್ದ, ಬಹುಪಾಲು ಅನಕ್ಷರಸ್ಥರಾಗಿದ್ದ ಅವರಿಗೆ ಶಿಷ್ಟ ಲಿಖಿತ ಸಾಹಿತ್ಯರೂಪದಲ್ಲಿ ಕೃಷಿಜ್ಞಾನ ಲಭಿಸಬಹುದು ಎಂಬ ಕಲ್ಪನೆಯೂ ಇರಲಿಕ್ಕಿಲ್ಲ. ಬದುಕಿನ ಹಲವಾರು ಅಂಶಗಳು ಜನಪದದಲ್ಲಿ ಹಾಸುಹೊಕ್ಕಾಗಿರುವಂತೆ ಕೃಷಿಯ ಬಗೆಗಿನ ಅನುಭವ ಹಾಗೂ ಪಾರಂಪರಿಕ ಜ್ಞಾನವೂ ಸಹ ಮೌಖಿಕ ಜನಪದದಲ್ಲಿ ಹಾಸುಹೊಕ್ಕಾಗಿತ್ತು. ಇಂದು ನಾವು 'ಜಾನಪದ' ಎಂದು ಪರಿಕಲ್ಪಿಸುವ ಸಂಗತಿಗಳೆಲ್ಲವೂ ಕೃಷಿ ಸಂಸ್ಕೃತಿಯ ಸಾಮುದಾಯಿಕ ಸಮಾಜವೊಂದರ ಕ್ರಿಯಾಚರಣೆಗಳಾಗಿರುತ್ತವೆ (ಶಿವರಾಮ ಶೆಟ್ಟಿ, ೨೦೦೦).

### ೪.೨.೨ ಕೃಷಿ ಗಾದೆಗಳು

ಮಾನವ ಸಮುದಾಯದ ವಿಧವಿಧವಾದ ಅಭಿವ್ಯಕ್ತಿಗಳ ಮೂಲಕ ಸಮುದಾಯದ ಚಿಂತನೆ, ಆಶಯ, ಮಿಡಿತ ತುಡಿತಗಳನ್ನು ನಾವು ಅರ್ಥಮಾಡಿಕೊಳ್ಳಬಹುದಾಗಿದೆ. ಹಾಗೆ ಅರ್ಥಮಾಡಿಕೊಳ್ಳುವುದರ ಮೂಲಕ ಮಾನವ ಸಮುದಾಯ ಸಾಗಿಬರುತ್ತಿರುವ ಜಾಡನ್ನು ಗುರ್ತಿಸಬಹುದಾಗಿದೆ. ಜನಪದ ಸಾಹಿತ್ಯದ ಒಂದು ಪ್ರಮುಖವಾದ ಅಂಗ ಗಾದೆ. ಗಾದೆಗಳಲ್ಲಿ ಅವುಗಳ ಸಾಹಿತ್ಯಕ ಅಥವಾ ಸ್ವಾರಸ್ಯಕರ ಅಂಶಗಳನ್ನು ತಿಳಿದುಕೊಳ್ಳುವುದು ಒಂದು ಹಂತದ ಕೆಲಸವಾದರೆ, ಗಾದೆಗಳು ಪ್ರಸಾರದಲ್ಲಿರುವ ಪರಿಸರದ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವುದು ಮತ್ತೊಂದು ಪ್ರಮುಖವಾದ ಕೆಲಸವಾಗುತ್ತದೆ. ಆ ಮೂಲಕ ಆ ಸಂಸ್ಕೃತಿಯ ಇತಿಮಿತಿಗಳನ್ನು ನಾವು ಕಾಣಬಹುದಾಗಿದೆ. ಗಾದೆಯನ್ನು ಒಬ್ಬ ಗೊತ್ತಾದ ವ್ಯಕ್ತಿ ಒಂದು ಗೊತ್ತಾದ ಕಾಲದಲ್ಲಿ ಸೃಷ್ಟಿಸಿದ್ದಾನೆ ಎಂದು ಹೇಳುವುದು ಆಗದ ಮಾತು. ಗಾದೆ ಒಂದು ಸಾಮೂಹಿಕ ಸೃಷ್ಟಿ. ಸಾಂದರ್ಭಿಕವಾಗಿ ಹುಟ್ಟಿಕೊಳ್ಳುವ ಗಾದೆ ಕ್ರಮೇಣ ಸಮುದಾಯದ ಸ್ವತ್ತಾಗಿ ಪರಂಪರಾಗತವಾಗಿ ಬೆಳೆಯುತ್ತ ಹೋಗುವ ಒಂದು ಕ್ರಿಯೆ. ಜಾನಪದ ವಿದ್ವಾಂಸ ಎ.ಕೆ. ರಾಮಾನುಜನ್ ಹೇಳುವಂತೆ 'ಗಾದೆಯೆಂದರೆ ಹಳೆಯ ಮಾತು. ಜನರಾಡಿ ಪಳಗಿಸಿದ ಮಾತು. ಲೋಕೋಕ್ತಿ.' ಇಂಥ ಗಾದೆಗಳನ್ನು ವಿಶ್ಲೇಷಣೆಗೆ ಅಥವಾ ವಿಮರ್ಶೆಗೆ ಒಳಪಡಿಸುವಾಗ ಅದರ ವಾಚ್ಯಾರ್ಥ ಅಥವಾ ಸಾಹಿತ್ಯಾರ್ಥವನ್ನಷ್ಟೇ ಗಮನಿಸಿದರೆ ಸಾಲದು. ಅವುಗಳೊಳಗೆ ಅಡಗಿರುವ ಆಯಾ ಜನಾಂಗದ ಜೀವನ ದೃಷ್ಟಿಯನ್ನೂ ಕಾಣಲು ಪ್ರಯತ್ನಪಡುವುದು ಸರಿಯಾದ ಅಭ್ಯಾಸವಾದೀತೆಂದು ನಾವು ಭಾವಿಸಬಹುದು. ಈ ಅರ್ಥದಲ್ಲೇ 'ಒಂದು ರಾಷ್ಟ್ರದ ಪ್ರತಿಭೆ, ವಿವೇಕ ಮತ್ತು ಅಂತಸ್ಸನ್ನು

ಅಲ್ಲಿನ ಗಾದೆಗಳಲ್ಲಿ ಕಂಡುಕೊಳ್ಳಬಹುದಾಗಿದೆ' ಎಂಬ ಫ್ರಾನ್ಸಿಸ್ ಬೇಕನ್ನನ ಮಾತನ್ನು ನಾವು ಗಮನಿಸಬೇಕಾಗುತ್ತದೆ. ಗಾದೆಯೆಂದರೆ ಸದ್ಯೋಜಾತ ನುಡಿಗಟ್ಟು; ಸೂಕ್ತ ಸಂದರ್ಭದಲ್ಲಿ ತಾಳಿದ ಯೋಗ್ಯ ನಿರ್ಣಯಗಳು. ಅಲ್ಲದೆ ಇವಕ್ಕೆ ಅನುಭವದ ಪರಿಮಿತಿ ಇರುವಂತೆ, ಅನುಭವದ ಪ್ರೀತಿಯೂ ಇರುತ್ತದೆ. ಒಂದು ಕಡೆ ಇವು ಮಾನವನ ಬುದ್ಧಿಮತ್ತಿಕೆಗಳಾದರೆ, ಮತ್ತೊಂದು ಕಡೆ ಆಲೋಚನಾದೀಪಿಕೆಗಳಾಗುತ್ತವೆ. ಮಾನವ ಬಾಳಿನ ಬೇವು, ಬೆಲ್ಲ ನೂರಾರು ವಿಧಾನಗಳಲ್ಲಿ ಹರಿದು ನಿಂತಿದೆ. ಆದ್ದರಿಂದಲೇ ಇವುಗಳಂತೆ ಬದುಕಿನ ಪ್ರತಿಭಾಗವನ್ನು ಸ್ಪರ್ಶಿಸುವ ಬೇರೊಂದು ಪ್ರಕಾರ ಇಲ್ಲವೆಂದು ಹೇಳಬೇಕಾಗುತ್ತದೆ.

ಕೃಷಿಯ ಬದುಕನ್ನು ಜನಪದರು ಗ್ರಹಿಸಿಕೊಳ್ಳುತ್ತಾ ತಮ್ಮ ಅನುಭವಗಳನ್ನು ಸಾಮಾಜಿಕ ಅರಿವಿನ ಅಭಿವ್ಯಕ್ತಿರೂಪದಲ್ಲಿ ಮೌಖಿಕ ಪರಿಭಾಷೆಯಲ್ಲಿ 'ದಾಖಲಿಸುತ್ತಾ' ಹೋಗುತ್ತಾರೆ. ಇಂದು ನಾವು ಸಾಮಾನ್ಯ ಅರ್ಥದಲ್ಲಿ ಒಕ್ಕಲುತನ ಎಂದು ಕರೆಯುವುದು ಮತ್ತು ಜನಪದವು ಗ್ರಹಿಸುವುದು ಸುತ್ತಮುತ್ತಲಿನ ಗ್ರಾಮೀಣ ಹಾಗೂ ಒಕ್ಕಲುತನದ ಪರಿಸರವನ್ನಷ್ಟೆ. ಜನಪದವು ತನಗೆ ವಿಶಿಷ್ಟವಾದ ಪ್ರಯೋಗಾತ್ಮಕ ನೆಲೆಯಲ್ಲಿ ಕೃಷಿ ಉತ್ಪಾದನೆ, ಕೃಷಿ ಆಚಾರ ವಿಚಾರಗಳು, ನೈಸರ್ಗಿಕ ನಿಯಮಗಳು, ಕೃಷಿಕನಿಗೆ ಸಂಬಂಧಿಸಿದಂತೆ ಜಾನುವಾರುಗಳ ಉತ್ಪಾದನೆ ಮುಂತಾದುವುಗಳ ಬಗೆಗಿನ ಅಸಾಧಾರಣ ಜ್ಞಾನ ಹಾಗೂ ಅನುಭವವನ್ನು ದಾಖಲಿಸುವುದು ಜಾನಪದದ ಒಂದು ಪರಿಭಾಷೆಯಾದ ಭಾಷಾ ಮಾಧ್ಯಮದಲ್ಲಿ. ಅಂತಹ ಭಾಷಾ ಮಾಧ್ಯಮದ ಉದಾಹರಣೆ ಗಾದೆಗಳು. ಗಾದೆಗಳು ಜನಪದ ಕತೆ, ನಂಬಿಕೆ, ಪುರಾಣಗಳಂತೆ ನಿರ್ದಿಷ್ಟ ಸಾಂಸ್ಕೃತಿಕ, ಚಾರಿತ್ರಿಕ ಸನ್ನಿವೇಶದಲ್ಲಿ ಬದುಕುವ ಮನುಷ್ಯನ ಸಾಮಾಜಿಕ ಬದುಕಿನ ಇರುವಿಕೆ ಮತ್ತು ಮುಂದುವರಿಕೆಯ ಸಲುವಾಗಿ ಅವು ರೂಪು ತಾಳುತ್ತಿರುತ್ತವೆ. ಈ ಅರ್ಥದಲ್ಲಿ ಜಾನಪದ ಅಧ್ಯಯನ ವರ್ಗೀಕರಿಸುವ ಕತೆ, ನಂಬಿಕೆ, ಪುರಾಣಗಳಂತೆ ಗಾದೆಗಳೂ ಸಹ ಕೇವಲ ಕತೆಯಾಗಿ, ನಂಬಿಕೆಯಾಗಿ, ಪುರಾಣವಾಗಿ ಮತ್ತು ಆಯಾ ಸಂದರ್ಭದ ವಿವೇಕದ ಮಾತಾಗಿ ಉಳಿಯದೆ ಅವು ಜನಪದ ಬದುಕಾಗುತ್ತವೆ. ಹೀಗೆ ಕೃಷಿಯ ಬಗ್ಗೆ ಇರುವ ಕತೆ, ಗಾದೆ, ಒಗಟು, ಆಚರಣೆ ವಿಧಾನಗಳಲ್ಲಿ ಬಳಕೆಯಾಗುವ ವಿಷಯಗಳು ಜನಪದ ಬದುಕಿನ ವಿಚಾರಗಳನ್ನು ಅಭಿವ್ಯಕ್ತಿಸುವ ವಾಹಕಗಳಾಗುತ್ತವೆ. ಕೃಷಿ ಗಾದೆಗಳು ಜ್ಞಾನದ ಆಗರವೂ ಅನುಭವದ ಸಾಗರವೂ ಆಗಿವೆ; ಕಾಲದಿಂದ ಕಾಲಕ್ಕೆ ಸಂಸ್ಕೃತಿಯನ್ನು ನಿಶ್ಚಿತರೀತಿಯಲ್ಲಿ ಪ್ರವಹಿಸುವ ಸಾಧನಗಳಾಗಿವೆ. ಅವು ತಲೆತಲಾಂತರಗಳ ಅನುಭವದ ಮೂಸೆಯಿಂದ ಮೂಡಿಬಂದ ಉಕ್ತಿಗಳಷ್ಟೇ ಅಲ್ಲ, ಕೃಷಿಯ ಸಾಂಪ್ರದಾಯಿಕ ಜ್ಞಾನವನ್ನು ಪಸರಿಸುವ ಮೌಖಿಕ ಮಾಧ್ಯಮವೂ ಆಗಿದೆ. ಗಾದೆಗಳಲ್ಲಿ ಜನಪದರು ಮಳೆಗಳ ಬಗೆಗೆ, ವಿವಿಧ ಬೆಳೆಗಳ ಬಗೆಗೆ, ವಿವಿಧ ಬೇಸಾಯದ ವಿಧಾನಗಳ ಬಗೆಗೆ ತಮ್ಮ ಅನುಭವದ ಜ್ಞಾನವನ್ನು ವ್ಯಕ್ತಪಡಿಸಿಕೊಂಡಿದ್ದಾರೆ.

### ೪.೨.೨.೧ ಗಾದೆಗಳ ವಿಶ್ಲೇಷಣೆ

ಗಾದೆಗಳಂತಹ ಸಾಂಸ್ಕೃತಿಕ ಅಭಿವ್ಯಕ್ತಿ ಮಾಧ್ಯಮ ರೂಪುಗೊಳ್ಳುವುದು ಮತ್ತು ವ್ಯಕ್ತಗೊಳ್ಳುವುದು ಗ್ರಾಮೀಣ ಅಥವಾ ಕೃಷಿಕ ಸಮಾಜದಲ್ಲಿ ಮಾತ್ರ ಸಾಧ್ಯವಾಗುವಂತಹುದು. ಔದ್ಯೋಗಿಕ ಪೂರ್ವದ ಪ್ರಾಚೀನ ಸಮಾಜಗಳಲ್ಲಿ ತನ್ನಿಂದ ನಿಯಂತ್ರಿಸಲಾಗದ ಸಂಸ್ಕೃತಿ ಮತ್ತು ಪ್ರಕೃತಿಯ ಅಂಶಗಳನ್ನು ನಿಯಂತ್ರಿಸುವ, ಗೆಲ್ಲುವ ಹಾಗೂ ಒಲಿಸುವ ಅನಿವಾರ್ಯ ಸನ್ನಿವೇಶ ಮಾನವನಿಗಿತ್ತು. ಹೀಗಾಗಿಯೇ ಕೃಷಿ ಪ್ರಧಾನ ಅಥವಾ ಗ್ರಾಮೀಣ ಪಾರಂಪರಿಕ ಸಮಾಜಗಳ ಮಾನವನ ಆಲೋಚನೆಯ ಸ್ವರೂಪದಲ್ಲಿ ಪ್ರಕೃತಿ ಮತ್ತು ಸಂಸ್ಕೃತಿಯಲ್ಲಿ ಮಾನವನಿಗೆ ನೇರವಾಗಿ ನಿಯಂತ್ರಿಸಲಾಗದ ಸಂಗತಿಗಳ ಕುರಿತಂತೆ ಪುರಾಣಗಳಿರುತ್ತವೆ, ಕತೆಗಳಿರುತ್ತವೆ ಹಾಗೂ ವಿಭಿನ್ನ ರೀತಿಯ ಸಾಂಸ್ಕೃತಿಕ ಕ್ರಿಯಾಚರಣೆಗಳಿರುತ್ತವೆ. ಅವನಿಗೆ ಕೃಷಿ ಒಂದು ಉದ್ಯೋಗವಷ್ಟೇ ಆಗಿರುವುದಿಲ್ಲ ಅದು ಅವನ ಬದುಕಿನ ಒಂದು ರೀತಿಯಾಗಿರುತ್ತದೆ. ಅವನೆಲ್ಲಾ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ಅವನ ಕೃಷಿಕ ಬದುಕಿನ ಪರಿಧಿಯಲ್ಲೇ ನಡೆಯುತ್ತಿರುತ್ತವೆ. ಗಾದೆಗಳು ಗ್ರಾಮವಾಸಿಗಳ ಸೃಷ್ಟಿಶಕ್ತಿಗೆ, ಅನಾದೃಶ್ಯ ಅನುಭವ ಜಗತ್ತಿಗೆ ದೀಪಸ್ತಂಭಗಳಾಗಿವೆ. ಪ್ರತಿಯೊಂದು ಗಾದೆಯೂ ಒಂದಲ್ಲ ಒಂದು ವಿಷಯವನ್ನು ಪ್ರತಿಪಾದಿಸುತ್ತದೆ ಹಾಗೂ ವ್ಯಕ್ತಿಗೆ, ಸಮುದಾಯಕ್ಕೆ ಅನುಭವದ ಜ್ಞಾನದ ಕಾಣಿಕೆಯನ್ನು ಕೊಡುತ್ತದೆ. ಇಂತಹ ಅನೇಕ ಗಾದೆಗಳ ಉದಾಹರಣೆಯನ್ನು ಅನುಬಂಧ ೨ರಲ್ಲಿ ಕೊಡಲಾಗಿದೆ. ಕೆಲವು ಕೃಷಿ ಗಾದೆಗಳನ್ನು, ಅವು ನೀಡುವ ಕೃಷಿಯ ಜ್ಞಾನದ ದೃಷ್ಟಿಯಿಂದ ಇಲ್ಲಿ ವಿಶ್ಲೇಷಿಸಲಾಗಿದೆ.

ಕೃಷಿ ಗಾದೆಗಳಲ್ಲಿ ಮಳೆಗೆ ಸಂಬಂಧಿಸಿದ ಗಾದೆಗಳು ಪ್ರಮುಖವಾದುವು. ಮಳೆಗೆ ಸಂಬಂಧಿಸಿದ ಕೆಲವು ಗಾದೆಗಳನ್ನು ಈ ಮುಂದೆ ನೀಡಲಾಗಿದೆ:

* ಅಡಿಕೆ ಆಹಾರವಲ್ಲ, ಕಾಲಕ್ಕೆ ಆಗದಮಳೆ ಮಳೆ ಅಲ್ಲ
* ಅತ್ತದ ಮಳೆ ಎತ್ತೆತ್ತಾಗೊ!
* ಅನುರಾಧ ಸುರಿದರೆ ಮನೋರೋಗ ಹೋಗುತ್ತೆ.
* ಅನುರಾಧ ಬಂದರೆ ನಮ್ಮ ರಾಗಿ ನಮ್ಮದೆ.
* ಅಶ್ಲೇಷ ಮಳೆ ಬಿದ್ದರೆ ನಿಶ್ಯೇಷ ಕಳೆ.
* ಅಶ್ಲೇಷ ಮಳೆ ನಿಶ್ಶೇಷ ಕೂಳೆ.
* ಅಶ್ಲೇಷ ಮಳೆ ಕೈತುಂಬ ಬೆಳೆ.
* ಅಶ್ಲೇಷ ಆವಿಯಾಗಿ ಹೋಗುತ್ತೆ.
* ಅಶ್ಲೇಷ ಮಳೆಗೆ ಸಸಿ ಗುಡ್ಡವೇರುತ್ತೆ.
* ಅಶ್ವಿನಿ ಸಸ್ಯ ನಾಶಿನಿ.

* ಅಶ್ವಿನಿ ಮಳೆ ಜಿದ್ದರೆ ಅರಿಸಿನಕ್ಕೆ ಮೇಲು, ಅಡಿಕೆಗೆ ಕೇಡು.
* ಅಸಲೇ ಮಳೆ ಕೈತುಂಬ ಬೆಳೆ.
* ಅಸ್ತದ ಮಳೆಯಲ್ಲಿ ಆರಂಭ ಬೇಡ.
* ಆದಿತ್ಯವಾರ ಬಂದ ಹಸ್ತ ಮಾಡಿತೆಲ್ರ ಸುಸ್ತ.
* ಆರಿದ್ರ ಇಲ್ದಿದ್ರೆ ದರಿದ್ರ ಖಂಡಿತ.
* ಆರಿದ್ರ ಮಳೆಗೆ ಆಗಿರುವ ಉಕ್ಕೆಗೆ ಬಿತ್ತಿಬಿಡು.
* ಆರಿದ್ರ ಸಕಾಲದ ಮಳೆ.
* ಆರಿದ್ರ ಗುಡುಗಿದರೆ ಆರು ಮಳೆ ಬರುವುದಿಲ್ಲ.
* ಆರುಗಾಲ ಮಳೆ ಹುಯ್ದರೂ ಮುತ್ತುಗಕ್ಕೆ ಮೂರೇ ಎಲೆ.
* ಆಶ್ವೀಜದಲ್ಲಿ ಹೊನ್ನು ಕರುಗುವ ಬಿಸಿಲು, ಮಣ್ಣು ಕರಗುವ ಮಳೆ.
* ಉಬ್ಬೇ ಮಳೆ ಅಬ್ಬೇ ಹಾಲು.
* ಕೃತ್ತಿಕೆ ಮಳೆಯಲ್ಲಿ ಬಿತ್ತಿದರೆ ಕುರಿತಪ್ಪು ಎಳ್ಳು.
* ಗೌರಿ ಹೊತ್ಗೆ ಗರಿ ಮೇಯಬೇಕು.
* ಚಿತ್ತೆ ಮಳೆ ಬರುವಾಗ ಚಿಟ್ಟೆಗಳು ಬಂದಾವಂತೆ.
* ಚಿತ್ರೆ ಮಳೆ ಎತ್ಲಿಂದಾದ್ರೂ ಬತ್ತದೆ.
* ಬಂದರೆ ಮಘೆ, ಹೋದರೆ ಹೊಗೆ.
* ಭರಣಿ ಬಿಸಲು ಭರಿಸೋಕೆ ಆಗೋದಿಲ್ಲ.
* ಭರಣಿ ಮಳೆ ಧರಣಿ ಎಲ್ಲಾ ಬೆಳೆ.
* ಮೃಗಶಿರ ಹೊಯ್ಯಲು ಮುದಿ ಎತ್ತು ಗರ್ಜಿಸಿತು.
* ಮೃಗಶಿರ ಹೊಯ್ಯೋಕೆ, ಮುಖ ಗುಡುಗೋಕೆ.
* ಮೃಗಶಿರ ಮಳೆ, ಮುಂಗಾರು ಬೆಳೆ.
* ವಿಶಾಖೆ ಹಿಡಿದರೆ ಪಿಶಾಚಿ ಹಿಡಿದಂತೆ.
* ಸ್ವಾತಿ ಮಳೆ ಹುಯ್ದರೆ ಮುತ್ತಿನಂಥ ಜೋಳ.
* ಹಸ್ತಕ್ಕೆ ಆರುಕಾಳು, ಚಿತ್ತಕ್ಕೆ ಮೂರು ಕಾಳು.

ಅಶ್ವಿನಿಯಿಂದ ಮೊದಲುಗೊಂಡು ಉತ್ತರಾಷಾಢದವರೆಗೆ ವರ್ಷದ ಕಾಲಮಾನವನ್ನು ಮುವ್ವತ್ತನಾಲ್ಕು ಮಳೆಗಳೆಂದು ವಿಭಾಗಿಸಿ ಲೆಕ್ಕ ಹಾಕಲಾಗಿದೆ. ಪ್ರತಿಯೊಂದು ಮಳೆಯ ನಕ್ಷತ್ರವು ಚಂದ್ರನ ನಡಿಗೆಯ ಲೆಕ್ಕದಲ್ಲಿ ಹದಿನಾಲ್ಕು ದಿನಗಳನ್ನೊಳಗೊಂಡಿರುತ್ತದೆ. ಮಳೆಗಳು ಬಂದರೆ ಅಥವಾ ಬಾರದಿದ್ದರೆ ಆಗುವ ಲಾಭ ನಷ್ಟಗಳನ್ನು ಜನಪದರು ಅನುಭವದ ಮೂಲಕ ಹೇಳುತ್ತಾರೆ. ಉದಾಹರಣೆಗೆ 'ಅಡಿಕೆ ಆಹಾರವಲ್ಲ. ಕಾಲಕ್ಕೆ

ಆಗದಮಳೆ ಮಳೆ ಅಲ್ಲ' ಎನ್ನುವ ಗಾದೆ ಕೃಷಿಯಲ್ಲಿನ ಮಳೆಯ ಪ್ರಾಮುಖ್ಯತೆಯನ್ನು ಹೇಳುತ್ತದೆ. ಅಡಿಕೆ ಅವಶ್ಯಕವಾದರೂ ಅದು ಹೇರಳವಾಗಿ ಲಭ್ಯವಿದ್ದರೂ ಅದನ್ನು ಆಹಾರವಾಗಿ ಬಳಸಲು ಸಾಧ್ಯವಿಲ್ಲ. ಹಾಗೆಯೇ ಕೃಷಿಯ ಕಾರ್ಯಗಳಲ್ಲಿ ಕಾಲಕಾಲಕ್ಕೆ ತಕ್ಕಂತೆ ಮಳೆಯಾದಲ್ಲಿ ಮಾತ್ರ ರೈತ ಕೃಷಿಯಲ್ಲಿ ಉತ್ತಮ ಫಸಲನ್ನು ಪಡೆಯಬಲ್ಲ. ಅಕಾಲದ ಮಳೆಯಿಂದ ಇರುವ ಬೆಳೆಯೂ ಹಾಳಾಗಿ ರೈತನಿಗೆ ನಷ್ಟವಾಗುತ್ತದೆ. ಬಿತ್ತನೆಯ ಸಮಯದಲ್ಲಿ, ಫಸಲು ಕೊಡುವ ಸಮಯದಲ್ಲಿ ಹೀಗೆ ಹಲವಾರು ಬೆಳೆಯ ಸಂದಿಗ್ಧ ಸಮಯಗಳಲ್ಲಿ ಮಳೆಯಾಗಬೇಕಾಗಿರುವುದು ಕೃಷಿಯ ಯಶಸ್ಸಿಗೆ ಅವಶ್ಯಕವಾದುದು ಎಂಬುದನ್ನು ಈ ಗಾದೆ ಹೇಳುತ್ತದೆ.

ಅದೇ ರೀತಿ 'ಅಶ್ಲೇಷ ಮಳೆ ಬಿದ್ದರೆ ನಿಶ್ಯೇಷ ಕಳೆ' ಎನ್ನುವ ಗಾದೆ ಸಹಜ ಕಳೆ ನಿಯಂತ್ರಣದಲ್ಲಿ ಅಶ್ಲೇಷ ಮಳೆಯ ಪಾತ್ರವನ್ನು ಹೇಳುತ್ತದೆ ಹಾಗೂ ಅಶ್ಲೇಷ ಮಳೆಯಾದಲ್ಲಿ ಬಹುಪಾಲು ಬೆಳೆ ಖಾತ್ರಿಯಾಗಿ ದೊರಕುತ್ತದೆನ್ನುವ ಅನುಭವದ ಮಾತನ್ನು 'ಅಶ್ಲೇಷ ಮಳೆ ಕೈತುಂಬ ಬೆಳೆ' ಎನ್ನುವ ಗಾದೆ ತಿಳಿಸುತ್ತದೆ. ಜೋಳದ ಬೆಳೆಯ ಇಳುವರಿ ಚೆನ್ನಾಗಿ ಬರಬೇಕಾದಲ್ಲಿ ಸ್ವಾತಿ ಮಳೆಯ ಪಾತ್ರವನ್ನು 'ಸ್ವಾತಿ ಮಳೆ ಹುಯ್ದರೆ ಮುತ್ತಿನಂಥ ಜೋಳ' ಎನ್ನುವ ಗಾದೆ ತಿಳಿಸುತ್ತದೆ. ಇದೇ ರೀತಿ ಮಳೆಯ ಬಗೆಗಿನ ಗಾದೆಗಳು ಕೃಷಿಕರ ಶತಶತಮಾನದ ಅನುಭವದ ಮೂಸೆಯಿಂದ, ತಲೆಮಾರಿನಿಂದ ತಲೆಮಾರಿಗೆ ಹರಿದುಬಂದಿವೆ.

ಹಲವಾರು ಬೇಸಾಯದ ಕ್ರಮಗಳ ಹಾಗೂ ಪದ್ಧತಿಗಳ ಬಗೆಗಿನ ಜ್ಞಾನ ಗಾದೆಗಳ ರೂಪದಲ್ಲಿ ಪ್ರಚುರವಾಗಿವೆ. ಬೇಸಾಯದ ಯಶಸ್ಸಿಗೆ ರೈತನ ಶ್ರಮ ಎಷ್ಟು ಅವಶ್ಯಕವೋ, ಅಷ್ಟೇ ಅವಶ್ಯಕ ಸೂಕ್ತ ಸಮಯದಲ್ಲಿ ಕೈಗೊಳ್ಳಬೇಕಾದ ಬೇಸಾಯದ ಕಾರ್ಯಗಳು. ಮಳೆಯಾದಾಗ, ಸೂಕ್ತ ಹಂಗಾಮಿನಲ್ಲಿ ಬಿತ್ತದ ಬೆಳೆ ಆರೋಗ್ಯಕರವಾಗಿರಲು ಸಾಧ್ಯವಿಲ್ಲ. ಅದನ್ನೇ 'ಅಕಾಲದಲ್ಲಿ ಬಿತ್ತಿದ ಬೆಳೆ ಮುದಿಯನ ಮಕ್ಕಳಂತೆ' ಎಂಬ ಗಾದೆ ತಿಳಿಸಿಹೇಳುತ್ತದೆ. ಸರಿಯಾಗಿ ನೀರು, ಗೊಬ್ಬರ ಕೊಟ್ಟು, ಕಳೆ ಇಲ್ಲದಂತೆ ಸೂಕ್ತ ಅಂತರ ಬೇಸಾಯಗಳೊಂದಿಗೆ 'ಅಂಗೈನಂತೆ ಹೊಲ ಮಾಡಿದ್ರೆ ಮುಂಗೈ ತುಂಬ ತುಪ್ಪ' ಎನ್ನುತ್ತದೆ ಮತ್ತೊಂದು ಗಾದೆ. ಇದೇ ರೀತಿ 'ಎಣ್ಣೆ ಹಾಕಿದರೆ ಕಣ್ಣಿಗೆ ಗುಣ, ಮಣ್ಣು ಹಾಕಿದರೆ ಬುಡಕ್ಕೆ ಗುಣ', 'ಆಳಕ್ಕುಳು, ಅಗಲಕ್ಕೆ ಬೇಡ', 'ಕೆಬ್ಬೆ ನೆಲ ಮೈ ತುಂಬ ಸಾಲ' ಮತ್ತು 'ಒಂದು ಅಗೆತ, ಹತ್ತು ಉಳುಮೆ' ಮುಂತಾದ ಗಾದೆಗಳು ಬೇಸಾಯದಲ್ಲಿ ರೈತರು ಅನುಸರಿಸಬೇಕಾದ ಪದ್ಧತಿಗಳ, ಕ್ರಮಗಳ ಬಗೆಗೆ ತಿಳಿಹೇಳುತ್ತವೆ. ಅಂತಹ ಕೆಲವು ಗಾದೆಗಳನ್ನು ಉದಾಹರಣೆಗೆ ಈ ಮುಂದೆ ಕೊಡಲಾಗಿದೆ.

* ಅಕಾಲದಲ್ಲಿ ಬಿತ್ತಿದ ಬೆಳೆ ಮುದಿಯನ ಮಕ್ಕಳಂತೆ.
* ಅಡಿಗೆಯ ಗುಣ ಸಾರಿನಲ್ಲಿ ನೋಡು, ಮಡಿಗೆಯ ಗುಣ ಫಲದಲ್ಲಿ ನೋಡು.
* ಅಂಗಲಾಗಿ ಬಿತ್ತಿದ್ದು ಅಗಲವಾಗಿ ಏಳುವುದು.
* ಅಂಗೈನಂತೆ ಹೊಲ ಮಾಡಿದ್ರೆ ಮುಂಗೈ ತುಂಬ ತುಪ್ಪ.
* ಅಂಜನ ಹಚ್ಚಿದ ಕಣ್ಣು ಚೆಂದ, ಗೊಬ್ಬರ ಹಾಕಿದ ಹೊಲ ಚೆಂದ.
* ಆದರೆ ಒಂದು ಅಡಿಕೆ ಮರ, ಹೋದರೆ ಒಂದು ಗೋಟಡಿಕೆ.
* ಆರಂಭಗಾರ ಕೂತು ಕೆಟ್ಟ, ದೊಂಬ ಆಡದೆ ಕೆಟ್ಟ.
* ಆಳಕ್ಕುಳು, ಅಗಲಕ್ಕೆ ಬೇಡ.
* ಈಡಿದ್ದವನ ಹೊಲ ತೋಟ ನೋಡಬೇಕು.
* ಉತ್ತು ಬಾಳುವವನ ಬದುಕು ಎತ್ತಲೂ ಲೇಸು.
* ಎಣ್ಣೆ ಹಾಕಿದರೆ ಕಣ್ಣಿಗೆ ಗುಣ, ಮಣ್ಣು ಹಾಕಿದರೆ ಬುಡಕ್ಕೆ ಗುಣ.
* ಎರೇ ಹೊಲ ಕರಿ ಬಂಗಾರ, ಮರಳು ಹೊಲ ಬರೀ ಶೃಂಗಾರ.
* ಒಗ್ಗರಣೆ ಇಲ್ಲದ ಸಾರು, ಉಳುಮೆಯಿಲ್ಲದ ಹೊಲ.
* ಒತ್ತಾದ ಬಿತ್ತನೆ ಕೈ ಹತ್ತದು.
* ಒಂದು ಅಗೆತ, ಹತ್ತು ಉಳುಮೆ.
* ಓಣಿ ಪಕ್ಕದ ಹೊಲ ಮಾಡಬೇಡ, ನೆಗೆಯೋ ಎತ್ತನು ಮನೆಗೆ ತರಬೇಡ.
* ಕಲ್ಲು ಹೊಲಕ್ಕೆ ಹುರುಳಿ ಬಿತ್ತು.
* ಕೆಟ್ಟ ಭೂಮಿಗೆ ಮನೇ ದವಸಾ ಕೊಟ್ಟು ಕೂಲಿ ಮಾಡಿಸಿದ.
* ಕೆಬ್ಬೆ ನೆಲ ಮೈ ತುಂಬ ಸಾಲ.
* ಕೆಂಗಲು ಹೊಲಕೆ ಅಂಗುಲ ಬಿತ್ತನೆ.
* ಕೊಟ್ಟ ಸಾಲ ಕೇಳದೆ ಹೋಯಿತು, ಮಾಡಿದ ಆರಂಬ ನೋಡದೆ ಹೋಯಿತು.
* ತಗ್ಗು ಗದ್ದೆಗೆ ಮೂರು ಬೆಳೆ ಎತ್ತರದ ಗದ್ದೆಗೆ ಒಂದೇ ಬೆಳೆ.
* ತೆಂಗಿನ ಮರ ತೆಂಕಲಾಗಿ ಹೆಚ್ಚು.
* ತೆಂಗನ್ನು ತೇಲಿಸಿ ನೆಡು, ಬಾಳೆ ಬಿಗಿದು ನೆಡು.
* ಮಣ್ಣು ರೈತನ ಕಣ್ಣು.
* ಮಣ್ಣು ಬಡವಾದರೆ ಕಣ್ಣು ಕುರುಡಾಯಿತು.
* ಮನೆ ನೋಡಿ ಹೆಣ್ಣು ಕೊಡು, ಮೆದೆ ನೋಡಿ ಎತ್ತು ಕೊಡು.
* ಮರ ನೆಟ್ಟು ಬರ ಅಟ್ಟು.
* ಹತ್ತೋಕೆ ಮೊದಲು ಕುದುರೆ ನೋಡು. ಬಿತ್ತೋಕೆ ಮೊದಲು ಹೊಲ ನೋಡು.

## ೪.೩ ಆಧುನಿಕ ಕೃಷಿ ಸಾಹಿತ್ಯ– ಕೃಷಿವಿಜ್ಞಾನ ಸಾಹಿತ್ಯ

ಕೃಷಿ ಸಾಹಿತ್ಯವು ವಿಜ್ಞಾನ ಸಾಹಿತ್ಯವೂ ಆಗಿರುವುದರಿಂದ ಕನ್ನಡದಲ್ಲಿ ವಿಜ್ಞಾನ ಸಾಹಿತ್ಯದ ಉಗಮ ಮತ್ತು ವಿಕಾಸದ ಅಧ್ಯಯನವೂ ಅತ್ಯವಶ್ಯಕವಾಗಿದೆ.

೧೯ನೇ ಶತಮಾನದ ಅಂತ್ಯದಲ್ಲಿಯೇ ಕೆಲವು ಕೃಷಿ ಸಾಹಿತ್ಯ ಕೃತಿಗಳು ಪ್ರಕಟವಾಗಿದ್ದರೂ (ಕೋಷ್ಟಕ ೧) ಅವು ಯಾವುದೇ ಆಧುನಿಕ 'ವೈಜ್ಞಾನಿಕ ಸಿದ್ಧಾಂತ'ಗಳನ್ನು ಆಧರಿಸಿರಲಿಲ್ಲವಾದುದರಿಂದ ಇತರ ವಿಜ್ಞಾನಿಗಳು ಅವುಗಳನ್ನು ಜನಪ್ರಿಯ ವೈಜ್ಞಾನಿಕ ಕೃತಿಗಳೆಂದು ಪರಿಗಣಿಸಿರಲಿಲ್ಲ. ಹಾಗಾಗಿ ನಾವು ಆಧುನಿಕ ವೈಜ್ಞಾನಿಕ ಸಾಹಿತ್ಯವೆನ್ನುವ ಪ್ರಕಾರವನ್ನು ೧೯೧೭ರಿಂದೀಚೆಗಷ್ಟೇ ಕನ್ನಡದಲ್ಲಿ ಕಾಣಬಹುದು. ಆದರೆ ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ ಬರದಿರಲು ಕಾರಣಗಳೂ ಹಲವಾರು. ದಾಸ್ಯದಲ್ಲಿದ್ದ ನಮಗೆ ಆಧುನಿಕ ವಿಜ್ಞಾನದ ಅಧ್ಯಯನಕ್ಕೆ ಆಸ್ಪದ ದೊರೆತದ್ದು ಬಹಳ ತಡವಾಗಿ. ಪಾಶ್ಚಾತ್ಯ ಶಿಕ್ಷಣ ಪದ್ಧತಿಯನ್ನು ಭಾರತಕ್ಕೆ ತಂದ ಬ್ರಿಟಿಷರು ನಮಗೆ ವೈಜ್ಞಾನಿಕ ಶಿಕ್ಷಣವನ್ನು ಒದಗಿಸುವ ಬಗ್ಗೆ ಆಸಕ್ತಿ ತೋರಲಿಲ್ಲ. ಅವರು ನೀಡಿದ ಶಿಕ್ಷಣದ ಉದ್ದೇಶ ತಮಗೆ ಬೇಕಾದ ಗುಮಾಸ್ತರನ್ನೊ, ಆಡಳಿತಗಾರರನ್ನೂ ತಯಾರು ಮಾಡುವುದಷ್ಟೇ ಆಗಿತ್ತು. ಆದರೆ ನಮ್ಮ ದೇಶದ ನೈಸರ್ಗಿಕ ಸಂಪತ್ತಿನ ಪೂರ್ಣ ಪ್ರಯೋಜನ ಪಡೆಯುವುದಕ್ಕಾಗಿ ಆಧುನಿಕ ವಿಧಾನಗಳನ್ನು ಬಳಸಬೇಕಾಗಿ ಬಂದು, ಅದಕ್ಕೆ ಅವಶ್ಯವೆನಿಸುವ ತಂತ್ರಜ್ಞರನ್ನೂ ಇಲ್ಲಿಯೇ ತಯಾರುಮಾಡಬೇಕಾಗಿ ಬಂದುದರಿಂದ ಅಲ್ಪ ಪ್ರಮಾಣದಲ್ಲಿಯಾದರೂ ವೈಜ್ಞಾನಿಕ ಶಿಕ್ಷಣವನ್ನು ಪ್ರಾರಂಭಿಸಲೇ–ಬೇಕಾಯಿತು. ಹೀಗಾಗಿ ನಮ್ಮ ಜನತೆಗೆ ಆಧುನಿಕ ವಿಜ್ಞಾನದ ಸಂಪರ್ಕ ಒದಗಿ ಬಂದದ್ದು ಬಹಳ ನಿಧಾನವಾಗಿ ಮತ್ತು ಬಹು ಕಡಿಮೆ ಪ್ರಮಾಣದಲ್ಲಿ. ಆದುದರಿಂದ ಇತ್ತೀಚಿನವರೆಗೂ ಜನಪ್ರಿಯ ವಿಜ್ಞಾನ ಸಾಹಿತ್ಯಕ್ಕೆ ಜನತೆಯಿಂದ ಬೇಡಿಕೆ ಬರುವ ಸಂಭವವೇ ಇರಲಿಲ್ಲ (ಲಕ್ಷ್ಮಣರಾವ್, ೧೯೭೦). ಆದರೂ ಸುಬ್ಬರಾಯಪ್ಪನವರ (೧೯೮೬) ಅಭಿಪ್ರಾಯದಂತೆ ಕರ್ನಾಟಕದಲ್ಲಿ ವೈಜ್ಞಾನಿಕ ವಿಚಾರಶೀಲತೆ ಬಹುಮುಖವಾಗಿತ್ತು. ಅದರ ಮುಖ್ಯ ಸೂಚಕವಾಗಿ ಈಗಲೂ ಮೈಸೂರು, ಧಾರವಾಡ, ಮೂಡಬಿದರೆ, ಶೃಂಗೇರಿ, ಬೆಂಗಳೂರು, ಚೆನ್ನೈ ಮತ್ತಿತರ ಸ್ಥಳಗಳ ಪ್ರಾಚ್ಯ ವಸ್ತುಭಂಡಾರಗಳಲ್ಲಿ ನೂರಾರು ವೈಜ್ಞಾನಿಕ ಹಸ್ತಪ್ರತಿಗಳಿವೆ. ನೂರಾರು ವರ್ಷಗಳ ಹಿಂದೆ ಬರೆದ ಇಂತಹ ಅಮೂಲ್ಯ ಗ್ರಂಥಗಳಲ್ಲಿರುವ ಅನೇಕ ವೈಜ್ಞಾನಿಕ ವಿಚಾರಗಳ ಆಳವಾದ ಸಂಶೋಧನೆಯಾಗಿಲ್ಲ.

ಮೈಸೂರು ವಿಶ್ವವಿದ್ಯಾನಿಲಯವು ೧೯೧೬ರಲ್ಲಿ ಸ್ಥಾಪಿತವಾಯಿತು. ಆಗ ಇಡೀ ಮೈಸೂರು ರಾಜ್ಯಕ್ಕೆ ಸೆಂಟ್ರಲ್ ಕಾಲೇಜು ಮಾತ್ರ ವಿಜ್ಞಾನದ ಕಾಲೇಜಾಗಿತ್ತು ಹಾಗೂ ಅಲ್ಲಿ ಬೆರಳೆಣಿಕೆಯಷ್ಟು ವಿದ್ಯಾರ್ಥಿಗಳು ಮಾತ್ರ ವ್ಯಾಸಂಗ ಮಾಡುತ್ತಿದ್ದರು. ವಿಜ್ಞಾನದ ಮಾತಿರಲಿ, ಯಾವುದಕ್ಕೇ ಆಗಲಿ, ವಿದ್ಯಾವಂತರೆನಿಸಿಕೊಂಡವರು ಕನ್ನಡವನ್ನು ಬಳಸಿದರೆ

ಅವಮಾನವೆಂದು ಜನ ಭಾವಿಸಿದ್ದ ಕಾಲವದು. ಅಂತಹ ಸನ್ನಿವೇಶದಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಭೌತವಿಜ್ಞಾನ ಪ್ರಾಧ್ಯಾಪಕರಾಗಿದ್ದ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಮತ್ತು ಮೈಸೂರು ಸರ್ಕಾರದ ಪವನಶಾಸ್ತ್ರ ವೀಕ್ಷಣಾಲಯದ ಮುಖ್ಯಸ್ಥರಾಗಿದ್ದ ನಂಗಪುರಂ ವೆಂಕಟೇಶ ಅಯ್ಯಂಗಾರ್‌ರವರು ವಿಜ್ಞಾನವನ್ನು ಕನ್ನಡ ಭಾಷೆಯ ಮೂಲಕ ಜನತೆಯಲ್ಲಿ ಹರಡುವ ಅವಶ್ಯಕತೆಯನ್ನು ಮನಗಂಡು 'ಕರ್ಣಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ೧೯೧೭ರಲ್ಲಿ 'ವಿಜ್ಞಾನ' ಎಂಬ ಒಂದು ಮಾಸಪತ್ರಿಕೆಯನ್ನು ಹೊರಡಿಸುವ ಸಾಹಸ ಮಾಡಿದರು. ಪತ್ರಿಕೆಗೆ ಸಾಮಗ್ರಿಯನ್ನೊದಗಿಸುವುದರಲ್ಲಿ ಎಷ್ಟೇ ಕಷ್ಟಗಳಿದ್ದರೂ ಅವುಗಳನ್ನೆದುರಿಸಿ ಮಾಸಪತ್ರಿಕೆಯನ್ನು ನಡೆಸಿಕೊಂಡು ಬರಲು ಅಗತ್ಯವಾದ ಶ್ರದ್ಧೆ, ಉತ್ಸಾಹಗಳು ಸಂಪಾದಕರಲ್ಲಿದ್ದುವಾದರೂ ವಿಜ್ಞಾನಕ್ಕೇ ಮೀಸಲಾದ ಪತ್ರಿಕೆಯೊಂದು ಅಭಿವೃದ್ಧಿ ಹೊಂದಲು ಕಾಲವಿನ್ನೂ ಪಕ್ವವಾಗಿರಲಿಲ್ಲ. ಜನತೆಯಿಂದ ಅದಕ್ಕೆ ಆಸರೆ ದೊರೆಯಲಿಲ್ಲ. ಹನ್ನೆರಡು ಸಂಚಿಕೆಗಳ ಒಂದು ಸಂಪುಟ ಮುಗಿಸಿ ಪತ್ರಿಕೆಯನ್ನು ನಿಲ್ಲಿಸಬೇಕಾಯಿತು (ಲಕ್ಷ್ಮಣರಾವ್, ೧೯೭೦).

'ಕರ್ಣಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ'ಯ ಚಟುವಟಿಕೆ 'ವಿಜ್ಞಾನ' ಪತ್ರಿಕೆಯ ನಿರ್ವಹಣೆಗೆ ಮಾತ್ರ ಮೀಸಲಾಗಿರಲಿಲ್ಲ. ಸಮಿತಿಯ ಆಶ್ರಯದಲ್ಲಿ, ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ, ವಿಜ್ಞಾನ ವಿಷಯಗಳನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲಾಗುತ್ತಿತ್ತು.

'ಕರ್ಣಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ'ಯು ಅನಿವಾರ್ಯ ಕಾರಣಗಳಿಂದಾಗಿ ತನ್ನ ಕಾರ್ಯಚಟುವಟಿಕೆಗಳನ್ನು ನಿಲ್ಲಿಸಿದ ನಂತರವೂ ಸಮಿತಿಯ ಪ್ರಮುಖ ಕಾರ್ಯಕರ್ತರಾಗಿದ್ದ ವೆಂಕಟನಾರಾಯಣಪ್ಪನವರು ಮತ್ತು ವೆಂಕಟೇಶ ಅಯ್ಯಂಗಾರ್‌ರವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಮತ್ತು ಮೈಸೂರಿನ ಯುವರಾಜರೂ ಆಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಅವರಿಂದ ಧನಸಹಾಯ ಪಡೆದು ಅವರ ಹೆಸರಿನಲ್ಲಿ ಒಂದು 'ವೈಜ್ಞಾನಿಕ ಗ್ರಂಥಮಾಲೆ'ಯನ್ನು ಪ್ರಾರಂಭಿಸಿದರು. ಆ ಗ್ರಂಥಮಾಲೆಯ ಮೊದಲ ಪ್ರಕಟಣೆ ೧೯೩೧ರಲ್ಲಿ ನಂಗಪುರಂ ವೆಂಕಟೇಶ ಅಯ್ಯಂಗಾರ್‌ರವರ ಫ್ರೆಂಚ್ ವಿಜ್ಞಾನ ಲೇಖಕ ಕೆಮಿಲ್ ಫ್ಲಮೇರಿಯೊ ಅವರ 'ಅಸ್ಟ್ರಾನಮಿ ಫಾರ್ ವಿಮೆನ್' ಎಂಬ ಪುಸ್ತಕದ ಕನ್ನಡಾನುವಾದ 'ಜ್ಯೋತಿರ್ವಿನೋದಿನಿ' ಎಂಬ ಕೃತಿ ಪ್ರಕಟವಾಯಿತು. ೧೯೩೯ರಲ್ಲಿ ವೆಂಕಟನಾರಾಯಣಪ್ಪನವರು ವಿಶ್ವವಿದ್ಯಾನಿಲಯದಿಂದ ನಿವೃತ್ತರಾದನಂತರ 'ಜೀವ ವಿಜ್ಞಾನ'ವೆಂಬ ೩೫೦ ಪುಟಗಳ ಪುಸ್ತಕವನ್ನು ಬರೆದು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯಲ್ಲಿ ಪ್ರಕಟಿಸಿದರು (ಲಕ್ಷ್ಮಣರಾವ್, ೧೯೭೦).

ಕನ್ನಡ ವಿಜ್ಞಾನ ಸಾಹಿತ್ಯದ ಬೆಳವಣಿಗೆಯಲ್ಲಿ ಮಹತ್ತರ ಪಾತ್ರವಹಿಸಿದ ಮತ್ತೊಬ್ಬರೆಂದರೆ ಡಾ.ಶಿವರಾಮ ಕಾರಂತರು. ಕಾರಂತರು ಸ್ವತಃ ವಿಜ್ಞಾನಿಯಲ್ಲಿ, ಶಾಲಾ ಕಾಲೇಜುಗಳಲ್ಲಿ ಕ್ರಮಬದ್ಧವಾಗಿ ವಿಜ್ಞಾನವನ್ನು ವ್ಯಾಸಂಗ ಮಾಡಿದವರೂ ಅಲ್ಲ. ಆದರೆ ಕನ್ನಡ ವಿಜ್ಞಾನ ಸಾಹಿತ್ಯ ಕ್ಷೇತ್ರದಲ್ಲಿ ಅವರ ಕೊಡುಗೆ ಅಪಾರ. ಇಂಗ್ಲಿಶ್‌ನಲ್ಲಿ ಹೇರಳವಾಗಿ ದೊರೆಯುವ ಜನಪ್ರಿಯ ವಿಜ್ಞಾನ ಸಾಹಿತ್ಯವನ್ನು ಆಳವಾಗಿ ಅಭ್ಯಾಸಮಾಡಿ ತಾವು ಪಡೆದ ಜ್ಞಾನವನ್ನು ಕನ್ನಡ ಭಾಷೆಯ ಮೂಲಕ ಕನ್ನಡಿಗರಿಗೆ ನೀಡುವ ಪ್ರಯತ್ನ ಮಾಡಿದರು. ೧೯೩೧ರಲ್ಲಿ ಅವರು ಹೊರತಂದ 'ಬಾಲ ಪ್ರಪಂಚ'ವೆಂಬ ಮೂರು ಸಂಪುಟಗಳ ಮಕ್ಕಳ ವಿಶ್ವಕೋಶದಲ್ಲಿ ವಿಜ್ಞಾನವನ್ನು ಕುರಿತು ಲೇಖನಗಳಿಗೆ ಗಣನೀಯ ಸ್ಥಾನವನ್ನು ಕೊಟ್ಟಿದ್ದಾರೆ. ತರುವಾಯ ೧೯೫೫–೬೫ರ ಒಂದು ದಶಕದಲ್ಲಿ ವಿಜ್ಞಾನಕ್ಕೇ ಮೀಸಲಾದ ನಾಲ್ಕು ಸಂಪುಟಗಳ 'ವಿಜ್ಞಾನ ಪ್ರಪಂಚ'ವೆಂಬ ವೈಜ್ಞಾನಿಕ ವಿಶ್ವಕೋಶವನ್ನು ಪ್ರಕಟಿಸಿದ್ದಾರೆ.

ಜನಪ್ರಿಯ ವಿಜ್ಞಾನ ಸಾಹಿತ್ಯದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ ಸಂಘಸಂಸ್ಥೆಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯವನ್ನೂ, ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘದ ಆಶ್ರಯದಲ್ಲಿ ೧೯೧೯ರಲ್ಲಿ ಪ್ರಾರಂಭವಾದ 'ಪ್ರಬುದ್ಧ ಕರ್ಣಾಟಕ' ಪತ್ರಿಕೆಯನ್ನು ಮೊದಲು ಹೆಸರಿಸಬೇಕು. ಈ ಪತ್ರಿಕೆ ಪ್ರಾರಂಭದಲ್ಲಿ ಕೇವಲ ಸಾಹಿತ್ಯಕ್ಕೆ ಮೀಸಲಾದ ಪತ್ರಿಕೆಯಾಗಿತ್ತು. ಆದರೆ ವೈಜ್ಞಾನಿಕ ಸಾಹಿತ್ಯವೂ ಜೊತೆಯಲ್ಲಿಯೇ ಬೆಳೆಯದೇ ಹೋದಲ್ಲಿ, ಭಾಷೆಯ ಮತ್ತು ಸಾಹಿತ್ಯದ ಸರ್ವತೋಮುಖ ಪ್ರಗತಿ ಸಾಧ್ಯವಿಲ್ಲವೆಂಬುದನ್ನು ಬಹುಬೇಗನೆ ಅರಿತುಕೊಂಡು ೧೯೨೩ರಲ್ಲಿಯೇ, ಅಂದರೆ ತನ್ನ ಐದನೆಯ ಸಂಪುಟದ ಮೊದಲ ಸಂಚಿಕೆಯಲ್ಲಿಯೇ ವೈಜ್ಞಾನಿಕ ಲೇಖನಗಳಿಗೆ ತನ್ನ ಬಾಗಿಲು ತೆರೆಯಿತು. ಅಲ್ಲಿಂದ ಮುಂದೆ ಕ್ರಮೇಣ ವಿಜ್ಞಾನ ಲೇಖನಗಳು ಹೆಚ್ಚು ಹಚ್ಚಾಗಿ ಬರಲು ಪ್ರಾರಂಭಿಸಿದುದರಿಂದ ೧೯೬೩ರ ವೇಳೆಗೆ 'ಪ್ರಬುದ್ಧ ಕರ್ಣಾಟಕ'ವು ಆರು ತಿಂಗಳಿಗೊಮ್ಮೆ ಒಂದು ವಿಜ್ಞಾನ ವಿಶೇಷಾಂಕವನ್ನು ಪ್ರಕಟಿಸಬೇಕಾಯಿತು. ೧೯೬೯ರಲ್ಲಿ 'ಪ್ರಬುದ್ಧ ಕರ್ಣಾಟಕ'ವು ತನ್ನ ಚಿನ್ನದ ಹಬ್ಬವನ್ನಾಚರಿಸಿದ ಸಂದರ್ಭದಲ್ಲಿ ಹೊರತಂದ ಚಿನ್ನದ ಸಂಚಿಕೆಯ ವಿಜ್ಞಾನ ವಿಭಾಗವು ಕನ್ನಡ ವಿಜ್ಞಾನ ಸಾಹಿತ್ಯದ ಬೆಳವಣಿಗೆಯ ಮಾರ್ಗದಲ್ಲಿ ಒಂದು ಪ್ರಮುಖ ಮೈಲಿಗಲ್ಲು.

೧೯೬೬ರ ಕೊನೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಾರಂಭವಾಯಿತು. ವಿಶ್ವವಿದ್ಯಾನಿಲಯದ ಎಲ್ಲ ಹಂತಗಳಲ್ಲಿಯೂ ಕನ್ನಡವನ್ನು ಶಿಕ್ಷಣ ಮಾಧ್ಯಮವನ್ನಾಗಿ ಬಳಸಬೇಕೆಂಬ ನೀತಿಗನುಗುಣವಾಗಿ ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗವನ್ನು ಸ್ಥಾಪಿಸಲಾಯಿತು. ವಿಜ್ಞಾನ ಮತ್ತು ಮಾನವಿಕ ಶಾಸ್ತ್ರಗಳಿಗೆ ಸಂಬಂಧಿಸಿದಂತೆ ಪಠ್ಯಪುಸ್ತಕಗಳನ್ನು ಮತ್ತು ಸಂದರ್ಭ ಗ್ರಂಥಗಳನ್ನು ಹೊರತರುವುದೇ

ಈ ವಿಭಾಗದ ಮುಖ್ಯ ಉದ್ದೇಶವಾಗಿದೆ. ಮಾನವಿಕ ಮತ್ತು ವೈಜ್ಞಾನಿಕ ಸಾಹಿತ್ಯ ನಿರಂತರವಾಗಿ ಭಾಷಾಂತರಗಳನ್ನು ಅವಲಂಬಿಸಿಕೊಂಡಿರುವುದು ಸಾಧ್ಯವಿಲ್ಲ. ಹೊಸ ಮೌಲ್ವಿಕ ಅಥವಾ ಸ್ವತಂತ್ರ ಗ್ರಂಥಗಳನ್ನು ರಚಿಸಲು ಅನುವಾಗುವಂತೆ ವಿಷಯ ಸಂಪತ್ತನ್ನು ಸಮೃದ್ಧಗೊಳಿಸಿಕೊಂಡಿರುವ ಅಧ್ಯಾಪಕವರ್ಗ ಕನ್ನಡ ಭಾಷೆಯ ಜಾಯಮಾನಕ್ಕೆ ಅನುಗುಣವಾದ ನಿರೂಪಣ ಪದ್ಧತಿಯನ್ನೂ ಅಳವಡಿಸಿಕೊಳ್ಳಬೇಕಾಗುತ್ತದೆನ್ನುವ ದೃಷ್ಟಿಯಿಂದ ೧೯೭೦ರಲ್ಲಿ ಕನ್ನಡ ಭಾಷೆಯ ಬಳಕೆಯ ವಿಚಾರದಲ್ಲಿ 'ಬೇಸಿಗೆ ಶಿಬಿರ'ವೊಂದನ್ನು ಏರ್ಪಡಿಸಿ ಅದರಲ್ಲಿ ವಿಜ್ಞಾನ ಪಠ್ಯಪುಸ್ತಕ ಬರಹಗಾರರು ಒಂದುಗೂಡಿ ವಿಜ್ಞಾನ ಪಠ್ಯಪುಸ್ತಕ ರಚನೆ ಮತ್ತು ಬೋಧನೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಚರ್ಚಿಸಿದರು. ಈ ಶಿಬಿರ ತುಂಬ ಉಪಯುಕ್ತವೆಂದು ಕಂಡುಬಂದುದರಿಂದ ೧೯೭೧, ೧೯೭೨, ೧೯೭೩ ಮತ್ತು ೧೯೭೪ರಲ್ಲಿ ಈ ಬಗೆಯ ಶಿಬಿರಗಳನ್ನು ನಡೆಸಲಾಯಿತು (ನಾಯಕ [ಸಂ], ೧೯೭೫).

ನಮ್ಮ ಸುತ್ತಮುತ್ತಲಿನ ಸ್ಥಾವರ ಜಂಗಮಗಳ ವೈಜ್ಞಾನಿಕ ಪರಿಚಯ ಜನಪ್ರಿಯ ವಿಜ್ಞಾನಕ್ಕೆ ಮೊದಲನೆಯ ಮೆಟ್ಟಿಲು ಎಂದು ಬಿ.ಜಿ.ಎಲ್. ಸ್ವಾಮಿಯವರು ಭಾವಿಸಿದ್ದರು (ಸ್ವಾಮಿ, ೧೯೭೮). ಅವರ 'ಹಸುರು ಹೊನ್ನು' ಮತ್ತು 'ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕ' ಇದರ ಉದಾಹರಣೆಗಳು. 'ಹಸುರು ಹೊನ್ನು', 'ಕಾಲಾನುಕಾಲದಿಂದ ನಮ್ಮ ಬದುಕಿನೊಂದಿಗೆ ಒಂದಲ್ಲ ಒಂದು ರೀತಿಯಲ್ಲಿ ಒಡನಾಡಿಗಳಾಗಿ ಬೆಳೆದುಬಂದಿರುವ ಕೆಲವು ಗಿಡಮರಗಳ ಪರಿಚಯ ಮಾಡಿಕೊಡುವುದು ಈ ಬರವಣಿಗೆಯ ಪ್ರಯತ್ನ'ವಾದರೂ (ಸ್ವಾಮಿ, ೧೯೭೬) ಅದರ ಸಾಹಿತ್ಯಕ ಮೌಲ್ಯವೂ ಹಿರಿದಾದುದು. ಇಂದಿನ ರೈತನ ವ್ಯವಸಾಯದಲ್ಲಿರುವ ಹಲವಾರು ಬೆಳೆಗಳ ಮೂಲ ದಕ್ಷಿಣ ಅಮೆರಿಕ ಎಂಬುದನ್ನು 'ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕ' ಕೃತಿ ವಿವರಿಸುತ್ತದೆ. ಮೆಣಸಿನಕಾಯಿ, ಮುಸುಕಿನ ಜೋಳ, ಟೊಮೇಟೋ, ನೆಲಗಡಲೆ, ಗೋಡಂಬಿ, ತಿಂಗಳ ಹುರುಳಿಕಾಯಿ, ಚಪ್ಪರದ ಬದನೆ, ಆಲೂಗಡ್ಡೆ, ಸಿಹಿಗೆಣಸು, ಮರಗೆಣಸು, ಪಪಾಯ, ಅನಾನಸ್, ಸಪೋಟ, ಸೀಬೆ ಮುಂತಾದುವು ಇಂದು ರೈತನ ಸ್ಥಿತಿಗತಿಯನ್ನು ನಿರ್ಧರಿಸುವಂತಹ ಬೆಳೆಗಳಾಗಿವೆ ಹಾಗೂ ಇವುಗಳಲ್ಲಿ ಹಲವಾರು ಬೆಳೆಗಳು ನಮ್ಮ ದಿನನಿತ್ಯದ ಆಹಾರದ ಅವಿಭಾಜ್ಯ ಭಾಗವಾಗಿವೆ.

ಕೃಷಿ ಪದವೀಧರರಾದ ಡಿ.ಎಸ್. ಮುರಿಗಪ್ಪ ಶ್ರೇಷ್ಠಿಯವರು ೧೯೫೮ರಲ್ಲಿ ರಚಿಸಿದ **ಜೇನು** ಕೃತಿಯಲ್ಲಿ (ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ) ವಿಜ್ಞಾನ ಮತ್ತು ಸಾಹಿತ್ಯದ ಸುಂದರ ಸಮಾಗಮವನ್ನು ಕಾಣಬಹುದು. ಜೇನಿನ ಬದುಕಿನ ಬಗೆಗಿನ ಅತ್ಯಂತ ಸುಂದರ ಕಾವ್ಯಮಯ ವರ್ಣನೆಯ ಈ ಕೃತಿಯಲ್ಲಿನ ರಾಣಿ ಜೇನು ಗಂಡು ಜೇನುನೊಣಗಳೊಂದಿಗೆ ಕೂಡುವ '**ಸುನೀಲ ಶೂನ್ಯದಲ್ಲಿ ಪರಿಣಯ ಪರ್ಯಟನ**' ಅಧ್ಯಾಯದ ಆಯ್ದ ಭಾಗವನ್ನು ಈ ಮುಂದೆ ಕೊಡಲಾಗಿದೆ:

ಕುಮಾರಿಯಾದ ರಾಣಿ ದಿಗಂತದ ದಿವ್ಯ ಸುನೀಲ ಶೂನ್ಯದಲ್ಲಿ ಪ್ರಣಯಿಯನ್ನು ಸೇರಿ ಗರ್ಭದಾನ ಪಡೆಯುತ್ತಾಳೆ. ಒಂದು ನಗರದಲ್ಲಿ (ಜೇನುಗೂಡಿನಲ್ಲಿ) ಮೈತುಂಬಿ ಬೆಳೆದ ನೂರಾರು, ಕೆಲವುಸಾರಿ ಸಾವಿರಾರು ಗಂಡು ಜೇನುಹುಳುಗಳು ಕುಮಾರಿಯಾದ ರಾಣಿಯೊಡನಿರುತ್ತವೆ. ಇವು ಗೂಡಿನಲ್ಲಿ ಕುಮಾರಿ ರಾಣಿಯನ್ನು ನೋಡಿದಾಗ ಇರಲಿ, ಅವಳ ಸುಪುಷ್ಟ ಸುಂದರ ಮೈಗೆ ತಮ್ಮ ಮೈ ಉಜ್ಜಿ ನಡೆದಾಗಲೂ ಸಹ ಪ್ರೇಮ ಕೆರಳಿ ಕಾಮ ಕಾಲ್ಕೆದರುವುದಿಲ್ಲ. ಆದರೆ ನಿತ್ಯ ಮಧ್ಯಾಹ್ನ ಮೂರು ಘಂಟೆಯವರೆಗೂ ಅಂತರಿಕ್ಷದಲ್ಲಿ ಸುತ್ತುತ್ತವೆ, ಪ್ರೇಯಸಿಯನ್ನು ಕೂಡಬಯಸಿ, ರಾಜಕುಮಾರಿಯ ಬೇಟ ಬಯಸಿ; ಅವಳ ಪ್ರೇಮಬಂಧನದಲ್ಲಿ ಪ್ರಾಣಾರ್ಪಣೆ ಮಾಡಲು ಕಾತರರಾಗಿ, ಕ್ಷಣಕಾಲ ಪ್ರೇಮಸುಧೆಯಲ್ಲಿ ತೇಲಿ ಅಸುವೀಯಲು ಸಿದ್ಧರಾಗಿ; ಸುರ ಕಿನ್ನರ, ಗಂದರ್ವಲೋಕಗಳ ಸರ್ವ ಸುಖಗಳಿಗೆ ಮಿಗಿಲಾದ ಮಾಟಗಾತಿ ರಾಜಕುಮಾರಿಯ ಅನುರಾಗ ಆಲಿಂಗನದಲ್ಲಿ ಸಾವನ್ನಪ್ಪಲು ಬೇರೆ ಬೇರೆ ನಗರಗಳಿಂದ ಕೊಬ್ಬಿ ಬೆಳೆದ ಸಾವಿರಾರು ಗಂಡು ಜೇನುಗಳೂ ಪ್ರಕೃತಿಯ ಬಟ್ಟಬಯಲಲ್ಲಿ ಒಟ್ಟು ಸೇರುತ್ತವೆ. ಪ್ರೇಮೋನ್ಮತ್ತ ಈ ಗಂಡುಗಳ ಹಿಂಡಿನಲ್ಲಿ ಕುಮಾರಿರಾಣಿಯ ಪ್ರೇಮಸುಧೆಯಲ್ಲಿ ಮಿಂದು ಮಡಿಯುವುದು ಒಂದೇ ಒಂದು ಗಂಡು– ಭೀಮ ಬಲಕಾಯ ಗಂಡು– ಇದು ಪ್ರಕೃತಿಯ ನಿಯಮ– ಸುಪುಷ್ಟವಾಗಿ ಬೆಲೆದ ಬೇರೆ ಬೇರೆ ತಳಿಗಳ ಹೆಣ್ಣು (ಕುಮಾರಿ ರಾಣಿ) ಗಂಡುಗಳ ಮಿಲನದಿಂದ ಉತ್ಕೃಷ್ಟ ಭಾವಿ ಜನಾಂಗದ ಉತ್ಪತ್ತಿಯಾಗಬೇಕು– ಇದು ಪ್ರಕೃತಿಯ ಕಟ್ಟು.

ರಾಣಿ ಜೇನುನೊಣ ಸಾಮಾನ್ಯವಾಗಿ ತನ್ನ ಗೂಡನ್ನು ಬಿಟ್ಟು ಹೊರ ಹೋಗುವುದೇ ಇಲ್ಲ. ಅದು ತನ್ನ ಇಡೀ ಜೀವನದಲ್ಲಿ ಹೊರಹೊರಡುವುದು ಕೇವಲ ಎರಡು ಮೂರು ಬಾರಿ ಮಾತ್ರ. ಅದೂ ತನ್ನ 'ಮಧುಚಂದ್ರ'ಕ್ಕಾಗಿ. ಗಂಡು ಜೇನುನೊಣಗಳನ್ನು ಆಕರ್ಷಿಸಲು ಲೈಂಗಿಕ ಫೆರೊಮೋನುಗಳನ್ನು ಸ್ರವಿಸಿ ಹಾರುವ ರಾಣಿನೊಣವನ್ನು ಗಂಡುನೊಣಗಳು ಹಿಂಬಾಲಿಸುತ್ತವೆ. ಅವುಗಳಲ್ಲಿ ಒಂದು ಬಲಿಷ್ಠ ಗಂಡುನೊಣದೊಂದಿಗೆ ರಾಣಿ ಜೇನುನೊಣ ಕೂಡುತ್ತದೆ ಹಾಗೂ ಆನಂತರ ಆ ಗಂಡುನೊಣ ಸತ್ತುಹೋಗುತ್ತದೆ. ಅದನ್ನು ಮುರಿಗಪ್ಪ ಶ್ರೇಷ್ಠಿಯವರು ವರ್ಣಿಸಿದ್ದಾರೆ. ಇದರಲ್ಲಿ ವಿಜ್ಞಾನವೂ ಇದೆ, ಕಾವ್ಯವೂ ಇದೆ.

ತಾಯಾಗಲು ಚಡಪಡಿಸುತ್ತಾಳೆ ಕುಮಾರಿ ರಾಣಿ. ಆದರೆ ಗರ್ಭದಾನ ಪಡೆಯಲು ಗಗನಕ್ಕೆ ಹಾರಬೇಕು. ಕಾರ್ಮೋಡ, ಮಳೆಮಿಂಚು, ಬಿರುಗಾಳಿ, ಹಿರಿಮಂಜು, ಕೊಳೆ ಧೂಳು ತುಂಬಿದ ಗಗನಕ್ಕೆ ರಾಣಿ ಕಾಲಿಡಲೆಳಸುವುದಿಲ್ಲ. ಮೋಡ, ಮಳೆಗಳಿಲ್ಲದ ನಿರ್ಮಲ ಆಕಾಶ, ನೀಲಿಯ ಸುಂದರ ಸುಪ್ಪತ್ತಿಗೆಯನ್ನು ಹಾಸಿ ಹರೆಯದ ಈ ಹೆಣ್ಣನ್ನು ಕೈ ಹಿಡಿದು ಕರೆಯಬೇಕು, ಪ್ರಥಮ ಸಮಾಗಮದ ಸುಖದ ಸೀಮೆಗೆ. ಪ್ರಕೃತಿಮಾತೆಯ ಈ ಆದರದ ಆಹ್ವಾನವಿಲ್ಲದೆ ರಾಜಕುಮಾರಿ ಪ್ರಕೃತಿಯ ಪವಿತ್ರ ಶಯ್ಯಾಗಾರವನ್ನು ಸೇರಲಾರಳು. ಕಾತರದಿಂದ ಕಾಯುತ್ತಿದ್ದ

ಪ್ರಕೃತಿಯ ಕರೆ ಕೈ ಸೇರುತ್ತದೆ. ನೀಲಾಕಾಶದ ಕಣ್ಣು ಕರೆಯುತ್ತಿದೆ ರಾಣಿಯನ್ನು ನಲವಿನ ನಾಡಿಗೆ– ನಿಶೆಯುಡಿಸಿದ್ದ ಕಪ್ಪುಡಿಗೆಯನ್ನೆಳೆದು ಹಚ್ಚ ಹಸುರಿನ ಉಡಿಗೆ ಉಡಿಸಿ, ಬಣ್ಣ ಬಣ್ಣದ ತೊಡಿಗೆ ತೊಡಿಸಿ, ವನಕನ್ನೆಯರು ಸುಂದರ ವದನಗಳನ್ನು ಹನಿ ಹನಿ ಹಿಮಮಣಿಗಳಿಂದ ಮುಂಜಾವಿನ ಹೊಂಗಿರಣಗಳು ತೊಳೆಯುವಾಗ ಕುಮಾರಿ ರಾಣಿ ಸಡಗರದಿಂದ ಹೊರಬಂದು ತಾನು ಹುಟ್ಟಿದಂದಿನಿಂದ ಕಾಣದ ಹೊಂಬೆಳಕನ್ನು ನೋಡುತ್ತಾಳೆ. ತನ್ನ ನಗರದ ಬಾಗಿಲಿಂದ ಸ್ವಲ್ಪದೂರ ಹಾರಿ ತಕ್ಷಣ ಹಿಂತಿರುಗಿ ಬಾಗಿಲ ಬಳಿ ಇಳಿಯುತ್ತಾಳೆ. ಹೀಗೆ ಎರಡು, ಮೂರು ಸಾರಿ ಹಾರಾಡಿ ತನ್ನ ಗೂಡಿರುವ ನೆಲೆಯನ್ನು ಚಿತ್ತದಲ್ಲಿ ಚಿತ್ರಿಸಿಕೊಂಡು ಹಾರುತ್ತಾಳೆ. ಕಾಮನ ಬಿಲ್ಲಿನಿಂದ ಹಾರುವ ಪ್ರೇಮಬಾಣದಂತೆ ಪ್ರಶಾಂತ ಉಜ್ವಲ ಸುನೀಲ ಶೂನ್ಯ ಶಯ್ಯಾಗಾರಕ್ಕೆ ಹಾರುತ್ತಾಲೆ ಈ ಹರೆಯದ ಹೆಣ್ಣು. ಈ ರಾಜಕುಮಾರಿಯ ಮೈಯಿಂದ ಹೊರಹೊಮ್ಮಿದ ಮಾಯಾವೀಣೆಯನಾದ, ಮಾಟದ ಮಲ್ಲಿಗೆಯ ಕಂಪು, ಬಿಸಿಲಿಗೆ ಮೈಯೊಡ್ಡಿ ಪುಷ್ಪಪತ್ರದ ಮೇಲೆ ನಲಿಯುತ್ತಿರುವ ಗಂಡುಗಳ ಹಿಂಡನ್ನು ಸೆರೆಹಿಡಿದು ಶೂನ್ಯಕ್ಕೆ ಎಳೆಯುತ್ತದೆ. ಮನ್ಮಥನು ಬಿಟ್ಟ ಶರವರ್ಷದಂತೆ ಗಂಡುಗಳ ಹಿಂಡು ಗಗನಕ್ಕೇರುತ್ತವೆ. ಭೀಮಬಲಕಾಯ ಗಂಡು ಮಾತ್ರ ಈ ದಷ್ಟಪುಷ್ಟ ಹೆಣ್ಣಿನೊಡನೆ ಸೇರಬೇಕೆಂಬ ಪ್ರಕೃತಿಯ ನಿಯಮವನ್ನು ನೆರವೇರಿಸುವ ರಾಣಿ ಆಕಾಶದ ಅನಂತತೆಯುನ್ನು ಭೇದಿಸುವಂತೆ ಮಾಯಾವೇಗದಲ್ಲಿ ಮೇಲ ಮೇಲಕ್ಕೆ ಹಾರುತ್ತಾಳೆ– ಬೇರೆ ಜೇನುಹುಳುಗಳು ತಮ್ಮ ಜೀವಮಾನದಲ್ಲಿ ಎಂದೆಂದೂ ಹಾರದ ಎತ್ತರಕ್ಕೆ ಹಾರುತ್ತಾಳೆ. ಕಾಮ ಕೆರಳಿ ರೆಕ್ಕೆಗಳ ಬಲ ಸೊಕ್ಕಿದ ಈ ಗಂಡು ಜೇನುಗಳು ಕುಮಾರಿಯನ್ನು ಕೂಡಲು ನಾನು ತಾನೆಂದು ಅವಳ ಹಿಂದೆ ಹಿಂದೆ ಹಾರುತ್ತವೆ. ಹಕ್ಕಿಗಳ ಸುಳಿವಿಲ್ಲದ ನಿರ್ಮಲ ನೀಲಾಕಾಶದ ನಿಲುವನ್ನು ನಿಲುಕುತ್ತಾಳೆ ರಾಣಿ. ಅಷ್ಟರಲ್ಲಿ ಪ್ರಕೃತಿ ನಿಯಮಿತವಾದ ಈ ವಿಚಿತ್ರ ಪಂದ್ಯದಲ್ಲಿ ಗೆಲ್ಲಲು ಗಡುಸಿಲ್ಲದ ಬಲಹೀನ ಗಂಡುಜೇನುಗಳ ಹಿಂಡು ರಾಣಿಯಿಂದ ಬಹಳ ಹಿಂದುಳಿಯುತ್ತದೆ. ನಾಶದ ನಕಾಶೆಯನ್ನು ನಿರ್ಮಿಸುತ್ತಿರುವ ನಗರಗಳಿಂದ ಹಾರಿಬಂದ ಅರೆಹೊಟ್ಟೆಯ ಗಂಡುಗಳು, ಹರಿದ ರೆಕ್ಕೆಯ ಮುರಿದ ಮೈಯ ಹರೆಯ ಕುಗ್ಗಿದ ಗಂಡುಗಳು, ಮುಂದೆ ಹಾರಲಾರದೆ ಹಿಂದುಳಿದು ಪಂದ್ಯ ತ್ಯಜಿಸಿ ದಿಗಂತದಲ್ಲಿ ಕರಗಿಹೋಗುತ್ತವೆ. ಆಯಾಸವನ್ನು ಅರಿಯದ ಕೆಲವು ಬಲಶಾಲಿ ಗಂಡುಗಳ ಒಂದು ಸಣ್ಣ ಗುಂಪು ಕುಮಾರಿ ರಾಣಿಯ ಸುತ್ತ ಸುತ್ತುತ್ತದೆ. ಆರಿಸಿದ ಈ ಗಂಡುಗಳಲ್ಲಿ ಭೀಮಬಲಕಾಯ ಗಂಡೊಂದು ರಾಣಿಯ ಪ್ರೇಮಲಿಂಗನದಲ್ಲಿ ಅಡಗುವುದು. ಕಾಮಸೂತ್ರದಿಂದ ಕಟ್ಟಿದ ಹರೆಯದ ಹೆಣ್ಣು ಗಂಡುಗಳೆರಡು ಕ್ಷಣಕಾಲ ಸುನೀಲ ಶೂನ್ಯದಲ್ಲಿ ಸುತ್ತುತ್ತವೆ. ರಾಣಿ ಗರ್ಭ ಧರಿಸುತ್ತಾಳೆ.

ಗರ್ಭದಾನಮಾಡಿ ಭಾವಿಜನಾಂಗಕ್ಕೆ ಜೀವಕೊಟ್ಟು ಗಂಡು ಜೇನು ಸಾವನ್ನಪ್ಪಬೇಕು– ರಾಣಿ ಮತ್ತು ಈ ಬಲಿಷ್ಠ ಗಂಡು ಜೇನಿನ ಕಾಮಕೇಳಿ ಕೊನೆಗಾಣುವುದು ಗಂಡಿನ ಭೀಕರ ಕೊಲೆಯಲ್ಲಿ. ಗಂಡು ಜೇನಿಗೆ ಮಾದ್ರಿಯನ್ನಪ್ಪಿದ ಪಾಂಡುವಿನಂತೆ ಶೃಂಗಾರರಂಗವೇ ಸಾವಿನ ಚಿತೆಯಾಗುತ್ತದೆ.

**ಈ ಉನ್ಮತ್ತ ಹೆಣ್ಣು ಗಂಡುಗಳ ಕಾಮಕೇಳಿ ಕೊನೆ ಮುಟ್ಟದಾಕ್ಷಣ ಗಂಡಿನ ಉದರ ಒಡೆದು ವೀರ್ಯಕೋಶ ಸಂಪೂರ್ಣವಾಗಿ ಕುಮಾರಿ ರಾಣಿಯ ಗರ್ಭವನ್ನು ಸೇರುತ್ತದೆ. ಗಂಡುಜೇನು ತನ್ನನ್ನೆ ಬಲಿದಾನಕೊಟ್ಟು ಹೆಣ್ಣಿಗೆ ಧಾರೆ ಎರೆದ ವೀರ್ಯಕೋಶದೊಂದಿಗೆ, ಅದರ ಹೊಟ್ಟೆಯ ಕರುಳೆಲ್ಲಾ ಹೊರಬರುತ್ತದೆ. ರೆಕ್ಕೆಗಳು ಸೊಕ್ಕಡಗಿ ನಿಲ್ಲುತ್ತವೆ. ಮಾಟಗಾತಿ ರಾಣಿಗೆ ಕರುಳಿನ ಮಾಲೆಯನ್ನು ಹಾಕಿ, ಗಂಡು ಜೇನು ಕೆಳಕ್ಕೆ ಉರುಳುರುಳಿ ಮಣ್ಣುಗೂಡುತ್ತದೆ.**

ಈ ರೀತಿಯ ಸಾಹಿತ್ಯ ಮತ್ತು ವಿಜ್ಞಾನದ ಸುಂದರ ಸಮಾಗಮವನ್ನು ಕನ್ನಡದಲ್ಲಿ ನಡೆಸಿದವರೆಂದರೆ ಬಿ.ಜಿ.ಎಲ್. ಸ್ವಾಮಿಯವರು ಮತ್ತು ಪೂರ್ಣಚಂದ್ರ ತೇಜಸ್ವಿಯವರು.

ಇಂದು ವಿಜ್ಞಾನಕ್ಕೇ ಮೀಸಲಾಗಿರುವ ಕನ್ನಡ ಪತ್ರಿಕೆಗಳೆಂದರೆ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಪ್ರಕಟಿಸುತ್ತಿರುವ 'ಬಾಲ ವಿಜ್ಞಾನ' ಮತ್ತು ಹಂಪಿಯ ಕನ್ನಡ ವಿಶ್ವವಿದ್ಯಾನಿಲಯ ಪ್ರಕಟಿಸುತ್ತಿರುವ 'ವಿಜ್ಞಾನ ಸಂಗಾತಿ'ಗಳು ಮಾತ್ರ. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ವಿಜ್ಞಾನ ಸಾಹಿತ್ಯ ಪ್ರಕಟಣೆ ಮತ್ತು ಪ್ರಸರಣೆಯಲ್ಲಿ ಮಹತ್ತರ ಪಾತ್ರ ವಹಿಸುತ್ತಿದೆ.

### ೪.೪ ಕೃಷಿವಿಜ್ಞಾನ ಸಾಹಿತ್ಯದ ಉಗಮ ಮತ್ತು ವಿಕಾಸ

ಕೃಷಿವಿಜ್ಞಾನ ಸಾಹಿತ್ಯದ ಉಗಮ ಮತ್ತು ವಿಕಾಸದ ಅಧ್ಯಯನಕ್ಕಾಗಿ ಕಾಲವನ್ನು ಮೂರು ಹಂತಗಳಾಗಿ ವಿಭಜಿಸಿಕೊಳ್ಳಲಾಗಿದೆ. ಈ ಕಾಲಘಟ್ಟಗಳಲ್ಲಿ ಕೃಷಿಯ ಚಾರಿತ್ರಿಕ, ರಾಜಕೀಯ ಹಾಗೂ ವೈಜ್ಞಾನಿಕ ಕ್ಷೇತ್ರಗಳಲ್ಲಿ ಅತ್ಯಂತ ಮಹತ್ತರ ಬದಲಾವಣೆಗಳಾಗಿವೆ ಹಾಗೂ ಅವುಗಳನ್ನು ಈ ಹಿಂದಿನ ಕೃಷಿ ಇತಿಹಾಸದ ಅವಲೋಕನದಲ್ಲಿ ವಿವರವಾಗಿ ನೀಡಲಾಗಿದೆ.

#### ೪.೪.೧. ಮೊದಲನೆಯ ಹಂತ– ೧೯ನೆಯ ಶತಮಾನದ ಅಂತ್ಯದಿಂದ ೧೯೪೦ರವರೆಗೆ

ಈ ಮೊದಲನೆಯ ಹಂತದಲ್ಲಿ ಕೃಷಿ ಕ್ಷೇತ್ರದ ಆಡಳಿತ ಹಾಗೂ ರಾಜಕೀಯ ರಂಗದಲ್ಲಿ ಮಹತ್ತರ ಬದಲಾವಣೆಗಳಾದುವು. ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಆಸಕ್ತಿಯಿಂದಾಗಿ ಪ್ರತ್ಯೇಕ ಕೃಷಿ ಇಲಾಖೆ ಸ್ಥಾಪಿತವಾಯಿತು. ಅವರ ಆಸಕ್ತಿಗೆ ಪೂರಕವಾಗಿ ಅವರೇ ನೇಮಿಸಿದ ಕೆನಡಾದ ಡಾ.ಲೆಸ್ಲಿ ಕೋಲ್‌ಮನ್‌ರವರು ಕರ್ನಾಟಕದಲ್ಲಿ ಮೊಟ್ಟಮೊದಲ ಕೃಷಿ ಶಾಲೆ, ಅನಂತರ ಕೃಷಿ ಡಿಪ್ಲೊಮೊ ಶಿಕ್ಷಣ ಪ್ರಾರಂಭಿಸಿದರು. ಅನಂತರ ಕೃಷಿ ಕಾಲೇಜು ಹಾಗೂ ಕೃಷಿ ವಿಶ್ವವಿದ್ಯಾನಿಲಯಗಳು ಪ್ರಾರಂಭವಾದುವು.

ಹತ್ತೊಂಬತ್ತನೆಯ ಶತಮಾನದ ಅಂತ್ಯದಿಂದಲೇ ಕನ್ನಡದಲ್ಲಿ ಕೃಷಿವಿಜ್ಞಾನ ಸಾಹಿತ್ಯದ ಪ್ರಕಟಣೆ ಪ್ರಾರಂಭವಾಗಿದೆಯೆನ್ನಬಹುದು. ವೈಯಕ್ತಿಕ ಪ್ರಕಟಣೆಗಳ ಜೊತೆಗೆ ಬಾಸೆಲ್ ಮಿಶನ್ ಮತ್ತು ಟ್ರ್ಯಾಕ್ಟ್ ಡೆಪಾಸಿಟರಿಯವರು ತಮ್ಮ ಇತರ ಪ್ರಕಟಣೆಗಳ ಜೊತೆಗೆ ಕೃಷಿವಿಜ್ಞಾನ ಸಾಹಿತ್ಯದ ಪ್ರಕಟಣೆಯನ್ನೂ ಮಾಡಿದ್ದಾರೆ. ಹತ್ತೊಂಬತ್ತನೆಯ ಶತಮಾನದಲ್ಲಿ ೧೯೦೦ರವರೆಗೆ ಪ್ರಕಟವಾಗಿರುವ ಕೃಷಿ ಸಾಹಿತ್ಯದ ಕನ್ನಡ ಪ್ರಕಟಣೆಗಳನ್ನು ಕೋಷ್ಟಕ ೧ರಲ್ಲಿ ಕೊಡಲಾಗಿದೆ.

ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ಕನ್ನಡದ ಕೃಷಿವಿಜ್ಞಾನದ ಪ್ರಕಟಣೆಗಳನ್ನು ಮೊದಲಬಾರಿಗೆ ಕಂಡರೆ, ವಿಶ್ವದ ಇತರೆಡೆ ಇಂಗ್ಲಿಶ್ ಭಾಷೆಯಲ್ಲಿ ಕೃಷಿವಿಜ್ಞಾನ ಸಾಹಿತ್ಯ ಸಾಕಷ್ಟು ಪ್ರಕಟವಾಗಿತ್ತು. ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಕಟವಾಗಿರುವ ಇಂಗ್ಲಿಶ್ ಕೃಷಿವಿಜ್ಞಾನ ಸಾಹಿತ್ಯವನ್ನು ಪರಾಮರ್ಶನೆ ಹಾಗೂ ತುಲನೆಯ ಸಲುವಾಗಿ ಅನುಬಂಧ ೩ರಲ್ಲಿ ಕೊಡಲಾಗಿದೆ.

ಮಂಗಳೂರಿನ ಬ್ಯಾಸೆಲ್ ಮಿಶನ್ ಬುಕ್ ಮತ್ತು ಟ್ರ್ಯಾಕ್ಟ್ ಡೆಪಾಸಿಟರಿಯವರು ಗಣಪಯ್ಯ ಚಂದಾವರರ **ಗೋ ವೃಷಭಾದಿಗಳ ಸಂರಕ್ಷಣ ವೈದ್ಯಾದಿಗಳ ಕ್ರಮವು** ಎಂಬ ಕೃತಿಯನ್ನು ೧೮೭೭ರಲ್ಲೇ ಪ್ರಕಟಿಸಿದ್ದರೂ ಅದು ಜಾನುವಾರುಗಳ ರೋಗ ಚಿಕಿತ್ಸೆಯ ಬಗೆಗಿನ ಕೃತಿಯಾಗಿರುವುದರಿಂದ ಸುಮಾರು ೧೮೭೯ರಲ್ಲಿ ರಚಿತವಾದ ಶ್ರೀ ನಾಗಭೂಷಣ ಘನಮಠ ಶಿವಯೋಗಿಗಳ **ಕೃಷಿಜ್ಞಾನ ಪ್ರದೀಪಿಕೆಯನ್ನು** ಕನ್ನಡದ ಮೊಟ್ಟಮೊದಲ ಕೃಷಿ ಸಾಹಿತ್ಯವೆಂದು ಗುರುತಿಸಬಹುದು. ಬೇಸಾಯವು ಬದುಕಿನ ಒಂದು ರೀತಿ ಮಾತ್ರವಲ್ಲ ಅದು ಆಧ್ಯಾತ್ಮ ಬದುಕಿನ ಒಂದು ಭಾಗವೆಂದು ಅದರ ಲೇಖಕರು ಪರಿಗಣಿಸುತ್ತಾರೆ.

> **'ಈ ಭೂಮಿಯು ಕಲ್ಪವೃಕ್ಷಕ್ಕೂ ಕಾಮಧೇನುವಿಗೂ ಚಿಂತಾಮಣಿಗೂ ಪರುಷದ ಕಣಿಗೂ ಸಮಾನವಾಗಿದೆ. ಇಂಥ ಭೂಮಿ ಇದ್ದು ಮನುಷ್ಯರುಗಳು ಕಾಯಶಕ್ತಿಯಿಂದಲೂ, ಬುದ್ಧಿಶಕ್ತಿಯಿಂದಲೂ, ದ್ರವ್ಯಶಕ್ತಿಯಿಂದಲೂ ಮೆಹನತುಮಾಡಿ ಶ್ರಮಪಟ್ಟು, ಸಕಲ ಸಂಪತ್ತನ್ನು ದೊರಕಿಸಿಕೊಳ್ಳಬೇಕು. ಮೈಗಳ್ಳರಾಗಿ ದರಿದ್ರರಾಗಬಾರದು, ಮೈಗಳ್ಳತನವು ದಾರಿದ್ರ್ಯಕ್ಕೆ ಮುಖ್ಯ ಕಾರಣವಾಗಿದೆ'**

ಎಂದು ಒಂದನೆಯ ಪ್ರಕರಣದಲ್ಲೇ ಹೇಳಿದ್ದಾರೆ. ವೈಜ್ಞಾನಿಕ ವಿಶ್ಲೇಷಣೆಯಿಂದಲ್ಲದಿದ್ದರೂ ಅನುಭಾವ ಮತ್ತು ಅನುಭವದ ಸಾರಾಮೃತದಿಂದ ಈ ಕೃತಿ ರಚಿತವಾಗಿದೆ. ಬೆಳೆಗಳ ಉತ್ಪಾದನೆಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ವಿವೇಚಿಸಿದ್ದಾರೆ. ಭೂಮಿ– ಅದರ ಮಹತ್ವ, ಹೊಲಗಳ ಆರೈಕೆ, ನಟ್ಟು ಕಡಿಸುವುದು, ಹೊಲದಲ್ಲಿ ಒಡ್ಡಿನ ಉಪಯುಕ್ತತೆ, ಗೊಬ್ಬರದ ಬಳಕೆ, ನೀರಾವರಿ ಬೇಸಾಯ, ಕುಷ್ಕಿ ಅಥವಾ ಒಣ ಬೇಸಾಯ ಮುಂತಾದ ವಿಷಯಗಳ ಬಗ್ಗೆ ಸುದೀರ್ಘವಾಗಿ ಚರ್ಚಿಸಿದ್ದಾರೆ. ಪ್ರತಿಯೊಂದು ವಿವರಣೆಯನ್ನೂ ಹರಿಕತೆಯಲ್ಲಿನ ಉಪಕತೆ, ದೃಷ್ಟಾಂತಗಳನ್ನು ಬಳಸುವಂತೆ ಬಳಸಿ ವಿವರಿಸಿದ್ದಾರೆ.

**ಕೋಷ್ಟಕ ೧: ಹತ್ತೊಂಬತ್ತನೆಯ ಶತಮಾನದಲ್ಲಿ ೧೯೦೦ರವರೆಗೆ ಪ್ರಕಟವಾಗಿರುವ ಕೃಷಿ ಸಾಹಿತ್ಯದ ಕನ್ನಡ ಪ್ರಕಟಣೆಗಳು**

| ಕ್ರ.ಸಂ. | ಪ್ರಕಟಣೆಯ ವರ್ಷ | ಕೃತಿಯ ಶೀರ್ಷಿಕೆ | ಲೇಖಕರು | ಪ್ರಕಾಶಕರು |
|---|---|---|---|---|
| ೧. | ೧೮೭೭, | ಗೋ ವೃಷಭಾದಿಗಳ ಸಂರಕ್ಷಣ ವೈದ್ಯಾದಿಗಳ ಕ್ರಮವು | ಗಣಪಯ್ಯ ಚಂದಾವರ, | ಬ್ಯಾಸೆಲ್ ಮಿಶನ್ ಬುಕ್ ಮತ್ತು ಟ್ರ್ಯಾಕ್ಟ್ ಡೆಪಾಸಿಟರಿ, ಮಂಗಳೂರು. |
| ೨. | ೧೮೭೯ | ಕೃಷಿ ಜ್ಞಾನ ಪ್ರದೀಪಿಕೆ | ಶ್ರೀ ನಾಗಭೂಷಣ ಘನಮಠ ಶಿವಯೋಗಿಗಳು | |
| ೩. | ೧೮೭೯ | ವ್ಯವಸಾಯಕ್ರಮ ಬೋಧಿನಿ, | ಹರ್ಮನ್.ಎಫ್.ಇ., ರಾಮಸ್ವಾಮಿ ಶಾಸ್ತ್ರಿ | ಮೈಸೂರು ಸರ್ಕಾರದ ಪ್ರೆಸ್, ಬೆಂಗಳೂರು. |
| ೪. | ೧೮೮೮ | ದನ ಕರುಗಳ ಅಂಟುರೋಗ | -- | ಡೈಲಿಪೋಸ್ಟ್ ಅಂಡ್ ಎಕ್ಸಾಮಿನರ್ ಪ್ರೆಸ್, ಬೆಂಗಳೂರು. |
| ೫. | ೧೮೯೫ | ಪಶು ವೈದ್ಯ ಸಂಗ್ರಹ | ನರಸಿಂಹ ಅಯ್ಯಂಗಾರ್ | ಜಿ.ಟಿ.ಎ. ಪ್ರೆಸ್, ಮೈಸೂರು. |
| ೬. | ೧೮೯೮ | ಜಲರತ್ನಾಕರ | ಕೊರವಂಡ ಅಪ್ಪಯ್ಯ | ಮೈಸೂರು ಬುಕ್ ಡಿಪೊ, ಬೆಂಗಳೂರು. |
| ೭. | ೧೮೯೮ | ವ್ಯವಸಾಯ ಚಂದ್ರಿಕೆ | ರಾಮಸ್ವಾಮಿ ಅಯ್ಯಂಗಾರ್.ಕೆ., ಹೊನ್ನಾಳಿ | -- |
| ೮. | ೧೯೦೦ | ವ್ಯವಸಾಯ ಬೋಧಿನಿ | ಶೇಷಾದ್ರಿ ಅಯ್ಯಂಗಾರ್.ಕೆ., | ಮೈಸೂರು ಶಿಕ್ಷಣ ಇಲಾಖೆ, ಮೈಸೂರು. |

ಈ ಕೃತಿಯ ಮತ್ತೊಂದು ವಿಶೇಷತೆಯೆಂದರೆ, ಗ್ರಂಥದ ಪೂರ್ವ ಭಾಗದಲ್ಲಿ ವಾಸ್ತವ ಪ್ರಾಪಂಚಿಕ ಕೃಷಿ ಆಚರಣೆಗಳ ಬಗ್ಗೆ ತಿಳಿಸಿದರೆ ಉತ್ತರಾರ್ಧದಲ್ಲಿ ಪಾರಮಾರ್ಥ ಕೃಷಿಯ ಬಗ್ಗೆ ತಿಳಿಸಿದೆ.

**'ಈ ಗ್ರಂಥದ ಪೂರ್ವ ಭಾಗದಲ್ಲಿ ಕೃಷಿಯ ವಿಷಯವಾಗಿ ಹೇಳಿದ ಸುಲಭವಾದ ಸಕಲ ಯುಕ್ತಿಗಳನ್ನು ಚನ್ನಾಗಿ ತಿಳಿದು ಕೃಷಿಕರಾದ ಪ್ರವೀಣರು ಸಕಾಮದಿಂದ ಧೈರ್ಯಶಾಲಿಗಳಾಗಿ ಕೃಷಿಯುದ್ಯೋಗದ ಸಕಲ ಕಾರ್ಯಗಳನ್ನು ಮಾಡೇನು, ಸಕಲ ಫಲ ಪದಾರ್ಥಗಳನ್ನು ಸಮೃದ್ಧಿಯಾಗಿ ಪಡದೇನು, ಎಂದು ಯತ್ನಿಸುವ ಸಾಧಕರ್ಗೆ ಭೂಮಿಯು ಹ್ಯಾಗೆ ಸದ್ಯಃ ಫಲವನ್ನು ಕೊಡುತ್ತಿಹುದೋ ಹಾಗೆ ಪಾರಮಾರ್ಥ ಕೃಷಿಕರಾದ ಮುಮುಕ್ಷು ಜನರುಗಳಿಗೆ ಈ ಪುಣ್ಯಗ್ರಂಥವು ಸದ್ಯೋನ್ಮುಕ್ತಿಯಂ ಕೊಡುತ್ತಿಹುದು. ಪಾರಮಾರ್ಥ ಕೃಷಿಕನು ತನ್ನ ಕೃಷಿಯಲ್ಲಿ ಪಂಚ ಪ್ರಕರಣಗಳಾದಂತಹ ನಿಜನಿರ್ಮಲತ್ವ, ಸತ್ಯ ಸದಾಚಾರ, ಸಹಜ ಸುಜ್ಞಾನ, ಶಿವೈಕ್ಯ ಸದ್ಭಕ್ತಿ ಮತ್ತು ನಿಜಲಿಂಗೈಕ್ಯಗಳ ಸಾರ ಸಮ್ಮಿಶ್ರಣದಿಂದ ಸದ್ಯೋನ್ಮುಕ್ತಿಯಂ ಪಡೆಯಬಹುದು'**

ಎನ್ನುತ್ತಾರೆ ಲೇಖಕರಾದ ಶ್ರೀ ನಾಗಭೂಷಣ ಘನಮಠ ಶಿವಯೋಗಿಗಳು. ಈ ಕೃತಿಯು ಹಲವಾರು ಮರುಮುದ್ರಣಗಳನ್ನು ಕಂಡಿದೆ.

'ಕರ್ನಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ'ಯು ೧೯೧೭ರಲ್ಲಿ 'ವಿಜ್ಞಾನ' ಎಂಬ ಒಂದು ಮಾಸಪತ್ರಿಕೆಯನ್ನು ಹೊರಡಿಸುವ ಸಾಹಸ ಮಾಡಿದರೂ ವಿಜ್ಞಾನಕ್ಕೇ ಮೀಸಲಾದ ಪತ್ರಿಕೆಯೊಂದನ್ನು ಸ್ವೀಕರಿಸಲು ಆ ಸಮಯದಲ್ಲಿ ಕನ್ನಡಿಗರು ಸಿದ್ಧವಿಲ್ಲದ್ದರಿಂದ ಅದನ್ನು ನಿಲ್ಲಿಸಬೇಕಾಯಿತು. ಆ ಸಮಿತಿಯು ಒಂದೆರಡು ಕೃಷಿವಿಜ್ಞಾನ ಸಾಹಿತ್ಯ ಪ್ರಕಟಿಸಿತು. ಹಲವಾರು ಖಾಸಗಿ ಸಂಸ್ಥೆಗಳು, ಬ್ಯಾಸೆಲ್ ಮಿಶನ್ ಬುಕ್ ಮತ್ತು ಟ್ರ್ಯಾಕ್ಟ್ ಡೆಪಾಸಿಟರಿಯವರು ಹಾಗೂ ಹಲವಾರು ಲೇಖಕರು ತಮ್ಮ ಖುದ್ದು ಆಸಕ್ತಿಯಿಂದ ಹಲವಾರು ಪ್ರಕಟಣೆಗಳನ್ನು ಹೊರತಂದರು. ೧೯೦೧ರಿಂದ ೧೯೪೭ರವರೆಗೂ ಪ್ರಕಟವಾಗಿರುವ ಕನ್ನಡ ಕೃಷಿವಿಜ್ಞಾನ ಸಾಹಿತ್ಯದ ಪ್ರಕಟಣೆಗಳನ್ನು ಕೋಷ್ಟಕ ೨ರಲ್ಲಿ ಕೊಡಲಾಗಿದೆ.

### ೪.೪.೧.೧. ಮೈಸೂರು ವ್ಯವಸಾಯ ಶೋಧಕರ ಸಂಘ

ಹದಿನೆಂಟನೇ ಶತಮಾನದ ಅಂತ್ಯದಿಂದಲೇ ರಾಜ್ಯದಲ್ಲಿ ಕೃಷಿಯ ಅಭಿವೃದ್ಧಿ ಕಾರ್ಯಗಳು ಪ್ರಾರಂಭವಾದವು. ಮೈಸೂರು ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಇಂಗಿತದಂತೆ ೧೮೯೯ರಲ್ಲಿ ಪ್ರತ್ಯೇಕ ಕೃಷಿ ಇಲಾಖೆಯನ್ನು ಪ್ರಾರಂಭಿಸಲಾಯಿತು ಹಾಗೂ ಅದರ ಮುಖ್ಯಸ್ಥರನ್ನಾಗಿ ಜರ್ಮನ್ ರಾಷ್ಟ್ರದವರಾದ

## ಕೋಷ್ಟಕ ೨: ೧೯೦೧ರಿಂದ ೧೯೪೭ರವರೆಗೆ ಪ್ರಕಟವಾಗಿರುವ ಕೃಷಿ ಸಾಹಿತ್ಯ ಪ್ರಕಟಣೆಗಳು

| ಕ್ರ.ಸಂ. | ಪ್ರಕಟಣೆಯ ವರ್ಷ | ಕೃತಿಯ ಶೀರ್ಷಿಕೆ | ಲೇಖಕರು | ಪ್ರಕಾಶಕರು |
|---|---|---|---|---|
| ೧ | ೨ | ೩ | ೪ | ೫ |
| ೧ | ೧೯೦೨ | ಕಾಫಿ ತೋಟದಲ್ಲಿ ತರಗು ಹೊದಿಕೆ ಹೊದಿಸುವುದನ್ನು ಕುರಿತು, | ವ್ಯವಸಾಯ ಇಲಾಖೆ, ಬೆಂಗಳೂರು. | |
| ೨ | ೧೯೦೩ | ಇಂಡಿಯಾ ದೇಶದ ವಿಶೇಷ ಅಪಾಯಕರವಾದ ಜಾನುವಾರು ರೋಗಗಳನ್ನು ಕುರಿತು ಸಂಕ್ಷಿಪ್ತ ಗ್ರಂಥವು | ವಾಕರ್.ಜಿ.ಕೆ. | ಸರ್ಕಾರಿ ಮುದ್ರಣಾಲಯ, ಮದ್ರಾಸ್. |
| ೩ | ೧೯೦೫ | ಕೃಷಿಶಾಸ್ತ್ರದ ಮೊದಲ ಪುಸ್ತಕ | ಬೆನ್ಸನ್.ಸಿ., ಸುಬ್ಬರಾವ್.ಸಿ.ಕೆ. | ಬ್ಯಾಸೆಲ್ ಮಿಶನ್ ಬುಕ್ ಮತ್ತು ಟ್ರ್ಯಾಕ್ಟ್ ಡೆಪಾಸಿಟರಿ, ಮಂಗಳೂರು. |
| ೪ | ೧೯೦೬ | ಕೃಷಿ ಕರ್ಮ ಶಾಸ್ತ್ರವು | ರಾಮಚಂದ್ರ ಮಾಧ್ವ ಮಹಿಷಿ | ವಿದ್ಯಾವರ್ಧಕ ಸಂಘ, ಧಾರವಾಡ. |
| ೫ | ೧೯೦೮ | ವ್ಯವಸಾಯಧರ್ಮ ಬೋಧಿನಿ | ಕೊರವಂಡ ಅಪ್ಪಯ್ಯ | ಬೆಂಗಳೂರು. |
| ೬ | ೧೯೦೯ | ವ್ಯವಸಾಯಕ್ರಮ ಬೋಧಿನಿ | ಹನುಂತಯ್ಯ ಗೌಡ.ಬಿ. | ಬೆಂಗಳೂರು. |
| ೭ | ೧೯೦೯ | ಗೊಬ್ಬರವು | ಒಡೆಯರ್.ಎಸ್.ಕೆ. | ಗ್ರಾಮಾಧಿಕಾರಿ ಮುದ್ರಾಲಯ, ಬಿಜಾಪುರ. |
| ೮ | ೧೯೦೯ | ಗೋಮಯ– ಅದರ ಗುಣದೋಷಗಳು | ಸಲ್ವು.ಸಿ. | ಸ್ಟ್ಯಾಂಡರ್ಡ್ ಪ್ರೆಸ್, ಬೆಂಗಳೂರು. |
| ೯ | ೧೯೧೦ | ಆಲೂಗೆಡ್ಡೆಯ ವ್ಯವಸಾಯ | ಸೋಮಾಚಾರ್ಯ, ಎಚ್.ಪಿ. | ಕಾಕ್ಸ್‌ಟೌನ್ ಪ್ರೆಸ್, ಬೆಂಗಳೂರು. |
| ೧೦ | ೧೯೧೧ | ದಕ್ಷಿಣ ಹಿಂದೂದೇಶದ ವ್ಯವಸಾಯ ಪದ್ಧತಿ, ಭಾಗ–೧ | ಹನುಮಂತ ಗೌಡ.ಸಿ. | ವಿ.ಎಂ.ವಿ. ಪ್ರೆಸ್, ಬೆಂಗಳೂರು. |

ಕೋಷ್ಟಕ ಮುಂದುವರಿದಿದೆ

| ೧ | ೨ | ೩ | ೪ | ೫ |
|---|---|---|---|---|
| ೧೧ | ೧೯೧೨ | ಬೇಸಾಯದ ಪಾಠಗಳು | ಜೆ.ಬಿ.ನೈಟ್ | ಬ್ಯಾಸೆಲ್ ಮಿಶನ್ ಬುಕ್ ಮತ್ತು ಟ್ರ್ಯಾಕ್ಟ್ ಡೆಪಾಸಿಟರಿ, ಮಂಗಳೂರು. |
| ೧೨ | ೧೯೧೨ | ತೆಂಗಿನ ಫಸಲು ಸಾಗುವಳಿ | ವೆಂಕಟನರಸಿಂಹಯ್ಯ.ಎಸ್.ಕೆ. | ಒಕ್ಕಲಿಗರ ಸಂಘ ಪ್ರಕಟಣೆ, ಬೆಂಗಳೂರು. |
| ೧೩ | ೧೯೧೬ | ಕೃಷಿ ಸಂಜೀವಿನಿ | ಶೆಟ್ಟಣ್ಣ.ಆರ್. | ಕ್ರೌನ್ ಪ್ರೆಸ್, ಮೈಸೂರು. |
| ೧೪ | ೧೯೧೭ | ಗೋ ವೈದ್ಯ ಸಾರ ಸಂಗ್ರಹ | ನಂಜಪ್ಪ.ಬಿ.ಎನ್.<br>ವೆಂಕಟಾಚಲಂ ಸೆಟ್ಟಿ.ಎಂ.ಆರ್. | |
| ೧೫ | ೧೯೧೮ | ಪಶು ವೈದ್ಯ | ನರಸಿಂಗ ಅಯ್ಯಂಗಾರ್ | ಮೈಸೂರು ಶಿಕ್ಷಣ ಇಲಾಖೆ, ಮೈಸೂರು. |
| ೧೬ | ೧೯೧೯ | ವ್ಯವಸಾಯಶಾಸ್ತ್ರದ ಕೆಲವು ಮುಖ್ಯ ತತ್ವಗಳು | ಭೀಮರಾಯ.ಕೆ.<br>ಬೆಂಗಳೂರು. | ಕರ್ನಾಟಕ ವಿಜ್ಞಾನ ಪ್ರಚಾರಿಣಿ ಸಮಿತಿ, |
| ೧೭ | ೧೯೨೫ | ಗೋಮಾತೆ (ನನ್ನ ಮೂಗತಾಯಿ) | ಖಾದ್ರಿ ಗುಂಡು ರಾವ್ | ಶ್ರೀ ಗೋರಕ್ಷಕ ಮಂಡಳಿ, ಬೆಂಗಳೂರು. |
| ೧೮ | ೧೯೨೭ | ಸರಳ ವ್ಯವಸಾಯ ಪಾಠ | ನರಸಿಂಹ ಅಯ್ಯಂಗಾರ್.ಕೆ. | ಮೈಸೂರು ಶಿಕ್ಷಣ ಇಲಾಖೆ, ಬೆಂಗಳೂರು. |
| ೧೯ | ೧೯೨೯ | ಭೂಲೋಕದ ಕಾಮಧೇನು<br>ಶರ್ಮ.ಎಸ್.ಬಿ. | ಶಿವಾಚಾರ್ಯ ನೀಲಕಂಠ ಲಿಂಗ,<br>ಭಂಡಾರ, ಯಾದಗೀರ್. | ಹಿಮಾಲಯ ಅಷ್ಟವರ್ಗ ವನಸ್ಪತಿ |
| ೨೦ | ೧೯೩೦ | ಹಣ್ಣುಹಂಪಲುಗಳ ಬಾಗಾಯತು | ಹರಿ ಪುರುಷೋತ್ತಮ ಪರಾಂಜಪೆ,<br>ಶಂಭು ಶಂಭು ಭಟ್ಟ,<br>ಮಹದೇವ ವಾಮನ ಗೋಡಬೋಲೆ | ಕಾರವಾರ. |

ಕೋಷ್ಟಕ ಮುಂದುವರಿದಿದೆ

| ೧ | ೨ | ೩ | ೪ | ೫ |
|---|---|---|---|---|
| ೨೧ | ೧೯೩೨ | ಹೊಲದಲ್ಲಿಯ ಒಡ್ಡು ಒಟ್ಟಲುಗಳು | ರಾಘವೇಂದ್ರ ಭೀಮರಾವ್, ಮುತಾಲಿಕ ದೇಸಾಯಿ | ಧಾರವಾಡ. |
| ೨೨ | ೧೯೩೬ | ಕೃಷಿ ಜ್ಞಾನ ಪ್ರದೀಪಿಕೆ | ಹಲಕಟ್ಟಿ, ಎಫ್.ಜಿ. (ಸಂ) | ಬಿಜಾಪುರ. |
| ೨೩ | ೧೯೩೭ | ಒಕ್ಕಲಿಗರ ಕೈಪಿಡಿ | ಹನುಮಪ್ಪ ರಾಮಪ್ಪ ಕಳವಾಡ | ವೇರ್ಲಾಪುರ. |
| ೨೪ | ೧೯೩೮ | ಮಾದರಿಯ ತೋಟ ಅರ್ಥಾತ್ ಕಾಯಿಪಲ್ಲೆ ಸಾಗುವಳಿ | ಅಮರಗೋಳ ಮಠ, ಹಿರೇಮಠ, ಬಿ.ವಿ. | ಕಿತ್ತೂರು, ಬೆಳಗಾಂ. |
| ೨೫ | ೧೯೪೩ | ಮಾನವ ಆರೋಗ್ಯ, ಅಕ್ಕಿಯಲ್ಲಿನ ಜೀವ ಸತ್ವಗಳು ಹಾಗೂ ಅಕ್ಕಿಯ ಪ್ರಾಮುಖ್ಯತೆ ತಿಳಿಸುವ ಪುಸ್ತಕ | ಜೋಸೆಫ್ ಕಾರ್ನಿಲಿಯಾಸ್, ಕುಮಾರಪ್ಪ ಹರಿ ಅನಂತ ಪೈ, ಅಕ್ಕಿ | ಭಾರತ್ ಸ್ಲೇಟ್ ಪೆನ್ಸಿಲ್ ವರ್ಕ್ಸ್ ಹುಬ್ಬಳ್ಳಿ |
| ೨೬ | ೧೯೪೪ | ಪಶುಪಾಲನೆ | ಕೃಷ್ಣಶಾಸ್ತ್ರಿ,ಎಂ. | ಸರ್.ಕೆ.ಪಿ.ಪುಟ್ಟಣ್ಣಚೆಟ್ಟರ ಮದುವಟ್ಟಿನ ಪ್ರಕಟನಮಾಲೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. |
| ೨೭ | ೧೯೪೫ | ಜೇನಿನ ವ್ಯವಸಾಯ | ಪೈಲೂರು ಲಕ್ಷ್ಮೀನಾರಾಯಣ ರಾವ್ | ಚೊಕ್ಕಾಡಿ, ದಕ್ಷಿಣ ಕನ್ನಡ. |
| ೨೮ | ೧೯೪೬ | ದಕ್ಷಿಣ ಭಾರತದಲ್ಲಿ ಕಾಫಿ ಸಂಶೋಧನೆ– ಒಂದು ಟಿಪ್ಪಣಿ | ವಿಲ್ಸನ್,ಡಬ್ಲ್ಯು ಸೀತಾರಾಮಯ್ಯ,ಎಂ.ವಿ. | ಇಂಡಿಯನ್ ಕಾಫಿ ಬೋರ್ಡ್, ಬೆಂಗಳೂರು. |
| ೨೯ | ೧೯೪೬ | ನೂತನ ಲಘು ವಿಜ್ಞಾನ ಪಶುಸಂಗೋಪನಾ ಸಾಹಿತ್ಯ ಭಾಗ–೧ | ದಾಮೋದರ ಬಾಳಿಗ | ಬ್ಯಾಸೆಲ್ ಮಿಶನ್ ಬುಕ್ ಡಿಪೊ. ಮಂಗಳೂರು. |
| ೩೦ | ೧೯೪೭ | ನಮ್ಮ ವ್ಯವಸಾಯ | ಶಾಮರಾವ್,ಆರ್.ಜಿ. | ಮಹದೇವ ಸನ್ಸ್, ಬೆಂಗಳೂರು. |
| ೩೧ | ೧೯೪೭ | ತುಂಡು ಹೊಲಗಳ ಸಂಯೋಜನೆ | ಕೊಲ್ಲನ ಗೌಡ ಪಾಟೀಲ | ಬ್ಯಾಡಗಿ. |
| ೩೨ | ೧೯೪೭ | ಗೊಬ್ಬರ | ಹಿತ್ತಲಮನಿ, ವೀ.ಚ. | ಶರಾವತಿ ಸಾಹಿತ್ಯ, ಧಾರವಾಡ. |

ಡಾ.ಲೆಹ್‌ಮನ್‌ರವರನ್ನು 'ಕೃಷಿ ರಾಸಾಯನಶಾಸ್ತ್ರಜ್ಞ' ಎಂಬ ಪದನಾಮದೊಂದಿಗೆ ನೇಮಿಸಲಾಯಿತು. ಅದುವರೆಗೂ ಎಲ್ಲ ಕೃಷಿ ಸಂಶೋಧನಾ ಕಾರ್ಯಗಳು ಲಾಲ್‌ಬಾಗ್‌ನಲ್ಲಿ ನಡೆಯುತ್ತಿತ್ತು. ಡಾ.ಲೆಹ್‌ಮನ್‌ರವರು ಈಗಿನ ಸೆಂಟ್ರಲ್ ಕಾಲೇಜಿನ ಬದಿಯಲ್ಲಿ ಕೃಷಿ ರಾಸಾಯನಶಾಸ್ತ್ರಜ್ಞರ ಪ್ರಯೋಗಾಲಯ ಹಾಗೂ ೧೯೦೪-೦೫ರಲ್ಲಿ ಹೆಬ್ಬಾಳ ಗ್ರಾಮದಲ್ಲಿ ೩೦ ಎಕರೆಗಳ ಕೃಷಿ ಪ್ರಾಯೋಗಿಕ ಕ್ಷೇತ್ರವನ್ನು ಸ್ಥಾಪಿಸಿದರು. ೨೦ನೇ ಶತಮಾನದ ಪ್ರಾರಂಭದಿಂದಲೂ ರಾಜ್ಯದ ಕೃಷಿ ಶಿಕ್ಷಣ ಕ್ಷೇತ್ರದಲ್ಲಿ ಹೆಬ್ಬಾಳವು ಪ್ರಮುಖ ಪಾತ್ರ ವಹಿಸಿದೆ.

ಡಾ.ಲೆಹ್‌ಮನ್‌ರವರ ನಂತರ ೧೯೦೮ರಲ್ಲಿ ಕೆನಡಾದ ಡಾ.ಲೆಸ್ಲಿ ಕೋಲ್‌ಮನ್‌ರವರು ರಾಜ್ಯದ 'ಕೃಷಿ ರಾಸಾಯನಶಾಸ್ತ್ರಜ್ಞ'ರಾದರು. ೧೯೧೩ರಲ್ಲಿ ಹೆಬ್ಬಾಳದಲ್ಲಿ ಮೈಸೂರು ಕೃಷಿ ಶಾಲೆ ಪ್ರಾರಂಭಿಸುವುದರ ಜೊತೆಗೆ ಡಾ. ಕೋಲ್‌ಮನ್‌ರವರು ಮಂಡ್ಯದ ಸಕ್ಕರೆ ಕಾರ್ಖಾನೆಯನ್ನು ಪ್ರಾರಂಭಿಸಿ ಇನ್ನೂ ಹತ್ತುಹಲವಾರು ಕೃಷಿ ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿದರು. ಅವುಗಳಲ್ಲಿ ಕೃಷಿ ಸಾಹಿತ್ಯ ಹಾಗೂ ಪತ್ರಿಕೋದ್ಯಮಕ್ಕೆ ಮುಖ್ಯವಾಗುವುದೆಂದರೆ ೧೯೧೫ರಲ್ಲಿ ಮೈಸೂರು ವ್ಯವಸಾಯದ ಇಲಾಖೆಯಿಂದ 'ಮೈಸೂರು ವ್ಯವಸಾಯದ ಕ್ಯಾಲೆಂಡರ್' ಅಥವಾ ಪಂಚಾಂಗದ ಪ್ರಕಟಣೆಯನ್ನು ಪ್ರಾರಂಭ (ಚಿತ್ರ ೧ ಮತ್ತು ಚಿತ್ರ ೨) ಹಾಗೂ ಆನಂತರ 'ಮೈಸೂರು ವ್ಯವಸಾಯ ಶೋಧಕ ಸಂಘ'ದ ಸ್ಥಾಪನೆ.

'ಮೈಸೂರು ವ್ಯವಸಾಯದ ಕ್ಯಾಲೆಂಡರ್' ಪ್ರಾರಂಭವಾದಾಗ ಅದರ ಬೆಲೆ ೧ ಆಣೆ ಇತ್ತು. ೧೯೪೨ರವರೆಗೂ ಪ್ರಕಟವಾದ ಈ ಪಂಚಾಂಗ ವಿಶ್ವಯುದ್ಧದಿಂದಾಗಿ ೧೯೪೯ರವರೆಗೂ ಪ್ರಕಟವಾಗಲಿಲ್ಲ. 'ಯುದ್ಧ ೧೯೪೫ರಲ್ಲೇ ಮುಗಿಯಿತಾದರೂ ಕಾಗದದ ಅಭಾವ, ಇತರ ಮುಗ್ಗಟ್ಟು ಇದ್ದೇ ಇದ್ದು ಪ್ರಕಟನೆಯನ್ನು ಇದುವರೆಗೂ ನಿಧಾನಿಸಬೇಕಾಯಿತು' ಎಂದು ಆಗಿನ ವ್ಯವಸಾಯದ ಇಲಾಖೆಯ ಡೈರೆಕ್ಟರ್ ಆಗಿದ್ದ ಕೆ.ಹೆಚ್. ಶ್ರೀನಿವಾಸನ್‌ರವರು ೧೯೪೯, ವಿರೋಧಿ ಸಂವತ್ಸರದ (೧೯೪೯-೧೯೫೦) ಪಂಚಾಂಗದ 'ಸ್ವಕೀಯ'ದಲ್ಲಿ ಬರೆದಿದ್ದಾರೆ. 'ಮೈಸೂರು ವ್ಯವಸಾಯ ಶೋಧಕ ಸಂಘ ಮುಂತಾದ ಇತರ ಐಕ್ಯೈಕ ಸಂಸ್ಥೆಗಳು ಮತ್ತು ಇತರ ಶಾಖೆಗಳನ್ನು ಸ್ಥಾಪಿಸಿದಂತೆ ಈ ಪಂಚಾಂಗವನ್ನು ಮೊದಲು ಪ್ರಕಟಿಸುವ ಕಾರ್ಯವನ್ನು ಪ್ರಾರಂಭಿಸಿದವರು ಮೈಸೂರಿನ ಮೊಮ್ಮೊದಲಿನ ವ್ಯವಸಾಯದ ಡೈರೆಕ್ಟರಾದ ಡಾ. ಕೋಲ್ಮನ್‌ರವರು' ಎಂದು 'ಮೈಸೂರು ವ್ಯವಸಾಯದ ಪಂಚಾಂಗ'ದ ೧೯೫೪ರ ಜಯ ಸಂವತ್ಸರ (೧೯೫೪-೧೯೫೫) ಸಂಚಿಕೆಯ 'ಮೊದಲ ಮಾತು' ಅಂಕಣದಲ್ಲಿ ಬರೆಯಲಾಗಿದೆ.

# ಮೈಸೂರು ವ್ಯವಸಾಯದ ಕ್ಯಾಲೆಂಡರ್

**1916**




ಚಿತ್ರ ೧: ಮೈಸೂರು ವ್ಯವಸಾಯದ ಇಲಾಖೆ ೧೯೧೫ರಿಂದ ಪ್ರಕಟಣೆ ಪ್ರಾರಂಭಿಸಿದ 'ಮೈಸೂರು ವ್ಯವಸಾಯದ ಕ್ಯಾಲೆಂಡರ್' ಅಥವಾ ಪಂಚಾಂಗ.

'ಮೈಸೂರು ವ್ಯವಸಾಯದ ಪಂಚಾಂಗ'ವು ಇಂಡಿಯಾದಲ್ಲಿ ಪ್ರಚುರವಾಗುವ ವ್ಯವಸಾಯ ಪ್ರಕಟನೆಗಳಲ್ಲಿ ಒಂದು ವೈಶಿಷ್ಟ್ಯವನ್ನು ಪಡೆದಿದೆ. ಇದು ಪಂಚಾಂಗ ಮತ್ತು ವಾರ್ಷಿಕ ಪುಸ್ತಕವಲ್ಲದೆ ರೈತರ ವ್ಯವಸಾಯ ಕೈಪಿಡಿಯೂ ಆಗಿತ್ತು. ಅದರಲ್ಲಿ ವ್ಯವಸಾಯಕ್ಕೆ ಸಂಬಂಧಪಟ್ಟ ಸಂಶೋಧನೆಗಳ ಫಲಿತಗಳನ್ನು ಜನಪ್ರಿಯವಾಗುವಂತೆ ತಿಳಿಸುವ ಅನೇಕ ಲೇಖನಗಳಿದ್ದುವು.

೧೯೧೮ರಲ್ಲಿ ಪ್ರಾರಂಭವಾದ ಮೈಸೂರು ವ್ಯವಸಾಯ ಶೋಧಕ ಸಂಘವು ಮೈಸೂರು ಸಂಸ್ಥಾನದ ೧೯೦೪ನೇ ಇಸವಿಯ ೩ ಮತ್ತು ೧೯೩೯ನೇ ಇಸವಿಯ ೫ನೇ ಕಾನೂನು ಪ್ರಕಾರ ರಿಜಿಸ್ಟರಾದದ್ದು ಹಾಗೂ ಸಂಘದ ಹೆಸರನ್ನು ಇಂಗ್ಲಿಷಿನಲ್ಲಿ 'ದಿ ಮೈಸೂರು ಅಗ್ರಿಕಲ್ಚರಲ್ ಎಂಡ್ ಎಕ್ಸ್ಪೆರಿಮೆಂಟಲ್ ಯೂನಿಯನ್' ಮತ್ತು ಕನ್ನಡದಲ್ಲಿ 'ಮೈಸೂರು ವ್ಯವಸಾಯ ಶೋಧಕ ಸಂಘ, ಬೆಂಗಳೂರು' ಎಂದು ಕರೆಯಲಾಯಿತು. ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆಯಲ್ಲಿ ಪ್ರಕಟವಾಗಿದ್ದಂತೆ ಆ ಸಂಘವನ್ನು ಪ್ರಾರಂಭಿಸಿದ ಉದ್ದೇಶ,

> **ಬೆಳೆಗಳು, ಕಾಲ್ನಡೆಗಳು, ಹಣ್ಣುಹಂಪಲುಗಳು ಎಲ್ಲವನ್ನೂ ಒಳಗೊಂಡ ವ್ಯವಸಾಯವನ್ನು ಉತ್ತಮಗೊಳಿಸಿ ತನ್ಮೂಲಕ ರೈತನ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸುವುದು. ಈ ಉದ್ದೇಶ ಸಾಧನೆಗಾಗಿ ಹಲವಾರು ಕಾರ್ಯಕ್ರಮಗಳ ಜೊತೆಗೆ ವ್ಯವಸಾಯವನ್ನು ಕುರಿತ ಲೇಖನಗಳುಳ್ಳ ಒಂದು ಕನ್ನಡ ಪತ್ರಿಕೆಯನ್ನೂ ಒಂದು ಇಂಗ್ಲಿಷ್ ಪತ್ರಿಕೆಯನ್ನೂ ಪ್ರಕಟಿಸುವುದು. ವ್ಯವಸಾಯ, ಕಾಲ್ನಡೆಗಳು, ಹಣ್ಣುಹಂಪಲು ಮತ್ತು ಸಂಬಂಧಪಟ್ಟ ಇತರ ವಿಷಯಗಳ ಮೇಲೆ ಸಾಮಾನ್ಯ ಜನರಿಗೆ ಹಿಡಿಸುವ ಹಾಗೆ ಸಣ್ಣ ವಿಷಯ ಪತ್ರಿಕೆಗಳನ್ನು ಪ್ರಕಟಿಸುವುದು ಹಾಗೂ ವ್ಯವಸಾಯಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನೂ ನಿಯತಕಾಲಿಕ ಪತ್ರಿಕೆಗಳನ್ನು ಸದಸ್ಯರು ಓದಿಕೊಳ್ಳಲು ಒದಗಿಸುವುದು.**

ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ (ಚಿತ್ರ ೩) ಮೊದಲು ತ್ರೈಮಾಸಿಕವಾಗಿದ್ದು ೫ನೆಯ ಸಂಪುಟದಿಂದ ಮಾಸಪತ್ರಿಕೆಯಾಗಿ ಪರಿವರ್ತಿತಗೊಂಡಿತು.

೧೯೩೮ರ ಸಂಪುಟ ೧೪, ಸಂಚಿಕೆ ೩ರಲ್ಲಿ ಮೈಸೂರು ವ್ಯವಸಾಯ ಶೋಧಕ ಸಂಘದ ಕಾರ್ಯದರ್ಶಿಯವರಾದ ನಿಡತದ ವೆಂಕಟಸುಬ್ಬಯ್ಯನವರು ೧೭-೧-೧೯೩೮ರಂದು ಶಿವಗಂಗೆ ಗಂಗಾಧರೇಶ್ವರ ಸ್ವಾಮಿಯವರ ಜೊತೆ ಸ್ಕೌಟ್ ಕ್ಯಾಂಪಿಗೆ ಬಂದಿದ್ದ ಪಟೇಲರು, ಶ್ಯಾನುಭೋಗರುಗಳಿಗೆ ವ್ಯವಸಾಯದ ವಿಚಾರದಲ್ಲಿ ಅವರು ಹೇಗೆ ಮುಂದುವರಿಯಬೇಕು ಎಂಬ ವಿಷಯವಾಗಿ ಈ ಮುಂದಿನಂತೆ ಭಾಷಣ ಮಾಡಿದರು:

> **ವ್ಯವಸಾಯ ಶೋಧಕ ಸಂಘವೊಂದಿದೆ. ಆ ಸಂಘಕ್ಕೆ ಮೆಂಬರುಗಳಾಗಿರುವವರಿಗೆ ತಳಿಯ ಬೀಜ, ಮುಂತಾದುವುಗಳನ್ನು ಮುಫತ್ತಾಗಿ ಕೊಟ್ಟು, ಅವರ ಅಜಮಾಯಿಷಿಗಳನ್ನು ಮತ್ತು ಅನುಭವಗಳನ್ನು ಮೇಲ್ಕಂಡ ಸಂಘದವರು ತರಿಸಿಕೊಂಡು, ಸಂಘದ ಮಾಸಪತ್ರಿಕೆಯಲ್ಲಿ**

ಮೈಸೂರು
ವ್ಯವಸಾಯ
ಶೋಧಕ ಸಂಘದ
ಪತ್ರಿಕೆ

ಸಂಪುಟ ೫] ವಿಭವ-ಮಾರ್ಗಶಿರ ೧೯೨೮ [ಸಂಚಿಕೆ ೨

ಕೆಲವು ವಿಷಯಗಳು

೧. ಹೆಬ್ಬಾಳಿನ ವ್ಯವಸಾಯ ಪಾಠಶಾಲೆ
೨. ಪ್ರಾಣಿಮಯ ಪ್ರಪಂಚ
೩. ಮೈಸೂರು ದೇಶದಲ್ಲಿ ಕಬ್ಬಿನ ವ್ಯವಸಾಯ

ಚಿತ್ರ ೨: ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ

**ಪ್ರಕಟಿಸುತ್ತಾರೆ. ಅದರಲ್ಲಿ ವ್ಯವಸಾಯದ ವಿಚಾರದಲ್ಲಿ ರೈತರು ಹೇಗೆ ಮುಂದುವರಿಯಬೇಕೆಂಬುದನ್ನು ಕೂಡ ನಿಮ್ಮ ಏಳಿಗೆಗಾಗಿ ಮತ್ತು ನಿಮ್ಮ ತಿಳಿವಳಿಕೆಗಾಗಿಯೂ ಪ್ರಕಟಿಸಿರುತ್ತಾರೆ. ಆ ಸಂಘದ ಪತ್ರಿಕೆಗೆ ವಾರ್ಷಿಕ ಚಂದಾ ೩ ರೂಪಾಯಿಗಳು ಮಾತ್ರ; ಅದನ್ನು ದಯವಿಟ್ಟು ಈಗಿನಿಂದಲಾದರೂ ತರಿಸಿಕೊಳ್ಳಿರಿ. ಓದು ಬಾರದವರಿಗೆ ವಾರಕ್ಕೆ ಒಂದು ದಿವಸ ಗ್ರಾಮಪಂಚಾಯಿತಿ ಚಾವಡಿಯಲ್ಲಿ ಸಭೆ ಸೇರಿಸಿ ಓದಿ ಹೇಳಿ ತಿಳಿವಳಿಕೆಯನ್ನು ಹೆಚ್ಚಿಸಿರಿ. ಗ್ರಾಮಾಭಿವೃದ್ಧಿಗೆ ಇದೊಂದು ದಾರಿ.**

ವ್ಯವಸಾಯದ ಇಲಾಖೆಯವರು ವ್ಯವಸಾಯಗಾರರ ಜಮೀನುಗಳಲ್ಲಿ ನಡೆಸಿದ ಪರೀಕ್ಷೆಗಳ ಹಾಗೂ ಪ್ರದರ್ಶನಗಳ ಬಗ್ಗೆ ಹಾಗೂ ಇಲಾಖೆಯ ಸಲಹೆಯ ಪ್ರಕಾರ ಬೇಸಾಯ ಮಾಡಿದವರ ಅಭಿಪ್ರಾಯಗಳನ್ನು ಸಂಘದ ಪತ್ರಿಕೆಯಲ್ಲಿ ಪ್ರಕಟಿಸುವುದರ ಜೊತೆಗೆ ರೈತರ ಅನುಭವಗಳನ್ನು ಕುರಿತ ಟಿಪ್ಪಣಿಗಳನ್ನು ಮತ್ತು ಅಲ್ಲಲ್ಲಿಂದ ಆಯ್ದ ವ್ಯವಸಾಯ ವಾರ್ತೆಗಳನ್ನೂ ಪತ್ರಿಕೆಯಲ್ಲಿ ಪ್ರಕಟಿಸಲಾಗುತ್ತಿತ್ತು. ಉದಾಹರಣೆಗೆ, ಪಂಜಾಬಿನ ಗ್ರಾಮಾಭಿವೃದ್ಧಿ ವಿಷಯ ಪತ್ರಿಕೆ, ಇಂಟರ್‌ನ್ಯಾಷನಲ್ ರಿವ್ಯೂ ಆಫ್ ಅಗ್ರಿಕಲ್ಚರ್, ಮಿನ್ನೆಸೋಟಾ ವ್ಯವಸಾಯ ಪತ್ರಿಕೆ, ಟ್ರಾಪಿಕಲ್ ಅಗ್ರಿಕಲ್ಚರಿಸ್ಟ್, ಜಮೈಕ ವ್ಯವಸಾಯ ಪತ್ರಿಕೆ, ಅಮೆರಿಕಾದ ಸಂಯುಕ್ತ ಸಂಸ್ಥಾನದ ವ್ಯವಸಾಯ ಶಾಖೆಯ ವಿಷಯಪತ್ರಿಕೆ, ಮೈಸೂರು ಗೆಜೆಟ್, ಮಲಯಾದ ವ್ಯವಸಾಯ ಪತ್ರಿಕೆ ಮುಂತಾದುವುಗಳಿಂದ ಆಯ್ದ ಲೇಖನಗಳನ್ನು ಪ್ರಕಟಿಸಲಾಗುತ್ತಿತ್ತು. ವಿದೇಶದ ಕೃಷಿಯ ಬಗ್ಗೆಯೂ ಲೇಖನಗಳು ಪ್ರಕಟವಾಗುತ್ತಿದ್ದವು. ಉಲ್ಲೇಖಿಸಬಹುದಾದ ಕೆಲವು ಉದಾಹರಣೆಗಳೆಂದರೆ, 'ಸಿಲೋನಿನಲ್ಲಿ ಹಣ್ಣಿನ ಬೇಸಾಯಕ್ಕಿರುವ ತೊಂದರೆಗಳು', 'ಮಲಯಾದಲ್ಲಿ ಸಬ್ಬಕ್ಕಿ ಕೈಗಾರಿಕೆ' ಹಾಗೂ 'ಸಿಂಗಪುರದ ಕಾರ್ಖಾನೆಗಳಲ್ಲಿ ಸೇಗೋ ಹಿಟ್ಟನ್ನು ತಯಾರಿಸುವುದು' (ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ, ಸಂ.೧೪, ಸಂಚಿಕೆ ೩, ೧೯೩೮).

'ಇತರ ಪತ್ರಿಕೆಗಳವರು ಸಂಘಕ್ಕೆ ತಮ್ಮ ಪತ್ರಿಕೆಗಳನ್ನು ವಿನಿಮಯವಾಗಿ ಕಳಿಸಿ, ಅವರಲ್ಲಿ ಕೆಲವರು ವ್ಯವಸಾಯ ಶೋಧಕರ ಸಂಘದ ಪತ್ರಿಕೆಯಲ್ಲಿನ ಲೇಖನಗಳನ್ನು ಆಯ್ದುಕೊಂಡು ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿ ಅವುಗಳ ಉಪಯುಕ್ತತೆಯ ಬಗ್ಗೆ ನಮ್ಮಲ್ಲಿ ಧೈರ್ಯತುಂಬಿದ್ದಾರೆ' ಎಂದು ಜನವರಿ ೧೯೪೧, ಸಂಚಿಕೆ ೧, ಸಂಪುಟ ೧೭ರ ಸಂಪಾದಕೀಯದಲ್ಲಿ ಬರೆಯಲಾಗಿದೆ. ೧೯೫೪ರಿಂದ 'ತಾಯಿನಾಡು' ದಿನಪತ್ರಿಕೆಯಲ್ಲಿ ವಾರಕ್ಕೆ ಎರಡು ಸಾರಿ 'ರೈತರ ವೃತ್ತಾಂತಗಳ' ಬಗ್ಗೆ ಪ್ರಕಟಿಸಲು ಪ್ರಾರಂಭಿಸಿತು. ಜನವರಿ ೧೯೫೫, ಸಂಚಿಕೆ ೧, ಸಂಪುಟ ೩೧ರ ವ್ಯವಸಾಯ ಶೋಧಕರ ಸಂಘದ ಪತ್ರಿಕೆಯಲ್ಲಿ 'ತಾಯಿನಾಡು' ಪತ್ರಿಕೆಯ ವ್ಯವಸ್ಥಾಪಕರು ಜಾಹಿರಾತೊಂದನ್ನು ನೀಡಿ, 'ಕಳೆದ ಒಂದೆರಡು ತಿಂಗಳಿಂದ ಈ ರೈತರ ವಿಭಾಗವನ್ನು ತೆರೆದಿದ್ದೇವೆ. ಸಂಸ್ಥಾನದ ನಾನಾಕಡೆಗಳಿಂದ

ನಮಗೆ ಪ್ರಶಂಸೆಯ ಪತ್ರಗಳು ಬರುತ್ತಿವೆ. ಅದರಿಂದ ರೈತರಲ್ಲಿ ಹೊಸ ಉತ್ಸಾಹವೂ, ಹುರುಪೂ ಮೂಡಿದೆ. ನಮ್ಮ ಮೈಸೂರು ರೈತರು ಹೆಚ್ಚಿನ ಪ್ರೋತ್ಸಾಹ ನೀಡುವುದಾದರೆ, ಆ ವಿಭಾಗವನ್ನು ವಿಸ್ತರಿಸಿ ಇನ್ನೂ ಹೊಸ ವಿಷಯಗಳನ್ನು ಬರೆದು ರೈತರ ಮುಂದಿಡುತ್ತೇವೆ' ಎಂದಿದ್ದರು.

ಆ ಪತ್ರಿಕೆಗೆ ಲೇಖನಗಳನ್ನು ರೈತರಿಂದಲೂ ಸಹ ಆಹ್ವಾನಿಸುವ ಸಲುವಾಗಿ ಸಂಪುಟ ೧೪, ಫೆಬ್ರವರಿ ೧೯೩೮, ಸಂಚಿಕೆ ೨ರಲ್ಲಿ ಬರಹಗಾರರಿಗೆ ಈ ಕೆಳಗಿನಂತೆ ಸೂಚನೆ ನೀಡಲಾಗಿತ್ತು:

'ಶಾಸ್ತ್ರವನ್ನೋದಿದ ಪಂಡಿತರು ಮಾತ್ರವೇ ಪತ್ರಿಕೆಗೆ ಲೇಖನಗಳನ್ನು ಬರೆಯಬಲ್ಲರೆಂದೂ ಇತರರಿಗೆ ಸಾಧ್ಯವಿಲ್ಲವೆಂದೂ ತಿಳಿಯಬಾರದು. ವ್ಯವಸಾಯ ವೃತ್ತಿಯನ್ನು ಕೈಕೊಂಡಿರುವವರೆಲ್ಲರೂ ಬರೆಯಬಹುದು. ಸಾಮಾನ್ಯ ರೈತರೂ ಕೂಡ ತಮ್ಮ ಅನುಭವಗಳನ್ನು ಪರಸ್ಪರವಾಗಿ ಹೇಳಿ ಕೇಳಿ ತಿಳಿದುಕೊಳ್ಳುವುದು ಏಳಿಗೆಗೆ ದಾರಿಯಾಗುವುದು. ಯಾವ ವಿಷಯವನ್ನೂ ಅಲ್ಪವೆಂದು ಅಸಡ್ಡೆ ಮಾಡಬೇಡಿ.'

ಅದೇ ರೀತಿ ಸಂಪುಟ ೧೭, ಜನವರಿ ೧೯೪೧, ಸಂಚಿಕೆ ೧ರ ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆಯ ಸಂಪಾದಕೀಯದಲ್ಲಿ,

'......ವ್ಯವಸಾಯಗಾರರ ಜಮೀನುಗಳಲ್ಲಿಯೇ ಪರೀಕ್ಷೆಗಳನ್ನೂ, ಪ್ರದರ್ಶನಗಳನ್ನೂ ಸಾವಿರಗಟ್ಟಲೆಯಾಗಿ ನಡೆಸುವ ಏರ್ಪಾಡನ್ನು ವ್ಯವಸಾಯದ ಇಲಾಖೆಯವರು ಕೈಗೊಂಡಿದ್ದಾರಷ್ಟೆ. ಇಲಾಖೆಯ ಸಲಹೆಯ ಪ್ರಕಾರ ಬೇಸಾಯ ಮಾಡಿದವರ ಅಭಿಪ್ರಾಯಗಳನ್ನು ನಮ್ಮ ಪತ್ರಿಕೆಯಲ್ಲಿ ಕ್ರಮವಾಗಿ ಪ್ರಕಟಿಸುತ್ತಾ ಬಂದಿದ್ದೇವೆ. ತಮ್ಮ ತಮ್ಮ ಹಿಡುವಳಿಗಳಲ್ಲಿ ಪ್ರಯೋಗಗಳನ್ನು ನಡೆಸಬೇಕೆಂಬುದು ಮೊದಲಿನಿಂದಲೂ ವ್ಯವಸಾಯ ಶೋಧಕ ಸಂಘದ ಸದಸ್ಯರುಗಳ ಉದ್ದೇಶವಾಗಿರುತ್ತದೆ. ಈ ರೀತಿ ಪರೀಕ್ಷೆಗಳನ್ನು ನಡಸಿ ತಾವು ಗಳಿಸಿದ ಅನುಭವಗಳನ್ನು ಕುರಿತ ಟಿಪ್ಪಣಿಗಳನ್ನು ಸದಸ್ಯರು ಪತ್ರಿಕೆಗೆ ಕಳಿಸಿಕೊಡುತ್ತಿರಬೇಕು. ಅಲ್ಲದೆ ಅಲ್ಲಲ್ಲಿಂದ ಆಯ್ದ ವ್ಯವಸಾಯ ವಾರ್ತೆಗಳನ್ನೂ ಪತ್ರಿಕೆಯಲ್ಲಿ ಕೊಡುತ್ತಿರಲಾಗಿದೆ.......

'ಹಲವು ಪತ್ರಿಕಾಕರ್ತರು ತಮ್ಮ ಪತ್ರಿಕೆಗಳನ್ನು ನಮಗೆ ವಿನಿಮಯವಾಗಿ ಕಳಿಸಿ ಸಹಾಯಮಾಡಿದ್ದಾರೆ. ಅವರಲ್ಲಿ ಕೆಲವರು ನಮ್ಮ ಪತ್ರಿಕೆಯಲ್ಲಿನ ಲೇಖನಗಳನ್ನು ಆಯ್ದುಕೊಂಡು ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿ ಇವುಗಳ ಉಪಯುಕ್ತತೆಯ ವಿಚಾರದಲ್ಲಿ ನಮಗೊಂದು ಧೈರ್ಯಕೊಟ್ಟಿದ್ದಾರೆ.'

ಎಂದು ಬರೆಯಲಾಗಿತ್ತು. ಐವತ್ತರ ದಶಕದಲ್ಲಿ ಡಾ. ಪಂಜಾಬರಾವ್ ದೇಶಮುಖರು ಭಾರತ ಕೃಷಿಕ ಸಮಾಜ ಸ್ಥಾಪನೆ ಮಾಡಿದ ನಂತರ ಮೈಸೂರು ವ್ಯವಸಾಯ ಶೋಧಕ

ಸಂಘವು ಭಾರತದಾದ್ಯಂತ ಒಂದೇ ಸಂಘಟನೆಯೊಂದಿಗೆ ಕಾರ್ಯನಿರ್ವಹಿಸುವ ಸಲುವಾಗಿ ಅದರೊಂದಿಗೆ ವಿಲೀನಗೊಂಡು 'ಮೈಸೂರು ಕೃಷಿಕ ಸಮಾಜ'ವನ್ನು ಪ್ರಾರಂಭಿಸಿತು. ಸಂಪುಟ ೩೪, ಜನವರಿ ೧೯೫೪, ಸಂಚಿಕೆ ೧೨ ಸಂಚಿಕೆಯ ಸಂಪಾದಕೀಯದಲ್ಲಿ ಆ ಘಟನೆಯ ಬಗ್ಗೆ ಈ ರೀತಿ ಬರೆಯಲಾಗಿದೆ:

> **'......ನಾವು ಭಾರತ ಕೃಷಿಕ ಸಮಾಜದೊಂದಿಗೆ ಬೆರೆತು ಕಾರ್ಯಸಾಧಿಸಬೇಕೆಂದು ನಿಶ್ಚಯಿಸಿ ಒಂದು ವರ್ಷವಾಯಿತು. ಅಲ್ಲಿಯವರೆಗೆ ಮೈಸೂರು ವ್ಯವಸಾಯ ಸಂಶೋಧನಾ ಸಂಘವಾಗಿ ೧೯೧೮ರಲ್ಲಿ ದಿವಂಗತ ಡಾ. ಕೋಲ್ಮನ್‌ರವರಿಂದ ನಾಟಲ್ಪಟ್ಟ ಈ ವೃಕ್ಷವು, ಕಾಲಕಾಲಕ್ಕೆ ವ್ಯವಸಾಯತಜ್ಞರ ಪರಿಶೋಧನಾ ತಿಳುವಳಿಕೆಗಳನ್ನು ಒಕ್ಕಲುತನದವರಿಗೆ ಬೀರುತ್ತಲೂ, ರೈತರ ಹಿಡುವಳಿಗಳಲ್ಲಿ ಸಂಶೋಧನೆ ನಡೆಸುತ್ತಲೂ, ಕ್ಷೇತ್ರೋತ್ಸವ, ರೈತರ ಸಮ್ಮೇಳನಗಳನ್ನು ನಡೆಸುತ್ತ ಒಕ್ಕಲುತನದ ವೃತ್ತಿಯ ಮೇಲ್ಮೈಗೆ ದುಡಿಯುತ್ತಿತ್ತು. ಈ ೩–೪ ವರ್ಷಗಳ ಕೆಳಗೆ ಡಾ. ಪಂಜಾಬರಾವ್ ದೇಶಮುಖರು ಭಾರತ ಕೃಷಿಕ ಸಮಾಜಸ್ಥಾಪನೆ ಮಾಡಿದರು. ಅಖಿಲ ಭಾರತಕ್ಕೂ, ವಿಶ್ವದ ಭ್ರಾತೃತ್ವದಿಂದ ಕಾರ್ಯಭಾಗಗಳನ್ನು ಸಾಧಿಸಲು ಪ್ರಾರಂಭಿಸಿದರು..... ನಾವು ಮೊದಲು ಭಾರತೀಯರು ನಂತರ ಮೈಸೂರಿನವರು; ರೈತರೆಲ್ಲರೂ ಆಸೇತು ಹಿಮಾಚಲಪರ್ಯಂತ ಒಂದು. ಒಂದುಗೂಡಿ ಕಾರ್ಯಸಾಧಿಸೋಣವೆಂದು ನಾವೂ 'ಮೈಸೂರು ಕೃಷಿಕ ಸಮಾಜ'ವೆಂದು ಕಾರ್ಯಪ್ರಾರಂಭಿಸಿದೆವು.'**

ಅನಂತರ ಅದು 'ಕರ್ನಾಟಕ ಪ್ರದೇಶ ಕೃಷಿಕ ಸಮಾಜ'ವೆಂದು ಬದಲಾಯಿತು ಹಾಗೂ 'ಮೈಸೂರು ವ್ಯವಸಾಯ ಶೋಧಕರ ಸಂಘದ ಪತ್ರಿಕೆ'ಯು 'ಕರ್ನಾಟಕ ವ್ಯವಸಾಯ ಪತ್ರಿಕೆ'ಯೆಂದು ಬದಲಾಗಿ (ಚಿತ್ರ ೪) ಮಾಸಿಕ ಪತ್ರಿಕೆಯ ರೂಪದಲ್ಲಿ ನಿರಂತರವಾಗಿ ಪ್ರಕಟವಾಗುತ್ತಿದೆ. ಇಂದು ಜಿಲ್ಲಾವಾರು ಹಾಗೂ ತಾಲ್ಲೂಕು ಮಟ್ಟದಲ್ಲಿಯೂ ಕೃಷಿಕ ಸಮಾಜಗಳಿವೆ.

ಕೃಷಿಯ ಲಿಖಿತ ಸಾಹಿತ್ಯ ಬರುವುದಕ್ಕೂ ಮೊದಲು ಕೃಷಿ ಮಾಹಿತಿಯ ಸಂವಹನಕ್ಕಾಗಿ ಕೃಷಿ ಇಲಾಖೆಯ ಅಧಿಕಾರಿಗಳು ಹಳ್ಳಿಗಳಿಗೆ ಭೇಟಿನೀಡಿ, ಸಭೆಗಳನ್ನು ನಡೆಸಿ ಹೊಸ ಕೃಷಿ ವಿಧಾನಗಳನ್ನು ಅನುಸರಿಸುವಂತೆ ಹಳ್ಳಿಗರನ್ನು ಒಲೈಸುತ್ತಿದ್ದರು ಅಥವಾ ಹತ್ತಿರದ ಸರ್ಕಾರಿ ಕೃಷಿಕ್ಷೇತ್ರಗಳಿಗೆ ಭೇಟಿ ನೀಡುವಂತೆ ಆಹ್ವಾನಿಸುತ್ತಿದ್ದರು (ಆರ್.ಜಿ.ಅಲನ್, ೧೯೪೦). ರೈತ ಅನಕ್ಷರಸ್ಥನಾಗಿದ್ದುದರಿಂದ ಆತನಿಗೆ ಅಧಿಕಾರಿಗಳು ಹೇಳುತ್ತಿದ್ದುದರಲ್ಲಿ ಅಥವಾ ತಾನು ತನ್ನ ಹೊಲದಲ್ಲಿ ಅಥವಾ ಇತರರ ಹೊಲಗಳಲ್ಲಿ ಕಣ್ಣಾರೆ ಕಾಣುತ್ತಿದ್ದುದರಲ್ಲಿ ನಂಬಿಕೆ ಇರುತ್ತಿತ್ತು.




ಚಿತ್ರ ೪: 'ಮೈಸೂರು ವ್ಯವಸಾಯ ಶೋಧಕರ ಸಂಘದ ಪತ್ರಿಕೆ'ಯ ಹೊಸ ರೂಪ–
'ಕರ್ನಾಟಕ ವ್ಯವಸಾಯ ಪತ್ರಿಕೆ'

ಕ್ಷೇತ್ರ ಭೇಟಗಳಿಗೆ ಹೊರಡುವ ಅಂತಹ ಕೃಷಿ ಅಧಿಕಾರಿಗಳ ಸಲಕರಣೆಗಳು ಸಾಮಾನ್ಯವಾಗಿ ಒಂದು ಎತ್ತಿನಗಾಡಿ, ಒಂದು ಜೊತೆ ಎತ್ತುಗಳು, ನೇಗಿಲು ಮತ್ತು ಇತರ ಸಲಕರಣೆಗಳು, ಅವುಗಳ ಪ್ರಾತ್ಯಕ್ಷಿಕೆಗಾಗಿ ವ್ಯಕ್ತಿಯೊಬ್ಬ, ಲಾಟೀನು, ಗ್ರಾಮಾಫೋನ್, ಅಧಿಕಾರಿಗಳ ಉಪಯೋಗಕ್ಕಾಗಿ ಆಯ್ದ ಮಾಹಿತಿ ಪುಸ್ತಕಗಳು, ಪ್ರದರ್ಶನಕ್ಕಾಗಿ ಪೋಸ್ಟರುಗಳು, ಉಚಿತ ವಿತರಣೆಗಾಗಿ ಮಾದರಿ ಬೀಜಗಳು, ಗಂಧಕ, ಅಮೋನಿಯಂ ಸಲ್ಫೇಟ್ ಮುಂತಾದವು ಇರುತ್ತಿದ್ದವು. ಅಂತಹ 'ಮಾಹಿತಿ ಸಂವಹನ' ಗಾಡಿಗಳು ಮೊದಲೇ ರೆವೆನ್ಯೂ ಅಧಿಕಾರಿಗಳ ಮೂಲಕ ಹಳ್ಳಿಗಳಿಗೆ ತಾವು ಬರುವ ವಿಷಯ ತಿಳಿಸಿ ಪೂರ್ವ ನಿರ್ಧಾರಿತ ಹಾದಿಯಲ್ಲಿ ಹೋಗಿಬರುತ್ತಿದ್ದರು. ಪ್ರಮುಖ ಹಳ್ಳಿಗಳಿಗೆ ಭೇಟನೀಡಿ ಅಲ್ಲಿ ಕೆಲದಿನಗಳು ಮೊಕ್ಕಾಂ ಹೂಡಿ ರೈತರೊಂದಿಗೆ ಚರ್ಚೆ, ಸಭೆಗಳನ್ನು ನಡೆಸಿ, ಅವರ ಹೊಲಗದ್ದೆಗಳಿಗೆ ಭೇಟನೀಡಿ ಪ್ರಾತ್ಯಕ್ಷಿಕೆಗಳನ್ನು ನೀಡುತ್ತಿದ್ದರು. ಆ ರೀತಿ ವರ್ಷದಲ್ಲಿ ಸುಮಾರು ಎಂಟು ತಿಂಗಳುಗಳ ಕಾಲ, ಪ್ರತಿ ತಿಂಗಳು ಸುಮಾರು ಹನ್ನೆರಡರಿಂದ ಹದಿಮೂರು ಹಳ್ಳಿಗಳಿಗೆ ಭೇಟಿ ನೀಡುತ್ತಿದ್ದರು (ಆರ್.ಜಿ.ಅಲನ್, ೧೯೪೦).

ಮೈಸೂರು ವ್ಯವಸಾಯದ ಇಲಾಖೆ ಹಲವಾರು 'ವಿಷಯಪತ್ರಿಕೆ' ಮತ್ತು ೧೯೫೪ರವರೆಗೆ ಪ್ರಕಟಿಸಿರುವ ಕೆಲವು 'ವಿಷಯಪತ್ರಿಕೆ' ಮತ್ತು 'ಸರ್ಕ್ಯುಲರ್'ಗಳನ್ನು ಕೋಷ್ಟಕ ೩ರಲ್ಲಿ ಕೊಡಲಾಗಿದೆ.

**ಕೋಷ್ಟಕ ೩: ಮೈಸೂರು ವ್ಯವಸಾಯದ ಇಲಾಖೆ ೧೯೫೪ರವರೆಗೆ ಪ್ರಕಟಿಸಿರುವ ಕೆಲವು 'ವಿಷಯಪತ್ರಿಕೆ' ಮತ್ತು 'ಸರ್ಕ್ಯುಲರ್'ಗಳು**

| ಕ್ರ. ಸಂ. | ವಿಷಯ ಪತ್ರಿಕೆಗಳು, ಜನರಲ್ ಸೀರೀಸ್ |
|---|---|
| ೧ | ೨ |
| ೧ | ಮೈಸೂರಿನಲ್ಲಿ ಸೊಪ್ಪಿನ ಗೊಬ್ಬರದ ಬೆಳೆಗಳು |
| ೨ | ಬತ್ತದ ಪರೀಕ್ಷೆಗಳು |
| ೩ | ವ್ಯವಸಾಯ ವಿದ್ಯಾಭ್ಯಾಸದ ವರದಿ |
| ೪ | ೧೯೧೨-೧೩ರಲ್ಲಿ ಯೂರೋಪ್, ಅಮೆರಿಕ, ಜಪಾನ್‌ಗಳಲ್ಲಿ ಕೈಗೊಂಡ ಪ್ರವಾಸದ ವರದಿ. |
| ೫ | ಮೈಸೂರು ವ್ಯವಸಾಯದ ಇಲಾಖೆಯ ಸಂಕ್ಷಿಪ್ತ ವರದಿ. |
| ೬ | ದಕ್ಷಿಣ ಇಂಡಿಯಾದಲ್ಲಿ ಕಾಫಿ |
| ೭ | ಬೆಂಗಳೂರು ಪಟ್ಟಣಕ್ಕೆ ಹಾಲಿನ ಸರಬರಾಜು- ಟಿಪ್ಪಣಿ |

ಕೋಷ್ಟಕ ಮುಂದುವರಿದಿದೆ

| ೧ | ೨ |
|---|---|
| ೮ | ಚಿಕ್ಕನಹಳ್ಳಿ ಪಾಠಶಾಲೆ ಪಾಠಕ್ರಮ |
| ೯ | ಸ್ಥಳೀಯ ಮತ್ತು ಸುಧಾರಿಸಿದ ಬೆಣ್ಣೆ ತಯಾರಿಕೆ ವಿಧಾನಗಳು |
| ೧೦ | ಮೈಸೂರಿನಲ್ಲಿ ಅಡಿಕೆ ಬೇಸಾಯ |
| ೧೧ | ಮೈಸೂರಿನಲ್ಲಿ ರಾಗಿ ಬೇಸಾಯ |
| ೧೨ | ಮೈಸೂರಿನಲ್ಲಿ ವ್ಯವಸಾಯ |
| ೧೩ | ಮೈಸೂರಿನಲ್ಲಿ ಕಾಫಿ ಸುಧಾರಣೆ |
| ೧೪ | ಡಚ್ ಈಸ್ಟ್ ಇಂಡೀಸ್‌ನಲ್ಲಿ ವ್ಯವಸಾಯ ಪರಿಶೋಧನೆ |
| ೧೫ | ಡಚ್ ಈಸ್ಟ್ ಇಂಡೀಸ್‌ನಲ್ಲಿ ಕಾಫಿ ಸುಧಾರಣೆ |
| ೧೬ | ಕಾಫಿ ಹಣ್ಣು ಕೊರೆಯುವ ಹುಳೂ ಕುರಿತ ವರದಿ |
| ೧೭ | ಜಾವಾದಲ್ಲಿ ಕಬ್ಬಿನ ಬೇಸಾಯ |
| ೧೮ | ಮೈಸೂರಿನಲ್ಲಿ ಸಕ್ಕರೆ ಕೈಗಾರಿಕೆ ಬೆಳವಣಿಗೆ |
| ೧೯ | ಅರ್ವಿನ್ ನಾಲೆ ಫಾರಮ್ಮಿನಲ್ಲಿ ಕಬ್ಬಿನ ಬೇಸಾಯ |
| ೨೦ | ಮೈಸೂರಿನಲ್ಲಿ ಬತ್ತದ ಬೇಸಾಯ |
| ೨೧ | ಮೈಸೂರಿನಲ್ಲಿ ಕಾಫಿ |
| | **ರಸಾಯನ ಶಾಸ್ತ್ರ ವಿಷಯ ಪತ್ರಿಕೆಗಳು** |
| ೧ | ಬೂದಿ ಮಣ್ಣು |
| | **ಶಿಲೀಂಧ್ರಶಾಸ್ತ್ರ ವಿಷಯ ಪತ್ರಿಕೆಗಳು** |
| ೧ | ಆಲೂಗಡ್ಡೆಯ ಬಂಗಡಿ ರೋಗ |
| ೨ | ಅಡಿಕೆಯ ರೋಗಗಳು–೧ ಕೊಳೇರೋಗ |
| ೩ | ಗಂಧದ ಮರದ ಸ್ಪೈಕ್ ರೋಗ |
| ೪ | ಸ್ಪೈಕ್ ರೋಗದ ಕಾನ್ಫರನ್ಸ್ ವರದಿ |
| ೫ | ಮೈಸೂರಿನಲ್ಲಿ ಕಾಫಿಗೆ ಬರುವ ಬ್ಲಾಕ್‌ರಾಟ್ ಎಂಬ ಕೊಳೇರೋಗ |
| | **ಕ್ರಿಮಿಕೀಟಶಾಸ್ತ್ರ ವಿಷಯ ಪತ್ರಿಕೆಗಳು** |
| ೧ | ಬತ್ತಕ್ಕೆ ಬೀಳುವ ಚಿಟ್ಟೆ |
| ೨ | ಜೋಳದ ಚಿಟ್ಟೆ |
| ೩ | ಮೈಸೂರಿನ ಬೆಳೆಗಳಿಗೆ ಬೀಳುವ ಕಂಬಳಿ ಹುಳುಗಳು |

ಕೋಷ್ಟಕ ಮುಂದುವರಿದಿದೆ

| ೧ | ೨ |
|---|---|
| ೪ | ಕಾಫಿ ಗಿಡಗಳಿಗೆ ಬೀಳುವ ಹುಳುಗಳು |
| ೫ | ಮೈಸೂರಿನ ಬೆಳೆಗಳಿಗೆ ಬೀಳುವ ದುಂಬಿ ಹುಳುಗಳು |
| ೬ | ದ್ವಿದಳ ಧಾನ್ಯಗಳಿಗೆ ಬೀಳುವ ಹುಳುಗಳು |
| ೭ | ಮೈಲಾಬ್ರಿಡ್ ಹುಳುವಿನ ಅಂಗರಚನೆ ಕುರಿತು ಪ್ರಯೋಗ ಪ್ರಬಂಧ |
| ೮ | ದಕ್ಷಿಣ ಹಿಂದೂಸ್ಥಾನದಲ್ಲಿ ನಿಂಬೆಯ ಜಾತಿ ಗಿಡಗಳಿಗೆ ಬೀಳುವ ದೊಡ್ಡ ಕೊರೆಯುವ ಹುಳು |
| ೯ | ಆಲೂಗಡ್ಡೆಯನ್ನು ಕೊರೆಯುವ ಹುಳು |
| ೧೦ | ಜೇನು ಸಾಕುವುದು- ಮೈಸೂರು ದೇಶದ ರೈತರಿಗೆ ಒಂದು ಉಪವೃತ್ತಿ |
| ೧೧ | ಕಾಫಿ ಗಿಡದ ಕಾಂಡವನ್ನು ಕೊರೆಯುವ ಹುಳು |
| ೧೨ | ಜೇನು ಸಾಕುವುದನ್ನು ಪ್ರಾರಂಭಿಸುವುದು |
| ೧೩ | ಕಬ್ಬಿನ ಕಾಂಡ ಕೊರೆಯುವ ಹುಳುಗಳನ್ನು ಪರೋಪಜೀವಿಗಳ ಸಹಾಯದಿಂದ ಹತೋಟಿಗೆ ತರುವುದು. |

**ಕಾಫಿ ಫಾರಮ್ಮಿಗೆ ಸಂಬಂಧಪಟ್ಟ ಪ್ರಕಟಣೆಗಳು**

| | |
|---|---|
| ೧ | ಮೈಸೂರು ದೇಶದ ಕಾಫಿ ಬೆಳೆಯನ್ನು ವೃದ್ಧಿಪಡಿಸುವುದಕ್ಕಾಗಿ ಕಾಫಿ ಫಾರಮ್ಮಿನಲ್ಲಿ ನಡೆಯುತ್ತಿರುವ ಕೆಲಸಗಳು |
| ೨ | ಕಾಫಿ ಬೀಜವನ್ನು ಕೊರೆಯುವ ಹುಳು |
| ೩ | ಕಾಫಿ ಫಾರಮ್ಮಿನ ವಾರ್ಷಿಕ ವರದಿ ೧೯೨೫-೩೦ |
| ೪ | ಕಾಫಿ ಎಲೆಗಳ ರೋಗದ ವಿಷಯ |
| ೫ | ಕಾಫಿ ಸೈಂಟಿಫಿಕ್ ಆಫೀಸರರ ವಾರ್ಷಿಕ ವರದಿ ೧೯೩೦-೩೧ |
| ೬ | ಕಾಫಿ ಪರೀಕ್ಷಾ ಕ್ಷೇತ್ರದಲ್ಲಿ ೧೯೩೦-೩೧ನೇ ವರ್ಷದಲ್ಲಿ ನಡೆದ ಕೆಲಸದ ವರದಿ |
| ೭ | ಕಾಫಿ ಸೈಂಟಿಫಿಕ್ ಆಫೀಸರರ ವಾರ್ಷಿಕ ವರದಿ ೧೯೩೧-೩೨ |
| ೮ | ಕಾಫಿ ಪರೀಕ್ಷಾ ಕ್ಷೇತ್ರದಲ್ಲಿ ೧೯೩೦-೩೧ನೇ ವರ್ಷದಲ್ಲಿ ನಡೆದ ಕೆಲಸದ ವರದಿ |
| ೯ | ದಕ್ಷಿಣ ಇಂಡಿಯಾದಲ್ಲಿ ಕಾಫಿ ರೋಗಗಳಿಗೆ ದ್ರಾವಕವನ್ನೆರಚುವುದು |
| ೧೦ | ಕಾಫಿ ಸೈಂಟಿಫಿಕ್ ಆಫೀಸರರ ವಾರ್ಷಿಕ ವರದಿ ೧೯೩೨-೩೩ |
| ೧೧ | ಕೊಡಗಿನಲ್ಲಿ ಕಾಫಿ ಬೆಳೆಗೆ ಹತ್ತುವ ಕಾರ್ಕ್‌ಭೇಫರ್ ಮತ್ತು ಮೀಲಿಬಗ್ ಎಂಬ ಕ್ರಿಮಿಗಳು ಮತ್ತು ಅವಕ್ಕೆ ಸಂಬಂಧಿಸಲ್ಪಡುವ ನೆಮಟೋಡ್ ಎಂಬ ಜಂತುಗಳು |
| ೧೨ | ಕಾಫಿ ಸೈಂಟಿಫಿಕ್ ಆಫೀಸರರ ವಾರ್ಷಿಕ ವರದಿ ೧೯೩೩-೩೪ |

ಕೋಷ್ಟಕ ಮುಂದುವರಿದಿದೆ

| ೧ | ೨ |
|---|---|
| ೧೩ | ಕಾಫಿ ಸೈಂಟಿಫಿಕ್ ಆಫೀಸರರ ವಾರ್ಷಿಕ ವರದಿ ೧೯೩೪-೩೫ |
| ೧೪ | ಕಾಫಿ ಸೈಂಟಿಫಿಕ್ ಆಫೀಸರರ ವಾರ್ಷಿಕ ವರದಿ ೧೯೩೫-೩೬ |
| ೧೫ | ಕಾಫಿ ಎಲೆ ರೋಗವನ್ನು ಹತೋಟಿಗೆ ತರುವುದಕ್ಕೆ ದ್ರಾವಕವೆರಚುವಾಗ ಬರುವ ಅಡಚಣೆಗಳು. |
| ೧೬ | ಕಾಫಿ ಸೈಂಟಿಫಿಕ್ ಆಫೀಸರರ ವಾರ್ಷಿಕ ವರದಿ ೧೯೩೬-೩೭ |
| ೧೭ | ಕಾಫಿ ಸೈಂಟಿಫಿಕ್ ಆಫೀಸರರ ವಾರ್ಷಿಕ ವರದಿ ೧೯೩೭-೩೮ |
| ೧೮ | ಕಾಫಿ ಸೈಂಟಿಫಿಕ್ ಆಫೀಸರರ ವಾರ್ಷಿಕ ವರದಿ ೧೯೩೮-೩೯ |
| ೧೯ | ಕಾಫಿ ಪರೀಕ್ಷಾ ಕ್ಷೇತ್ರದಲ್ಲಿ ೧೯೩೨ರಿಂದ ೧೯೩೬ರವರೆಗೆ ನಡೆದ ಕೆಲಸಗಳ ವರದಿ |
| ೨೦ | ಕಾಫಿ ಫಾರಮ್ಮಿನಲ್ಲಿ ನಡೆದ ಕಾಫಿ ತಳಿ ಎತ್ತುವ ಕೆಲಗಳ ವರದಿ |
| ೨೧ | ಕಾಫಿ ಸೈಂಟಿಫಿಕ್ ಆಫೀಸರರ ವಾರ್ಷಿಕ ವರದಿ ೧೯೩೯-೪೦ |
| ೨೨ | ಏಲಕ್ಕಿ ಕಜ್ಜಿ ರೋಗದ ಮೊದಲನೆಯ ವರದಿ. |
| | **ಸರ್ಕ್ಯುಲರುಗಳು** |
| ೧ | ಅಡಕೆ ಕೊಳೇ ರೋಗ |
| ೨ | ಚಿಟ್ಟೆ ಅಥವಾ ಮಿಡತೆ |
| ೩ | ಅಡಕೆ ಕೊಳೇ ರೋಗ |
| ೪ | ಪರೀಕ್ಷೆಗಾಗಿ ಮಣ್ಣು ಮತ್ತು ಗೊಬ್ಬರಗಳ ಮಾದರಿಗಳನ್ನು ತೆಗೆದು ಕಳುಹಿಸಲು ಸೂಚನೆಗಳು |
| ೫ | ಬ್ರೋಚ್ ಮತ್ತು ಕ್ಯಾಂಬೋಡಿಯಾ ಹತ್ತಿ |
| ೬ | ವ್ಯವಸಾಯದ ಮುಟ್ಟುಗಳು |
| ೭ | ಕಾಫಿ ಹಸುರು ತಿಗಣೆ |
| ೮ | ಬ್ರೋಚ್ ಹತ್ತಿಯ ಬಿತ್ತನೆ |
| ೯ | ಕ್ಯಾಂಬೋಡಿಯಾ ಹತ್ತಿ ಬಿತ್ತನೆ |
| ೧೦ | ಜೋಳದ ಕಾಡಿಗೆ |
| ೧೧ | ಹೊಂಗೆ ಹಿಂಡಿ |
| ೧೨ | ಮುಟ್ಟುಗಳ ಖರೀದಿ |
| ೧೩ | ಉಪ್ಪು ನೀರಿನಲ್ಲಿ ಬಿತ್ತನೆ ಚುನಾಯಿಸುವುದು |
| ೧೪ | ಅಡಿಕೆ ಕೊಳೆ ರೋಗ |
| ೧೫ | ಕಂಬಳಿ ಹುಳುಗಳು |

ಕೋಷ್ಟಕ ಮುಂದುವರಿದಿದೆ

| ೧ | ೨ |
|---|---|
| ೧೬ | ಹರಳಿಗೆ ಹತ್ತುವ ಕೊಡಲಿ ಹುಳು |
| ೧೭ | ಬತ್ತದ ಕೊಕ್ರೆ ರೋಗ |
| ೧೮ | ದಸರ ವಸ್ತು ಪ್ರದರ್ಶನ ಕೈಪಿಡಿ (೧೯೧೬) |
| ೧೯ | ದಸರ ವಸ್ತು ಪ್ರದರ್ಶನ ಕೈಪಿಡಿ (೧೯೧೭) |
| ೨೦ | ಕಾಫಿ ಕಾಂಡ ಕೊರೆಯುವ ಹುಳು |
| ೨೧ | ಕಂಬಳಿ ಹುಳು |
| ೨೨ | ಅಡಿಕೆ ಒಣಗಿಸುವುದು |
| ೨೩ | ಕರಿತಲೆಯ ಕಂಬಳಿ ಹುಳು |
| ೨೪ | ಗಿಡ್ಡರಾಗಿ ತೆನೆಗೆ ಬೀಳುವ ಹುಳು |
| ೨೫ | ಬೇಸಿಗೆ ಬೆಳೆ |
| ೨೬ | ರಾಗಿ ಬೆಳೆ ವಿಧಾನ |
| ೨೭ | ಬಿಳಿ ಜೋಳ ಮತ್ತು ನವಣೆ ಬೆಳೆ ವಿಧಾನ |
| ೨೮ | ಶೀಘ್ರವಾಗಿ ಬೆಳೆ ಬರುವ ಬತ್ತಗಳನ್ನು ಬೆಳೆಯುವ ವಿಧಾನ. |
| ೨೯ | ಬೋರರ್ ಹುಳು |

### ೪.೪.೨. ಎರಡನೆಯ ಹಂತ– ೧೯೪೮ರಿಂದ ೧೯೮೦ರವರೆಗೆ

ಭಾರತ ಸ್ವಾತಂತ್ರ್ಯಾನಂತರ ಆಹಾರ ಕ್ಷಾಮ ಎದುರಿಸುವ ಸ್ಥಿತಿಯಲ್ಲಿತ್ತು. ಅಧಿಕ ಇಳುವರಿ ತಳಿ ಹಾಗೂ ರಾಸಾಯನಿಕ ಗೊಬ್ಬರಗಳ ಸಾಂದ್ರ ಬಳಕೆಯಿಂದಾಗಿ ಎಲ್ಲ ತೃತೀಯ ಜಗತ್ತಿನ ದೇಶಗಳ ಕೃಷಿಯಲ್ಲಿ ಬಹು ದೊಡ್ಡ ಕ್ರಾಂತಿಯೇ ಸಂಭವಿಸಿ ಇಳುವರಿಯಲ್ಲಿ ಬಹಳ ಹೆಚ್ಚಳ ಕಂಡಿಬಂದಿತು. ಇದನ್ನು 'ಹಸಿರು ಕ್ರಾಂತಿ' ಎಂದು ಕರೆಯಲಾಯಿತು. ಶತಶತಮಾನಗಳ ಕಾಲದಿಂದ ಸಾಂಪ್ರದಾಯಿಕ ಜ್ಞಾನದ ದೀಪಿಗೆಯ ಬೆಳಕಲ್ಲಿ ಕೃಷಿ ಮಾಡುತ್ತಿದ್ದ ರೈತನಿಗೆ ಅಪರಿಚಿತ 'ಆಧುನಿಕ ಹಾಗೂ ವೈಜ್ಞಾನಿಕ ಕೃಷಿ'ಯನ್ನು ಅನುಸರಿಸಬೇಕಾಯಿತು. ಈ ಬೆಳವಣಿಗೆಗಳೊಂದಿಗೆ ಹೊಸ ರೀತಿಯ ಕೃಷಿ ಸಾಹಿತ್ಯದ ಅಭಿವ್ಯಕ್ತಿ ಅನಿವಾರ್ಯವಾಯಿತು. ಕೃಷಿ ಇಲಾಖೆ, ಕೃಷಿ ವಿಶ್ವವಿದ್ಯಾನಿಲಯಗಳು ಹಾಗೂ ಇತರ ವಿಶ್ವವಿದ್ಯಾಲಯಗಳು, ವಯಸ್ಕರ ಶಿಕ್ಷಣ ಇಲಾಖೆ ಮುಂತಾದುವು ರೈತರ ಅರಿವು ಹೆಚ್ಚಿಸುವ ಸಲುವಾಗಿ ಕೃಷಿ ವಿಜ್ಞಾನ ಸಾಹಿತ್ಯ ಪ್ರಕಟಣೆಯಲ್ಲಿ ತೊಡಗಿದುವು.

ಅರವತ್ತರ ದಶಕದವರೆಗೆ ಪ್ರಕಟವಾಗಿರುವ ಕೃಷಿವಿಜ್ಞಾನ ಸಾಹಿತ್ಯ ಪುಸ್ತಕಗಳು ಸಂಖ್ಯೆಯಲ್ಲಿ ಕಡಮೆ ಹಾಗೂ ಅವು ರೈತರಿಗೆ ಹೊಸತೇನನ್ನೂ ಹೇಳಿಲ್ಲ. ಈಗ ನಾವು

ಆಧುನಿಕ ಎಂದು ಹೇಳುವ ಯಾವ ಕೃಷಿ ತಂತ್ರಜ್ಞಾನವೂ ಆಗ ಇರಲಿಲ್ಲ. ತಿಳಿದಿದ್ದ ಕೃಷಿ ವಿಧಾನ ಮತ್ತು ಪದ್ಧತಿಗಳನ್ನಷ್ಟೇ ಇನ್ನೂ ಅಭಿವೃದ್ಧಿಪಡಿಸಬೇಕಿತ್ತು. ಕೃಷಿ ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ ಹಾಗೂ ಕೃಷಿ ವಿಸ್ತರಣ ತಜ್ಞರಾಗಿರುವ ಡಾ.ಆರ್.ದ್ವಾರಕೀನಾಥ್‌ರವರು ಐವತ್ತರ ದಶಕದಲ್ಲಿ ಕ್ಷೇತ್ರ ಮಟ್ಟದಲ್ಲಿ ರೈತರೊಂದಿಗೆ ವ್ಯವಹರಿಸುವಾಗ ಅವರಿಗೆ ತಿಳಿಹೇಳಲು ನೀರಾವರಿ, ಉತ್ತಮ ಬೇಸಾಯದ ಪದ್ಧತಿಗಳು ಹಾಗೂ ಉತ್ತಮ ಬಿತ್ತನೆಯ ಹೊರತಾಗಿ ಹೊಸತೇನೂ ಇರುತ್ತಿರಲಿಲ್ಲವೆಂದು ಹೇಳಿದ್ದಾರೆ (ದ್ವಾರಕೀನಾಥ್, ೨೦೦೦). ಆ ಸಮಯದಲ್ಲಿ ಪ್ರಕಟವಾಗಿರುವ ಕೆಲವು ಕೃತಿಗಳನ್ನು ನಾವು ಅವಲೋಕಿಸಿದಲ್ಲಿ ಈ ವಿಷಯ ಸ್ಫುಟವಾಗುತ್ತದೆ. ಇದಕ್ಕೆ ಪೂರಕವಾಗಿ ೫೦-೬೦ರ ದಶಕದಲ್ಲಿ ಪ್ರಕಟವಾಗಿರುವ ಕೃಷಿವಿಜ್ಞಾನ ಸಾಹಿತ್ಯದ ಪ್ರಕಟಣೆಗಳನ್ನು ಕೋಷ್ಟಕ ೪ರಲ್ಲಿ ಕೊಡಲಾಗಿದೆ.

**ಕೋಷ್ಟಕ ೪: ೫೦-೬೦ರ ದಶಕದಲ್ಲಿ ಪ್ರಕಟವಾದ ಕೆಲವು ಕನ್ನಡ ಕೃಷಿವಿಜ್ಞಾನ ಪ್ರಕಟಣೆಗಳು**

| ಕ್ರ.ಸಂ. | ಶೀರ್ಷಿಕೆ | ಲೇಖಕರು | ಪ್ರಕಟಣೆಯ ವರ್ಷ |
|---|---|---|---|
| ೧ | ಪಶುಪಾಲನೆ | ಕೃಷ್ಣಶಾಸ್ತ್ರಿ,ಎಂ. | ೧೯೪೪ |
| ೨ | ಗೊಬ್ಬರ | ಹಿತ್ತಲಮನಿ, ವೀ.ಚ. | ೧೯೪೭ |
| ೩ | ಕಾಮಧೇನು | ಸಿದ್ದವನಹಳ್ಳಿ ಕೃಷ್ಣಶರ್ಮ | ೧೯೪೯ |
| ೪ | ರೇಷ್ಮೆ ಕೈಗಾರಿಕೆ | ದೇಸಿಗೌಡ, ಎಲ್. | ೧೯೪೯ |
| ೫ | ಕೀಟಕ ಪಿಡುಗುಗಳ ಸಮೀಕ್ಷಣೆ | ಕಟಿಗಿಹಳ್ಳಿಮಠ, ಎಸ್.ಎಸ್. | ೧೯೫೬ |
| ೬ | ವ್ಯವಸಾಯದ ಮಣ್ಣುಗಳು | ಕೂರಪಾಡು ಗುಂಡಪ್ಪ, | ೧೯೫೮ |
| ೭ | ಜೇನು | ಮುರಿಗಪ್ಪ ಶ್ರೇಷ್ಠಿ, ಡಿ.ಎಸ್. | ೧೯೫೮ |
| ೮ | ಮೈಸೂರಿನ ವ್ಯವಸಾಯ | ನರಸಿಂಹ ಅಯ್ಯಂಗಾರ್, ಮ.ಲ. | ೧೯೬೧ |
| ೯ | ರೇಷ್ಮೆ | ನರಸಿಂಹಮೂರ್ತಿ, ಎಲ್. | ೧೯೬೨ |
| ೧೦ | ಕುರಿ ಸಾಕಣೆ | ಮುನಿಯಪ್ಪ, ಜೆ. | ೧೯೬೩ |
| ೧೧ | ನೀರಾವರಿ | ಕಪನೀಪತಿಭಟ್ಟ, ಎಚ್.ಸಿ. | ೧೯೬೪ |
| ೧೨ | ಬೆಳವಲ ನಾಡಿನ ಬೆಳೆಗಳು | ಹೊಸಮನಿ, ಎಂ.ಎಂ. | ೧೯೬೫ |
| ೧೩ | ವನಮಾಲಿ | ನರಸಿಂಹ ಅಯ್ಯಂಗಾರ್,ಮ.ಲ. | ೧೯೬೬ |

ಹಸಿರು ಕ್ರಾಂತಿಯ ಪ್ರಾರಂಭವು ಕೃಷಿ ಸಂವಹನೆಗೆ ಹೆಚ್ಚು ಒತ್ತು ಕೊಟ್ಟಿತು. ಸಂವಹನೆಯ ವಿಧಾನ ಮತ್ತು ಧ್ಯೇಯೋದ್ದೇಶಗಳು ಆಧುನಿಕ ಕೃಷಿಯ ಆದ್ಯತೆಗಳನುಸಾರ ಬದಲಾಗುತ್ತಾ ಹೋಯಿತು. ಕೃಷಿ ವಿಸ್ತರಣ ತತ್ವಗಳ ತಳಹದಿಯ ಮೇಲೆಯೇ ಕೃಷಿ ಸಾಹಿತ್ಯ ರಚನೆ ಮತ್ತು ಕೃಷಿ ಪತ್ರಿಕೋದ್ಯಮ ಬೆಳೆಯುತ್ತಾ ಹೋಯಿತು. ಕಳೆದ ಶತಮಾನದ ಐದನೇ ದಶಕದ ಈ ಸಂದಿಗ್ಧ ಹಂತದಲ್ಲಿ ಕೃಷಿ ಸಂವಹನೆ ಒಂದು ಸಾಂಸ್ಥಿಕ ರೂಪ ತಳೆಯಿತು (ವಿಠಲ, ೨೦೦೨). ಆದರೂ ವಿಸ್ತರಣೆ ಮತ್ತು ಕೃಷಿ ಸಾಹಿತ್ಯ ರಚನೆ ಅಥವಾ ಕೃಷಿ ಪತ್ರಿಕೋದ್ಯಮಗಳ ನಡುವೆ ಅಂತರಸಂಬಂಧಗಳ ಸಮಗ್ರತೆ ಏರ್ಪಡಲಿಲ್ಲವಾದುದರಿಂದ ಕೃಷಿ ಪತ್ರಿಕೋದ್ಯಮ ಹಲವಾರು ವರ್ಷಗಳ ಕಾಲ ಮಡುಗಟ್ಟಿದ ನೀರಿನಂತಾಗಿತ್ತು (ಶಿವರಾಂ ಪೈಲೂರು, ೨೦೦೫).

**ಕೋಷ್ಟಕ ೫: ೬೦-೭೦ರ ದಶಕದಲ್ಲಿ ಪ್ರಕಟವಾದ ಕನ್ನಡದ ಕೆಲವು ಕೃಷಿವಿಜ್ಞಾನ ಪ್ರಕಟಣೆಗಳು**

| ಕ್ರ.ಸಂ. | ಶೀರ್ಷಿಕೆ | ಲೇಖಕರು | ಪ್ರಕಟವಾದ ವರ್ಷ |
|---|---|---|---|
| ೧ | ಸಸ್ಯ ಸಂರಕ್ಷಣೆ | ಚೆನ್ನಸ್ವಾಮಿರೆಡ್ಡಿ, ಎಂ. | ೧೯೬೭ |
| ೨ | ಕ್ಯಾವೆಂಡಿಶ್ ಬಾಳೆ | ಕೃಷ್ಣಪ್ಪ ಗೌಡ | ೧೯೬೭ |
| ೩ | ತೆಂಗು | ವಿಜಯೇಂದ್ರಮೂರ್ತಿ | ೧೯೬೭ |
| ೪ | ಅಧಿಕ ಉತ್ಪಾದನೆಗಾಗಿ ಮಿಶ್ರತಳಿ ಬೆಳೆಗಳು | ಕಲ್ಯಾಣಿಮಠ, ಎ.ಸಿ. | ೧೯೬೮ |
| ೫ | ನಮ್ಮ ರೈತರೇಕೆ ಹಿಂದುಳಿದಿದ್ದಾರೆ | ಕೊಡ್ಲಿ,ಎಂ.ಸಿ. | ೧೯೬೮ |
| ೬ | ರೇಷ್ಮೆ ಹುಳು ಮತ್ತು ಅದರ ಸಾಕಣೆ | ಚೌಧುರಿ, ಎಸ್.ಎನ್. | ೧೯೬೮ |
| ೭ | ಆಧುನಿಕ ಬೇಸಾಯ | ಗೊದ್ದು ವೀರೇಶ್ | ೧೯೭೧ |
| ೮ | ಸಸ್ಯ ಸಂರಕ್ಷಣೆ - ಕೈಪಿಡಿ | ಶೇಷಗಿರಿರಾವ್, ಡಿ. | ೧೯೭೧ |
| ೯ | ವ್ಯವಸಾಯ ಕೈಪಿಡಿ | ಕುವೆಂಪು [ಪ್ರ.ಸಂ.] | ೧೯೭೨ |
| ೧೦ | ಮೆಕ್ಸಿಕನ್ ಗೋಧಿ | ಹನುಮಂತಪ್ಪ, ಪಿ. | ೧೯೭೩ |
| ೧೧ | ಹೊಸ ಬಿತ್ತನೆ-ಹೆಚ್ಚು ಲಾಭ 'ಪೂರ್ಣರಾಗಿ' | ಶ್ರೀರಂಗರಾಜು,ಎಸ್.ಎಲ್. | ೧೯೭೩ |
| ೧೨ | ಸಂಕರಣ ಜೋಳ | ಕಿತ್ತೂರ್, ಜಿ.ಡಿ. | ೧೯೭೩ |
| ೧೩ | ಮೈಸೂರು ರಾಜ್ಯದಲ್ಲಿ ಕೃಷಿ | ಹಿತ್ತಲಮನಿ, ವಿ.ಸಿ. | ೧೯೭೩ |
| ೧೪ | ಆಧುನಿಕ ಬೇಸಾಯ ಪ್ರಶ್ನೆ-ಪರಿಹಾರ (ಭಾಗ-೧) | ಶೇಷಾದ್ರಿ ಅಯ್ಯರ್, ಅ. ಹಾಗೂ ಇತರರು | ೧೯೭೩ |

ಕೃಷಿ ಸಂವಹನೆಯ ಅವಶ್ಯಕತೆಯ ಬಗೆಗೆ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಮೊಟ್ಟಮೊದಲ ಕುಲಪತಿಗಳಾದ ಡಾ.ಕೆ.ಸಿ.ನಾಯಕ್ 'ಆಧುನಿಕ ವ್ಯವಸಾಯ' (ಗೊದ್ದು ವೀರೇಶ್, ೧೯೭೧) ಪುಸ್ತಕದ ಮುನ್ನುಡಿಯಲ್ಲಿ ಇಂದಿನ ಯಾಂತ್ರಿಕ ಬೇಸಾಯದ ತಳಹದಿಯ ಮೇಲೆ ಭಾರತದ ಬೇಸಾಯ ಪದ್ಧತಿಯನ್ನು ಬದಲಿಸಬೇಕಾದರೆ ಬೇಸಾಯಗಾರ ಮತ್ತು ಜನ ಸಾಮಾನ್ಯರಲ್ಲಿ ಆ ಬಗ್ಗೆ ತಿಳಿವಳಿಕೆ ಬೆಳೆಸುವುದು ಬಹಳ ಮುಖ್ಯ, ಆದುದರಿಂದ ಆಧುನಿಕ ಬೇಸಾಯದ ವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರು ಪೇಟೆ ಪಟ್ಟಣಗಳ ಹಾಗೂ ಹಳ್ಳಿಗಾಡುಗಳ ಜನರಿಗೆ ವಿವರಿಸಿ ಹೇಳುವುದು ಅವರ ಕರ್ತವ್ಯವೆಂದು ಹೇಳಿದ್ದಾರೆ.

ಅದರಂತೆ ಅರವತ್ತರ ದಶಕದ ಕೊನೆಯಿಂದ ಪ್ರಕಟವಾದ ಸಾಹಿತ್ಯದಲ್ಲಿ ಕೃಷಿವಿಜ್ಞಾನ ಹೊಸರೂಪ ಪಡೆಯತೊಡಗಿದ್ದನ್ನು ಸ್ಫುಟವಾಗಿ ಕಾಣಬಹುದು. ೬೦-೭೦ರ ದಶಕದಲ್ಲಿ ಪ್ರಕಟವಾಗಿ ಕೃಷಿವಿಜ್ಞಾನ ಸಾಹಿತ್ಯದ ಪ್ರಕಟಣೆಗಳನ್ನು ಕೋಷ್ಟಕ ೫ರಲ್ಲಿ ಕೊಡಲಾಗಿದೆ.

ಈ ಕೃತಿಗಳಲ್ಲಿ ಸಾಂಪ್ರದಾಯಿಕ ಕೃಷಿಯಿಂದ ಆಧುನಿಕ, 'ವೈಜ್ಞಾನಿಕ' ಕೃಷಿಯಾಗಿ ರೂಪಾಂತರವಾಗುವ ಕೃಷಿ ಸಂಕ್ರಮಣಾವಸ್ಥೆಯನ್ನು ಸ್ಫುಟವಾಗಿ ಕಾಣಬಹುದು. ೧೯೬೮ರಲ್ಲಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯವು ಉಪನ್ಯಾಸ ಗ್ರಂಥಮಾಲೆಯಡಿ ಪ್ರಕಟಿಸಿರುವ **ಅಧಿಕ ಉತ್ಪಾದನೆಗಾಗಿ ಮಿಶ್ರತಳಿ ಬೆಳೆಗಳು** ಕೃತಿಯ ಅರಿಕೆಯಲ್ಲಿ,

> **'ಮಿಶ್ರತಳಿಯ ವ್ಯವಸಾಯ ನಮ್ಮ ದೇಶಕ್ಕೆ ತೀರ ಹೊಸದಾದ ವಿಷಯ. ಜನಸಾಮಾನ್ಯರಲ್ಲಿ ಮತ್ತು ರೈತರಲ್ಲಿ ಮಿಶ್ರ ತಳಿಗಳನ್ನು ಬೆಳೆದು ಹೆಚ್ಚು ಉತ್ಪಾದನೆಯನ್ನು ಮತ್ತು ಲಾಭವನ್ನು ಪಡೆಯುವ ಹಂಬಲ ಪ್ರಬಲವಾಗಿದೆ. ಇಂಥ ರೈತರಿಗೆ ಆವಶ್ಯಕವಾದ ತಾಂತ್ರಿಕ ಜ್ಞಾನ ಮತ್ತು ಸೂಕ್ತ ಸಲಹೆ ಸೂಚನೆಗಳ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಮಾಡಿಕೊಡುವುದು ಅವಶ್ಯವೆನಿಸುತ್ತದೆ'.**

ಎಂದಿದ್ದಾರೆ ಲೇಖಕರಾದ ಕಲ್ಯಾಣಿಮಠ, ಎ.ಸಿ.ಯವರು. ಈ ಕೃತಿಯಲ್ಲಿ ಮಿಶ್ರತಳಿಗಳ ಸಂಶೋಧನೆಯ ಕಾರ್ಯವಿವರಣೆ, ಮಿಶ್ರತಳಿ ಬೀಜಗಳ ಉತ್ಪಾದನೆ, ಮಿಶ್ರತಳಿ ಬೀಜಗಳ ವೈಶಿಷ್ಟ್ಯಗಳು, ಸಾಗುವಳಿ ಕ್ರಮಗಳು ಮತ್ತು ಮಿಶ್ರತಳಿ ಬೆಳೆಗಳಿಗಿರುವ ಭವಿತವ್ಯಗಳನ್ನು ವಿವರಿಸಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದ ಇದೇ ಮಾಲಿಕೆಯಡಿ ಪ್ರಕಟವಾಗಿರುವ **ನಮ್ಮ ರೈತರೇಕೆ ಹಿಂದುಳಿದಿದ್ದಾರೆ,** (ಕೊಡ್ಲಿ,ಎಂ.ಸಿ., ೧೯೬೮) ಕೃತಿಯಲ್ಲಿ ರೈತರೇಕೆ ಹಿಂದುಳಿದಿದ್ದಾರೆಂದು ವಿಮರ್ಶಿಸುತ್ತಾ ಹಲವಾರು ಕಾರಣಗಳನ್ನು ಪಟ್ಟಿಮಾಡಿ, ಸಾಮಾಜಿಕ, ಆರ್ಥಿಕ ಕಾರಣಗಳಡಿ ರಾಸಾಯನಿಕ ಗೊಬ್ಬರ, ಸುಧಾರಿಸಿದ ಬೀಜ ಮತ್ತು ಸಸ್ಯಸಂರಕ್ಷಣೆಯ ಬಗ್ಗೆ ಹೆಚ್ಚು ಒತ್ತು ನೀಡುತ್ತಾ ಈ ಮುಂದಿನಂತೆ ಹೇಳಿದೆ:

ನಮ್ಮ ದೇಶದಲ್ಲಿ ರಾಸಾಯನಿಕ ಗೊಬ್ಬರದ ಉಪಯೋಗ ಬಹಳ ಕಡಿಮೆ ಇದೆ. ಬೇಸಾಯದ ಸುಧಾರಣೆಯಲ್ಲಿ ರಾಸಾಯನಿಕ ಗೊಬ್ಬರದ ಪಾತ್ರ ಮಹತ್ವದ್ದು.... ರಾಸಾಯನಿಕ ಗೊಬ್ಬರದ ಉತ್ಪಾದನೆಯು ನಮ್ಮಲ್ಲಿ ಕಡಿಮೆ ಇದೆ. ಮೂರನೆಯ ಪಂಚವಾರ್ಷಿಕ ಯೋಜನೆಯ ಗುರಿ ೮ ಲಕ್ಷ ಟನ್ ರಾಸಾಯನಿಕ ಗೊಬ್ಬರ ಉತ್ಪಾದಿಸುವದಿತ್ತು. ಆದರೆ ಮೂರನೆಯ ಪಂಚವಾರ್ಷಿಕ ಯೋಜನೆಯ ಕೊನೆಯಲ್ಲಿ ನಮ್ಮ ಉತ್ಪಾದನೆಯು ಕೇವಲ ೩.೯೨ ಲಕ್ಷ ಟನ್ ಮಾತ್ರ ಆಗಿತ್ತು.

ನಮ್ಮ ರೈತರೆಲ್ಲರೂ ಸುಧಾರಿಸಿದ ಬೀಜಗಳನ್ನು ಉಪಯೋಗಿಸಿದರೆ ಉತ್ಪಾದನೆಯನ್ನು ನಾವು ಎಷ್ಟೋ ಪಾಲು ಹೆಚ್ಚಿಸಬಹುದು. ಇತ್ತೀಚೆಗೆ ಬಳಕೆಗೆ ಬಂದಿರುವ ಹೈಬ್ರಿಡ್ ಜೋಳದ ಬೀಜಗಳು ಇದಕ್ಕೆ ನಿದರ್ಶನವಾಗಬಲ್ಲವು. ಜೊತೆಗೆ ನಮ್ಮ ರೈತರು ಬೆಳೆಯ ಸುರಕ್ಷಿತತೆಯ ಬಗೆಗೂ ಸಾಕಷ್ಟು ಕಾಳಜಿ ತೆಗೆದುಕೊಳ್ಳಬೇಕು. ಪ್ರತಿ ವರುಷವೂ ಮಿಡತೆ, ಇಲಿಗಳು ಮತ್ತು ಅನೇಕ ರೋಗಗಳಿಂದ ಬೆಳೆಗಳು ವಿಪರೀತ ನಾಶವಾಗುತ್ತವೆ. ಆದ್ದರಿಂದ ಪ್ರತಿಯೊಂದು ಗ್ರಾಮಗಳಲ್ಲಿಯೂ ಕ್ರಿಮಿನಾಶಕ ಔಷಧ ಮತ್ತು ಪಂಪುಗಳು ಇರಬೇಕು.

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗವು ೧೯೬೮ರಲ್ಲಿ ಕೃಷಿ ಸಂವಹನೆಯ ಪ್ರಾಮುಖ್ಯತೆಯನ್ನು ಮನಗಂಡು **Diffusion of Agricultural Innovations,** (Mishra, R.P., 1968) ಎಂಬ ಗ್ರಂಥವನ್ನು ಪ್ರಕಟಿಸಿತು. ಕೃತಿ ಇಂಗ್ಲಿಶ್ ಭಾಷೆಯದಾದರೂ ಮೈಸೂರು ವಿಶ್ವವಿದ್ಯಾನಿಲಯವು ಇದನ್ನು ಪ್ರಕಟಿಸಿರುವುದರಿಂದ ಅದನ್ನು ಇಲ್ಲಿ ಉಲ್ಲೇಖಿಸಲಾಗಿದೆ. ರೈತರು ಕೃಷಿ ಉತ್ಪಾದನೆಯಲ್ಲಿ ನವೀನ ತಾಂತ್ರಿಕತೆಗಳನ್ನು ಅಳವಡಿಸಿಕೊಳ್ಳದಿದ್ದಲ್ಲಿ ಆಹಾರ ಸಮಸ್ಯೆಗೆ ಪರಿಹಾರವೇ ಇಲ್ಲ, ಆದುದರಿಂದ ಕೃಷಿ ಸಂವಹನೆಯು ಅತ್ಯಂತ ಅವಶ್ಯಕವೆಂದಿದ್ದಾರೆ ಲೇಖಕರು.

The importance of the diffusion of agricultural innovations in a coutry like India needs no emphasis. Unless our farmers have access to the latest techniques of agricultural production, we cannot solve our food problem..... The transformation of a traditional peasant farming into a modern scientific farming involves two processes: 1) Scientific research and technological innovations which may remove obstacles to higher production, and 2) adoption of agricultural innovations by the farmers. We know that we have a band of Indian scientists who are capable of developing innovations which will increase agricultural productivity but, we are not sure that our farmers

will readily accept these innovations. In the absence of timely and quick adoption of innovations by out farmers, the efforts of our scientis will go in vain. To ensure that the fruits of scientific research and technological innovations are made use of by millions of our ill-fed, ill-clad and ill-sheltered peasants, we have to isolate the factors which inhibit them from accepting new ideas and innovations. In addition to this we have to understand the processes by which the diffusion of innovations occurs so that we can devise ways and means of accelerating these processes. The present report is a step in that direction.

ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ **ಆಧುನಿಕ ವ್ಯವಸಾಯ,** (ಗೊದ್ದು ವೀರೇಶ್, 1971) ಕೃತಿಯ ಮುನ್ನುಡಿಯಲ್ಲಿ ಕೃಷಿ ವಿಶ್ವವಿದ್ಯಾನಿಲಯದ ಮೊಟ್ಟಮೊದಲ ಕುಲಪತಿಗಳಾದ ಡಾ. ಕೆ.ಸಿ. ನಾಯಕ್‌ರವರು,

ಇಂದಿನ ಯಾಂತ್ರಿಕ ಬೇಸಾಯದ ತಳಹದಿಯ ಮೇಲೆ ಭಾರತದ ಬೇಸಾಯ ಪದ್ಧತಿಯನ್ನು ಬದಲಿಸಬೇಕಾದರೆ ಬೇಸಾಯಗಾರ ಮತ್ತು ಜನ ಸಾಮಾನ್ಯರಲ್ಲಿ ಆ ಬಗ್ಗೆ ತಿಳಿವಳಿಕೆ ಬೆಳೆಸುವುದು ಬಹಳ ಮುಖ್ಯ. ಆಧುನಿಕ ತಾಂತ್ರಿಕ ಬೇಸಾಯದ ತಿಳಿವಳಿಕೆಯನ್ನು ಸಾಮಾನ್ಯ ಬೇಸಾಯಗಾರರಿಗೆ ಒದಗಿಸುವ ಈ ಸಾಹಸದ ಕಾರ್ಯವನ್ನು ಕೀಟಶಾಸ್ತ್ರದ ಉಪ ಪ್ರಾಧ್ಯಾಪಕ ಶ್ರೀ ಗೊದ್ದು ವೀರೇಶ ಅವರು ಮಾಡಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ ಭಾರತದ ಬೇಸಾಯವು ಮಾಡಿರುವ ಪರಿವರ್ತನೆಯನ್ನು ಸುಮಾರು 200 ಪುಟಗಳ ಈ ಪುಸ್ತಕವು ಚಿತ್ರಿಸುತ್ತದೆ. ಜ್ಞಾನದ ಆಸ್ಫೋಟ ಮತ್ತು ಅದ್ಭುತ ವೈಜ್ಞಾನಿಕ ಹಾಗೂ ತಾಂತ್ರಿಕ ಪ್ರಗತಿಯ ಈ ದಿವಸಗಳಲ್ಲಿ ಜನಸಾಮಾನ್ಯರಿಗೆ ಅವುಗಳೊಡನೆ ಹೆಜ್ಜೆಯಿಟ್ಟು ಸಾಗುವುದು ಸುಲಭವಾಗಿಲ್ಲ. ನೋಬೆಲ್ ಪಾರಿತೋಷಕ ವಿಜೇತ ಡಾ. ಬೊರ್ಲಾಗ್ ಮತ್ತು ಫಿಲಿಪ್ಪಾಯಿನ್ಸ್ ಅಂತರರಾಷ್ಟ್ರೀಯ ಭತ್ತ ಸಂಶೋಧನ ಸಂಸ್ಥೆಯ ಡಾ. ಚಾಂಡ್ಲರರು ಆಧುನಿಕ ಯಂತ್ರ ತಂತ್ರ ವಿಜ್ಞಾನಗಳ ಸಹಾಯದಿಂದ ಬೇಸಾಯದ ಹುಟ್ಟುವಳಿಯಲ್ಲಿ ಭಾರೀ ದೊಡ್ಡ ಬದಲಾವಣೆಯನ್ನು ತರಲು ಶಕ್ಯವೆಂದಿರುವವರು. ಆದುದರಿಂದ ಆಧುನಿಕ ಬೇಸಾಯದ ವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರು ಪೇಟೆ ಪಟ್ಟಣಗಳ ಹಾಗೂ ಹಳ್ಳಿಗಾಡುಗಳ ಜನರಿಗೆ ವಿವರಿಸಿ ಹೇಳುವುದು ಅವರ ಕರ್ತವ್ಯ

ಎಂದಿದ್ದಾರೆ. ಲೇಖಕರ ಮಾತಿನಲ್ಲಿಯೂ ಸಹ ಬದಲಾಗುತ್ತಿರುವ ಕೃಷಿ ವಿಧಾನಗಳ ಚಿತ್ರಣ ಮತ್ತು ಅದಕ್ಕಾಗಿ ಅವಶ್ಯಕವಿರುವ ಕೃಷಿ ಸಂವಹನೆಯ ಪ್ರಾಮುಖ್ಯತೆ ಕಂಡುಬರುತ್ತದೆ:

ಕಳೆದ ಒಂದು ದಶಕದಿಂದ ಪ್ರಪಂಚದ ಹಿಂದುಳಿದ ರಾಷ್ಟ್ರಗಳು ಆಹಾರ ಸ್ವಾವಲಂಬನೆಗೆ ಬಹಳ ಹೋರಾಡುತ್ತಿವೆ. ಇದರಲ್ಲಿ ಭಾರತದ ಪಾತ್ರ ಬಹಳ ಮಹತ್ವವಾದದ್ದು. ಕಳೆದ ಎರಡು ದಶಕಗಳಲ್ಲಿ ನಮ್ಮ ಆಹರ ಉತ್ಪಾದನೆಯನ್ನು ದ್ವಿಗುಣಗೊಳಿಸಿದ್ದರೂ, ಪ್ರತಿ ವರ್ಷದ ಹೆಚ್ಚಿನ ಅಹಾರ ಉತ್ಪನ್ನ ಶೇ. 2.5ರಷ್ಟೇ ಇದೆ. ಕನಿಷ್ಟ ಶೇ. 5ರಷ್ಟಕ್ಕೆ ಪ್ರತಿ ವರ್ಷ ಆಹಾರ ಉತ್ಪನ್ನ ಹೆಚ್ಚಿಸದಿದ್ದರೆ, ಆಹಾರ ಸ್ವಯಂಪೂರ್ಣತೆ ಪಡೆಯುವುದು ಕಷ್ಟವಾಗುವುದು. ಕಳೆದ ನಾಲ್ಕೈದು ವರ್ಷಗಳಲ್ಲಿ ಈ ಗುರಿಯನ್ನು ಸಾಧಿಸುವ ಚಿಹ್ನೆಗಳು ಕಂಡುಬರುತ್ತಿವೆ. ಈ ದಶಕದಲ್ಲಿ ನಡೆದ ಕೃಷಿರಂಗದ ಪ್ರಗತಿಯನ್ನು ಹಸಿರುಕ್ರಾಂತಿಯೆಂದು ಕರೆಯಲಾಯಿತು. ಇದ್ದಕ್ಕಿದ್ದಂತೆಯೇ ಎಲ್ಲೆಲ್ಲೂ ರೈತರಲ್ಲಿ ಒಂದು ಹೊಸ ಚೈತನ್ಯ ಮೂಡಿ, ಅಧಿಕ ಫಸಲು ತೆಗೆಯುವ ಕೂಗು ಕೇಳಿಬರುತ್ತಿದೆ. ಹಿಂದೆಂದೂ ಇಲ್ಲದ ಈ ಹುಮ್ಮಸ್ಸು ಈಗ ಬರುವುದಕ್ಕೆ ಸಹಾಯವಾದ ಕೆಲವು ಅಂಶಗಳನ್ನು ಮನವರಿಕೆ ಮಾಡಿಕೊಡಬೇಕೆಂದಿರುವುದೇ ಈ ಪುಸ್ತಕದ ಮುಖ್ಯ ಉದ್ದೇಶವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಂಗವು ರೈತರಿಗಾಗಿಯೇ ಪ್ರಕಟಿಸಿದ ಮೊಟ್ಟಮೊದಲ ಬೃಹದ್ಗ್ರಂಥ **ವ್ಯವಸಾಯ ಕೈಪಿಡಿ** (ಕುವೆಂಪು [ಪ್ರ.ಸಂ.] ೧೯೭೨). ೮೮೮ ಪುಟಗಳ ಈ ಗ್ರಂಥಕ್ಕೆ ಪ್ರಧಾನ ಸಂಪಾದಕರಾಗಿದ್ದ ಕುವೆಂಪುರವರು ಸಹ ತಮ್ಮ ಮುನ್ನುಡಿಯಲ್ಲಿ ಅಧಿಕ ಕೃಷಿ ಉತ್ಪಾದನೆಗೆ ಆಧುನಿಕ ಪದ್ಧತಿ ಮತ್ತು ಅಧಿಕ ಇಳುವರಿ ಕೊಡಬಲ್ಲ ತಳಿಗಳ ಬಳಕೆ ಮುಖ್ಯ, ರೈತರಿಗೆ ಈ ಮುಖ್ಯಾಂಶಗಳ ಅರಿವಿರದಿದ್ದರೆ ಇದು ಸಾಧ್ಯವಿಲ್ಲವೆಂದು ಹೇಳುತ್ತ ಈ ರೀತಿ ಹೇಳಿದ್ದಾರೆ:

> ತೀವ್ರಗತಿಯಲ್ಲಿ ಹೆಚ್ಚುತ್ತಿರುವ ರಾಜ್ಯದ ಜನತೆಗೆ ಅಗತ್ಯವಾದ ಆಹಾರವನ್ನು ಹೆಚ್ಚು ಹೆಚ್ಚಾಗಿ ಬೆಳೆಸುವುದು ಅತ್ಯಾವಶ್ಯಕ. ವ್ಯವಸಾಯ ಯೋಗ್ಯ ಭೂ ವಿಸ್ತೀರ್ಣಕ್ಕೆ ಮಿತಿಯಿದೆ. ಆದ್ದರಿಂದ ಇರುವ ಭೂ ಪ್ರದೇಶದಲ್ಲೇ ಹೆಚ್ಚು ಉತ್ಪತ್ತಿ ಪಡೆಯಬೇಕು. ಇದಕ್ಕೆ ಆಧುನಿಕ ಪದ್ಧತಿ ಮತ್ತು ಅಧಿಕ ಇಳುವರಿ ಕೊಡಬಲ್ಲ ತಳಿಗಳ ಬಳಕೆ ಮುಖ್ಯ ರೈತರಿಗೆ ಈ ಮುಖ್ಯಾಂಶಗಳ ಅರಿವಿರದಿದ್ದರೆ ಇದು ಸಾಧ್ಯವಿಲ್ಲ.... ವೈಜ್ಞಾನಿಕ ಸಂಶೋಧನೆ ಅತಿವೇಗವಾಗಿ ಮುಂದುವರಿಯುತ್ತಿದೆ. ಇದರಿಂದ ಇಂದಿನ ನವೀನ ತಳಿ ಅಥವ ಪದ್ಧತಿ ನಾಳೆ ಹಳತಾಗಬಹುದು. ಚಂದ್ರಲೋಕವನ್ನು ಮುಟ್ಟಿ, ಮೆಟ್ಟಿ, ವಾಪಸಲು ಪ್ರಯತ್ನಿಸುತ್ತಿರುವ ಕಾಲವಿದು. ಆದ್ದರಿಂದ ಮೂಲಾಂಶಗಳನ್ನು ಅರಿತಿದ್ದಲ್ಲಿ ಸಂಶೋಧನೆಯ ಫಲವನ್ನು ತಿಳಿಯುವುದು ಸುಲಭ. ಈ ಪುಸ್ತಕದಲ್ಲಿ ಸಾಮಾನ್ಯ ರೈತರಿಗೆ ಅನುಕೂಲವಾಗುವಂತಹ ಅಂಶವೆಲ್ಲವನ್ನೂ ವಿವರಿಸಲು ಪ್ರಯತ್ನಿಸಲಾಗಿದೆ.

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯವು ಪ್ರಕಟಿಸಿದ **ಮೈಸೂರು ರಾಜ್ಯದಲ್ಲಿ ಕೃಷಿ** (ಹಿತ್ತಲಮನಿ, ವಿ.ಸಿ. [ಸಂ], ೧೯೭೩)ಯ ಮುನ್ನುಡಿಯಲ್ಲಿ

> ಸಂಪ್ರದಾಯಬದ್ಧ ಕೃಷಿಯ ಉತ್ಪನ್ನ ತೀರ ಕನಿಷ್ಠ. ತಲೆಮಾರಿನಿಂದ ಬಂದ ಬೇಸಾಯ ಪದ್ಧತಿಗಳೇ ಕೃಷಿ ಉದ್ಯಮಕ್ಕೆ ಆಧಾರ. ಮರದ ನೇಗಿಲು; ಅದರ ಮುಂದೆ ನಿಶ್ಶಕ್ತ ಎತ್ತುಗಳು;

> **ಹಿಂದೆ ಅವುಗಳನ್ನು ಹೊಡೆಯುತ್ತಿರುವ ಬಡಕಲು, ಅರೆ ಬೆತ್ತಲೆ ರೈತ! ಇದು ನಮ್ಮ ಬೇಸಾಯದ ಸಂಕೇತ. ಪ್ರಪಂಚದ ಇತರೆಡೆ ಅಗಾಧ ಪ್ರಗತಿಯಾಗಿರುವಾಗ ನಮ್ಮಲ್ಲಿ ಕೃಷಿಪ್ರಧಾನ ಅಂಗಗಳಾದ ಉಳುಮೆ, ಬಿತ್ತನೆ, ಕಟಾವು, ಒಕ್ಕಣೆ, ತೂರುವುದು, ಶೇಖರಣೆ, ಕೊನೆಯದಾಗಿ ಧಾನ್ಯ, ಸಾಗಾಣಿಕೆ ಇವೆಲ್ಲಾ ಹಿಂದಿದ್ದಂತೆಯೇ, ಸಾಮಾನ್ಯವಾಗಿ ನಡೆಯುತ್ತಾ ಬಂದಿದೆ. ವಿಶ್ವದ ಇತರ ಮುಂದುವರಿದ ದೇಶಗಳಲ್ಲಿ ಕೃಷಿ, ವೈಜ್ಞಾನಿಕ ಕ್ರಮಗಳ ಅಳವಡಿಕೆಯಿಂದ ಅಪಾರ ಪ್ರಗತಿ ಸಾಧಿಸಿದೆ. ಆಧುನಿಕ ಕೃಷಿ ಅನುಷ್ಠಾನಕ್ಕೆ ರೈತನ ಅರಿವಿನ ಮಟ್ಟ ಸಾಕಷ್ಟು ಹೆಚ್ಚಿರಬೇಕು. ಅವನಿಗೆ ವಿವಿಧ ಹಂತಗಳಲ್ಲಿ ಅಳವಡಿಸುವ ನೂತನ ಕ್ರಮಗಳ ಆಗುಹೋಗುಗಳ ಪ್ರಜ್ಞೆ ಅವಶ್ಯಕ. ರೈತನಿಗೆ ಈ ದಿಕ್ಕಿನಲ್ಲಿ ಅರಿವು ಉಂಟುಮಾಡುವ ಕಾರ್ಯಕ್ರಮ ಅವ್ಯಾಹತವಾಗಿ ನಡೆಯುತ್ತಿರಬೇಕು. ಕೃಷಿಗೆ ವಿಜ್ಞಾನ ನೀಡುವ ಕೊಡಿಗೆಯ ಅರಿವೂ ರೈತನಿಗೆ ಸದಾ ಇರಬೇಕು**

ಎಂದು ಹೇಳಿದೆ. ಈ ರೀತಿಯ ಕೃಷಿಗೆ ವಿಜ್ಞಾನ ಕೊಡುವ ಕೊಡುಗೆ ಯಾವ ರೀತಿಯಲ್ಲಿರಬೇಕೆಂಬುದನ್ನು ಡಾ. ಆರ್. ದ್ವಾರಕೀನಾಥ್‌ರವರು **ಆಧುನಿಕ ಬೇಸಾಯ ಪ್ರಶ್ನೆ–ಪರಿಹಾರ (ಭಾಗ–೧)**ರ (ಶೇಷಾದ್ರಿ ಅಯ್ಯರ್,ಅ. ಹಾಗೂ ಇತರರು, ೧೯೭೩), ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ:

> **ನಮ್ಮ ಬೇಸಾಯದಲ್ಲಿ ಇದು ಒಂದು ಪರ್ವ ಕಾಲ. ಸಾಂಪ್ರದಾಯಕ ಬೇಸಾಯವು ಸ್ವಲ್ಪ ಸ್ವಲ್ಪವಾಗಿ ಬದಲಾವಣೆ ಹೊಂದಿ ವಾಣಿಜ್ಯ ಬೇಸಾಯವಾಗಿ ರೂಪುಗೊಳ್ಳುತ್ತಿದೆ. ಹೀಗೆ ವ್ಯವಸಾಯ, ರೂಪಾಂತರವನ್ನು ಹೊಂದುವಾಗ ಅನೇಕ ಹೊಸ ವಿಚಾರಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಇವುಗಳಲ್ಲಿ ಇತ್ತೀಚೆಗೆ ದೊರೆಯುತ್ತಿರುವ ತಾಂತ್ರಿಕ ಜ್ಞಾನವು ಒಂದು ಮುಖ್ಯ ಅಂಶ. ಕೃಷಿ ಸಂಶೋಧನಾ ಕ್ಷೇತ್ರಗಳಲ್ಲಿ ನಡೆಯುತ್ತಿರುವ ಪರೀಕ್ಷೆಗಳ ದೆಸೆಯಿಂದ ಅನೇಕ ಹೊಸ ವಿಚಾರಗಳು ಹೊರಬೀಳುತ್ತಿರುತ್ತವೆ. ಈ ವಿಚಾರಗಳು ಸರಳವೂ, ಸುಲಭವೂ ಆದ ರೀತಿಯಲ್ಲಿ ನಮ್ಮ ರೈತರಿಗೆ ದೊರಕಬೇಕಾಗಿದೆ.**

ಇದೇ ಸಮಯದಲ್ಲಿ ಮೈಸೂರಿನ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಹಲವಾರು ಕಿರುಹೊತ್ತಿಗೆಗಳನ್ನು ಪ್ರಕಟಿಸಿತು. ವಯಸ್ಕರ ಶಿಕ್ಷಣ ಗ್ರಾಮೀಣ ಜನರನ್ನು ಉದ್ದೇಶಿಸಿಯೇ ಇದ್ದುದರಿಂದ ಹಾಗೂ ಗ್ರಾಮೀಣ ಜನರೆಲ್ಲರೂ ಬಹುಪಾಲು ರೈತರೇ ಆಗಿರುವುದರಿಂದ ಈ ವಯಸ್ಕರ ಶಿಕ್ಷಣ ಸಾಹಿತ್ಯದಲ್ಲೂ ಕೃಷಿ ವಿಚಾರಗಳನ್ನು ಪ್ರಕಟಿಸಲಾಗುತ್ತಿತ್ತು. ಈ ರೀತಿಯ ಕೆಲವು ಪ್ರಮುಖ ಪ್ರಕಟಣೆಗಳನ್ನು ಕೋಷ್ಟಕ ೬ರಲ್ಲಿ ಕೊಡಲಾಗಿದೆ.

ಕೃಷಿಯ ಹೊಸ ವಿಚಾರಗಳನ್ನು ಈ ಸಾಹಿತ್ಯದ ಮೂಲಕ ರೈತರಿಗೆ ತಲುಪಿಸುವುದು ಹೆಚ್ಚು ಸೂಕ್ತವಾಗಿ ಕಂಡಿರಬೇಕು. **ಮೆಕ್ಸಿಕನ್ ಗೋಧಿ**(ಹನುಮಂತಪ್ಪ, ಪಿ., ೧೯೭೩)ಯಲ್ಲಿನ ಈ ಮುಂದಿನ ಪ್ರಹಸನ ಈ ಉದ್ದೇಶವನ್ನು ಸ್ಫುಟಪಡಿಸುತ್ತದೆ:

**ಕೋಷ್ಟಕ ೬: ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಪ್ರಕಟಿಸಿದ ಕೆಲವು ಕೃಷಿ ಪ್ರಕಟಣೆಗಳು**

| ಕ್ರ.ಸಂ. | ಶೀರ್ಷಿಕೆ | ಲೇಖಕರು | ಪ್ರಕಟವಾದ ವರ್ಷ |
|---|---|---|---|
| ೧ | ಹಸುರು ಮೇವಿನ ಕಣಜ | ವೆಂಕಟಸುಬ್ಬಯ್ಯ,ಆರ್.ಬಿ. | ೧೯೭೨ |
| ೨ | ಕಸಿ ಮತ್ತು ಗೂಟಿ | ಗುರುಮೂರ್ತಿ, ಬಿ. ವೈ. | ೧೯೭೨ |
| ೩ | ಬೆಳೆ ತಂದ ಭಾಗ್ಯ | ವಿಜಯೇಂದ್ರ ಮೂರ್ತಿ | ೧೯೭೨ |
| ೪ | ಕಾಳಿನ ಉಳಿಕೆ-ರೈತನ ಗಳಿಕೆ | ವಾಮದೇವಯ್ಯ,ಬಿ.ಎಂ. | ೧೯೭೨ |
| ೫ | ಮೆಕ್ಸಿಕನ್ ಗೋಧಿ | ಹನುಮಂತಪ್ಪ, ಪಿ. | ೧೯೭೩ |
| ೬ | ಹೊಸ ಬಿತ್ತನೆ-ಹೆಚ್ಚು ಲಾಭ 'ಪೂರ್ಣರಾಗಿ' | ಶ್ರೀರಂಗರಾಜು,ಎಸ್.ಎಲ್. | ೧೯೭೩ |
| ೭ | ಸಂಕರಣ ಜೋಳ | ಕಿತ್ತೂರ್, ಜಿ.ಡಿ. | ೧೯೭೩ |

ಪ್ರಹಸನ ೧:

ಮಾನಪ್ಪ: ಅಬ್ಬಾ! ಇದು ಎಷ್ಟು ಅಬ್ಬರವಾಗಿ ಬೆಳೆದಿದೆ? ಇದರ ಬೆಳೆಯೇ ಹೀಗೇನಾ? ಈ ಬೀಜವು ನಿನಗೆ ಎಲ್ಲಿ ದೊರೆಯಿತು?

ಪರಸಪ್ಪ: ಇದು ಮೆಕ್ಸಿಕನ್ ಜಾತಿ, ಪರದೇಶದ ಬೀಜ. ಇದರ ತೌರು ಮನೆ ಅಮೇರಿಕಾ ದೇಶದ ಮೆಕ್ಸಿಕೊ. ಆದ್ದರಿಂದ ಇದನ್ನು ಮೆಕ್ಸಿಕನ್ ಗೋಧಿ ಎಂದು ಕರೆಯುತ್ತಾರೆ. ಇದರ ಬಿತ್ತನೆ ಬೀಜವನ್ನು ಸೊಸಾಯಿಟಿಯಿಂದ ತಂದೆ.

ಮಾನಪ್ಪ: ಇದು ನಮ್ಮ ನಾಡ ಗೋಧಿಗಿಂತಲೂ ಹೆಚ್ಚು ಇಳುವರಿ ಕೊಡುವುದೇನು?

ಪರಸಪ್ಪ: ಹೌದು, ಮೆಕ್ಸಿಕನ್ ಜಾತಿ ನಮ್ಮ ನಾಡ ಗೋಧಿಗಿಂತಲೂ ಹೆಚ್ಚು ಇಳುವರಿ ಕೊಡುತ್ತದೆ. ಮಾನಪ್ಪ: ಮೆಕ್ಸಿಕನ್ ಗೋಧಿಯನ್ನು ಎಲ್ಲರೂ ಬೆಳೆಯಬಹುದೆ?

ಪರಸಪ್ಪ: ಯಾರಾದರೂ ಬೆಳೆಯಬಹುದು. ಆದರೆ ಬೇಸಾಯ ಕ್ರಮವನ್ನು ಮಾತ್ರ ತಿಳಿದಿರಬೇಕು.

ಮಾನಪ್ಪ: ಅಲ್ಲಪ, ಬೇಸಾಯ ನಮ್ಮ ನಾಡ ಗೋಧಿಗೆ ಮಾಡಿದ ಹಾಗೆ ಅಲ್ವೆ?

ಪರಸಪ್ಪ: ಅದು ಹಳೆಯ ರೀತಿಯದು. ಇದನ್ನು ಬೆಳೆಯಲು ಸುಧಾರಿಸಿದ ಬೇಸಾಯ ಮಾಡಬೇಕು. ಔಷಧ ಬಳಸಬೇಕು, ಬೀಜೋಪಚಾರ ಮಾಡಬೇಕು, ರಾಸಾಯನಿಕ ಗೊಬ್ಬರ ಸರಿಯಾದ ಪ್ರಮಾಣದಲ್ಲಿ, ಗೊತ್ತಾದ ಕಾಲದಲ್ಲೇ ಕೊಡಬೇಕು.

ಮಾನಪ್ಪ ಚಿಂತೆಗೊಳಗಾಗಿ, 'ಏನಪ್ಪಾ, ಇಷ್ಟೆಲ್ಲ ಹೇಗೆ ಮಾಡೋದು?'

ಪರಸಪ್ಪ: ಅಲ್ಲ, ಮಾನಪ್ಪ, ರೈತರ ಸಹಾಯಕ್ಕೆ ಬೇಸಾಯ ಅಧಿಕಾರಿಗಳು ಇದ್ದಾರೆಂದು ಹೇಳಿದೆನಲ್ಲ, ಅವರ ಸಲಹೆ ಅಗತ್ಯ

ಮಾನಪ್ಪ: ಅಂತು ಬೇಸಾಯದ ಅಧಿಕಾರಿಗಳನ್ನು ಕಾಣಲೇ ಬೇಕೆನ್ನು.....

ಪ್ರಹಸನ ೨:

ಮಾನಪ್ಪ: ನಾನು ನರಸಾಪುರಕ್ಕೆ ಹೋಗಿದ್ದೆ. ಪರಸಪ್ಪನ ಗೋಧಿ ಬೆಳೆ ಅಬ್ಬರವಾಗಿ ಬಂದಿದೆ. ಅದಕ್ಕೆ ಕಾರಣ ತಾವೆ ಅಂತೆ. ಮೆಕ್ಸಿಕನ್ ಗೋಧಿ ಬೆಳೆಯಲು ಏನೇನೋ ಹೇಳಿದ. ನನಗೊಂದೂ ನೆನಪಿನಲ್ಲಿ ಉಳಿಯಲಿಲ್ಲ.

ಅಧಿಕಾರಿಗಳು: ನೋಡು ಮಾನಪ್ಪ, ಸುಧಾರಿಸಿದ ಬೇಸಾಯ ಮಾಡಲು ಅನೇಕ ರೀತಿಗಳು ಇವೆ. ಅವನ್ನೆಲ್ಲ ರೈತನು ನೆನಪಿಡಲಾರ. ಅದಕ್ಕಾಗಿ ರೈತ ಬೆಳೆ ಬೆಳೆಯುವ ಮುಂಚೆ ಅದರ ಯೋಜನೆ ಮಾಡಿಕೊಳ್ಳಬೇಕು. ಬೇಸಾಯ ಯೋಜನೆಯು ದಾರಿಕಾರನಿಗೆ ನಕಾಶ ಇದ್ದಂತೆ. ಹುಟ್ಟುವಳಿ ಅಂದಾಜು ಪತ್ರಿಕೆಯು ರೈತನಿಗೆ ದಾರಿ ತೋರಿಸುತ್ತದೆ. ಇಕೋ ಈ ಪತ್ರಿಕೆಯನ್ನು ನೋಡು.

ಪ್ರಹಸನ ೩:

ಅಧಿಕಾರಿ: ಏನ ಮಾನಪ್ಪ, ಗೋಧಿ ಬೆಳೆ ಹೇಗಿದೆ? ಔಷಧಿ ಸಿಂಪಡಿಸಿದೆಯಾ?

ಮಾನಪ್ಪ: ನಮಸ್ಕಾರ್ರಿ ಸಾಹೇಬರೆ. ಇದೇ ಬಂದಿರಾ? ಪೈರು ಚೆನ್ನಾಗಿದೆ. ಔಷಧ ಯಾಕ್ರೀ?

ಅಧಿಕಾರಿ: ಹೊಸ ತರದ ಬೇಸಾಯದಲ್ಲಿ ಎಲ್ಲವೂ ಸರಿಯಾಗಿ ನಡೆಯಬೇಕು. ರೋಗ ಬರದಿದ್ದರೂ ಔಷಧಿ ಸಿಂಪಡಿಸಬೇಕು.....

ಈ ಪ್ರಹಸನಗಳಲ್ಲಿ ಹಸಿರು ಕ್ರಾಂತಿಯ ಆಧುನಿಕ ಕೃಷಿಯನ್ನು ರೈತರಿಗೆ ತಲುಪಿಸಲು ನಡೆಸಿರುವ ಪ್ರಯತ್ನ ಕಂಡುಬರುತ್ತದೆ.

### ೪.೪.೩. ಮೂರನೆಯ ಹಂತ– ೧೯೮೦ರಿಂದ ಇಂದಿನವರೆಗೆ

ಕೃಷಿ ಕ್ಷೇತ್ರದ ಬೆಳವಣಿಗೆಯಲ್ಲಿ, ತನ್ಮೂಲಕ ಕೃಷಿವಿಜ್ಞಾನ ಸಾಹಿತ್ಯದ ವಿಕಾಸದಲ್ಲಿ ಈ ಹಂತ ಅತ್ಯಂತ ಸಂದಿಗ್ಧವಾದುದು. ಕೃಷಿ ಇಂದು ಬದುಕಿನ ಒಂದು ಬದುಕಿನ ವಿಧಾನವಾಗಷ್ಟೇ ಉಳಿದಿಲ್ಲ. ಎಲ್ಲ ಕ್ಷೇತ್ರಗಳ ವಾಣಿಜ್ಯೀಕರಣವಾಗಿರುವಂತೆ ಕೃಷಿ ಕ್ಷೇತ್ರದ ವಾಣಿಜ್ಯೀಕರಣವೂ ಆಗಿದೆ. ಜಾಗತೀಕರಣವೆಂಬ ಕತ್ತಿಯು ಸಂಸ್ಕೃತಿಗಳನ್ನು ಬೇರು ಸಹಿತ ಕಿತ್ತೊಗೆದಿದೆ ಎಂದು ಪಾಣಿನಿ (೧೯೯೯) ಹೇಳಿದ್ದಾರೆ. ಶತಶತಮಾನಗಳಿಂದ ನಿರಂತರವಾಗಿ ಸಾಗಿದ್ದ ಸಂಸ್ಕೃತಿಯ ಗತಿ ಹಾಗೂ ದಿಕ್ಕು ಶರವೇಗದ ವಿಜ್ಞಾನ ಹಾಗೂ ತಂತ್ರಜ್ಞಾನದ ಅಭಿವೃದ್ಧಿಯಿಂದಾಗಿ ತುಂಡರಿಸಿದೆ. ಅಂದು ಪ್ರಕೃತಿಯ

ವಿಕೋಪಗಳನ್ನಷ್ಟೇ ಎದುರಿಸಬೇಕಾಗಿದ್ದ ರೈತ ಇಂದು ಪರಿಸರ ಮಾಲಿನ್ಯ, ಬಹುರಾಷ್ಟ್ರೀಯ ಸಂಸ್ಥೆಗಳ ಮೇಲಿನ ಅವಲಂಬತೆ, ಪೇಟೆಂಟ್ ಮತ್ತು ಬೌದ್ಧಿಕ ಆಸ್ತಿ ಹಕ್ಕು, ರೈತ ವಿರೋಧಿ ಕೃಷಿ ನೀತಿಗಳು, ದಿನದಿನಕ್ಕೆ ಕಾಣಿಸಿಕೊಳ್ಳುತ್ತಿರುವ ಹೊಸ ಹೊಸ ರೋಗ ಮತ್ತು ಪೀಡೆಗಳು ಮುಂತಾದ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಹಸಿರು ಕ್ರಾಂತಿಯಿಂದ ಇಂದು ಪರಿಸರ ಮಾಲಿನ್ಯ, ಅಂತರ್ಜಲ ನಿಕ್ಷೇಪ ಖಾಲಿಯಾಗಿರುವುದು, ನೀರು ಮತ್ತು ಗಾಳಿಯ ಮಲಿನತೆ, ಭೂಮಿ ಬರಡಾಗಿರುವುದು ಮುಂತಾದ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಹಾಗಾಗಿ ಕೃಷಿವಿಜ್ಞಾನ ಸಾಹಿತ್ಯ ಹೊಸ ಹಾಗೂ ವಿಶಿಷ್ಟ ರೂಪು ಪಡೆಯುತ್ತಿದೆ; ರೈತನ ಅರಿವನ್ನು ಮತ್ತೊಂದು ದಿಕ್ಕಿನಲ್ಲಿ ಹೆಚ್ಚಿಸುವ ಪ್ರಯತ್ನ ಈ ಸಾಹಿತ್ಯ ನಡೆಸುತ್ತಿದೆ.

ಕೃಷಿ ವಿಜ್ಞಾನ ಇಂದು ಶರವೇಗದಲ್ಲಿ ಸಾಗುತ್ತಿದೆ. ಜೀವತಂತ್ರಜ್ಞಾನ ಕೃಷಿಯಲ್ಲಿಯೂ ಬಳಕೆಯಾಗುತ್ತಿದೆ. ಇದರ ಪರ ಮತ್ತು ವಿರೋಧ ದಿನಗಳು ಎಲ್ಲೆಡೆಯೂ ಕೇಳಿಬರುತ್ತಿದೆ. ಹಾಗಾಗಿ ಕೃಷಿ ವಿಜ್ಞಾನ ಸಾಹಿತ್ಯದ ಹೊಣೆಗಾರಿಕೆ ಇನ್ನೂ ಹೆಚ್ಚಾಗಿದೆ.

**೪.೪.೩.೧. ಕೃಷಿವಿಜ್ಞಾನ ಸಾಹಿತ್ಯದ ರೂಪಾಂತರ**

ಆಧುನಿಕ ಕೃಷಿ ಅಥವಾ ಹಸಿರು ಕ್ರಾಂತಿಯ ಅಳವಡಿಕೆ ಹಾಗೂ ನಂತರದ ಜಾಗತೀಕರಣ ಮತ್ತು ಉದಾರೀಕರಣ ನೀತಿಗಳಿಂದಾಗಿ ಭಾರತೀಯ ರೈತರ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಪರಿಸ್ಥಿತಿಗಳಲ್ಲಿ ಮಹತ್ತರ ಪರಿಣಾಮಗಳುಂಟಾದುವು. ಅನಿರ್ಬಂಧಿತ ಕೀಟನಾಶಕ ಹಾಗೂ ರಸಗೊಬ್ಬರಗಳ ಬಳಕೆಯಿಂದ ಮಣ್ಣು, ನೀರು ಹಾಗೂ ಗಾಳಿಯು ಕಲುಷಿತಗೊಂಡು ಮನುಷ್ಯರ ಮತ್ತು ಪ್ರಾಣಿಪಕ್ಷಿಗಳ ಆರೋಗ್ಯದ ಮೇಲೆ ಪರಿಣಾಮ ಬೀರತೊಡಗಿತು. ೧೯೦೦ರಿಂದ ೧೯೫೦ರವರೆಗೆ ಶೇ. ೦.೩ರಷ್ಟಿದ್ದ ನಮ್ಮ ವಾರ್ಷಿಕ ಕೃಷಿ ಉತ್ಪಾದನೆ ೧೯೬೦-೭೦ರ ಅವಧಿಯಲ್ಲಿ ಅಧಿಕಗೊಂಡು ಶೇ. ೩.೩ರಷ್ಟಾಯಿತು. ಆದರೆ ೧೯೯೦-೯೮ರ ವೇಳೆಗೆ ಶೇ. ೧.೮ರಷ್ಟಿದ್ದ ಜನಸಂಖ್ಯಾ ಬೆಳವಣಿಗೆಗೆ ಹೋಲಿಸಿದಲ್ಲಿ ಕೃಷಿ ಉತ್ಪಾದನೆ ಶೇ. ೧.೪ಕ್ಕೆ ಇಳಿಯಿತು. ಸಾಕಷ್ಟು ಅಧಿಕ ಇಳುವರಿ ತಳಿಗಳು, ರಸಗೊಬ್ಬರ, ಪೀಡೆ ನಾಶಕ, ನೀರಾವರಿ ಸೌಲಭ್ಯ ಹಾಗೂ ಸಾಲಸೌಲಭ್ಯಗಳ ಲಭ್ಯತೆಯಿದ್ದರೂ ಈ ಆಧುನಿಕ ಕೃಷಿ ಸುಸ್ಥಿರವಲ್ಲವೆಂಬುದನ್ನು ತೋರಿಸುತ್ತದೆ (ವೀರೇಶ್, ೨೦೦೪). ಹೆಚ್ಚಿದ ಉತ್ಪಾದನೆಯಿಂದಾಗಿ ರಫ್ತು ಮಾಡುವಂತಹ ಸ್ಥಿತಿಯಿಂದ ಈಗ ಮತ್ತೆ ಗೋಧಿಯಂತಹ ಆಹಾರ ಧಾನ್ಯವನ್ನು ಆಮದು ಮಾಡಿಕೊಳ್ಳಬೇಕಾದ ಪರಿಸ್ಥಿತಿ ಬಂದೊದಗಿದೆ (ಕಲ್ಯಾಣ್ ರೇ, ೨೦೦೬).

ಕೃಷಿ ಕ್ಷೇತ್ರದ ರೂಪಾಂತರದಂತೆ ಕನ್ನಡ ಕೃಷಿವಿಜ್ಞಾನ ಸಾಹಿತ್ಯದ ರೂಪಾಂತರವೂ ನಡೆಯತೊಡಗಿತು. ಈ ಸಾಹಿತ್ಯ ರೂಪಾಂತರದ ಅವಲೋಕನೆಗೆ ಕೃಷಿ ಕ್ಷೇತ್ರದ ರೂಪಾಂತರದ ಅಧ್ಯಯನವೂ ಅಗತ್ಯವಾಗಿದೆ.

ಭಾರತೀಯ ಕೃಷಿ ಕ್ಷೇತ್ರದಲ್ಲಾದ ಬದಲಾವಣೆಗಳನ್ನು ಮೂರು ಹಂತಗಳಲ್ಲಿ ಗುರುತಿಸಬಹುದು (ದ್ವಾರಕೀನಾಥ್, ೨೦೦೬). ಮೊದಲನೆಯ ಹಂತ **ಕೌಟುಂಬಿಕ ಕೃಷಿಯ** ಹಂತ. ಭಾರತಕ್ಕೆ ಸ್ವಾತಂತ್ರ್ಯ ದೊರಕಿದಾಗ ಭಾರತೀಯ ಕೃಷಿಯು ಪ್ರಧಾನವಾಗಿ ಕೌಟುಂಬಿಕ ಕೃಷಿಯಾಗಿತ್ತು. ಸಾಮಾನ್ಯವಾಗಿ ಅದು ಬದುಕಿನ ಒಂದು ವಿಧಾನವಾಗಿತ್ತು, ಜೀವನಾಧಾರದ ಕಸುಬಾಗಿತ್ತು. ಸ್ಥಳೀಯ ಸಂಪ್ರದಾಯ ಮತ್ತು ಸಂಸ್ಕೃತಿಯೇ ಕೃಷಿಜೀವನದ ಆಧಾರವಾಗಿತ್ತು. ಅದು ಸಂಪೂರ್ಣ ಸ್ವಾವಲಂಬನೆಯ ಉದ್ಯೋಗವಾಗಿತ್ತು. ಅದಕ್ಕಾಗಿ ಹಿಂದಿನ ಬೆಳೆಯಿಂದ ಬಿತ್ತನೆ ಬೀಜ, ಸಸ್ಯ ಮತ್ತು ಪ್ರಾಣಿ ತ್ಯಾಜ್ಯಗಳಿಂದ ಗೊಬ್ಬರ ಹಾಗೂ ಅವಿಭಕ್ತ ಕುಟುಂಬದ ಸದಸ್ಯರಿಂದ ಶ್ರಮ ಬರುತ್ತಿತ್ತು. ಬೇಸಾಯಪದ್ಧತಿಗಳು ಶತಶತಮಾನದ ಅನುಭವ ಆಧಾರಿತ ಮಿಶ್ರಬೆಳೆ, ಮಿಶ್ರಕೃಷಿ ಮತ್ತು ಬೆಳೆ ಆವರ್ತನೆ ಮುಂತಾದ ಪದ್ಧತಿಗಳಾಗಿತ್ತು ಹಾಗೂ ಕೃಷಿ ಉತ್ಪಾದನೆ ಮುಖ್ಯವಾಗಿ ಕುಟುಂಬದ ಬಳಕೆಗಾಗಿತ್ತು. ಒಟ್ಟಾರೆ ಅದು, ಸುಸ್ಥಿರ ಕೌಟುಂಬಿಕ ಉದ್ಯೋಗವಾಗಿತ್ತು.

ಎರಡನೆಯದು **ಹೆಚ್ಚುವರಿ ಕೃಷಿಯ** ಹಂತ. ಹೊಸದಾಗಿ ನಿರ್ಮಾಣಗೊಂಡ ದೇಶ ಬಳುವಳಿಯಾಗಿ ಪಡೆದ ತೀವ್ರ ಆಹಾರದ ಅಭಾವದಿಂದಾಗಿ ಹೆಚ್ಚುವರಿ ಕೃಷಿಯ ಅನುಸರಣೆ ತಾರ್ಕಿಕ ಅವಶ್ಯಕತೆಯಾಗಿತ್ತು. ೧೯೫೦ರ ಸುಮಾರಿಗೆ ಆಯ್ದ ಸಾಂಪ್ರದಾಯಿಕ ವಿಧಾನಗಳ ಆಧಾರದ 'ಹೆಚ್ಚು ಆಹಾರ ಬೆಳೆಯಿರಿ ಆಂದೋಳನ'ವೇ (The Grow More Food Campaign) ಈ ಸಮಸ್ಯೆಗೆ ಪ್ರಮುಖ ಪರಿಹಾರವಾಗಿ ಕಂಡುಬಂದಿತ್ತು. ಆದರೆ ಭಾರತೀಯ ಕೃಷಿಯ ಸುವರ್ಣಯುಗ ೧೯೬೦ರ ದಶಕದಲ್ಲಿ ಹಸಿರುಕ್ರಾಂತಿಯೊಂದಿಗೆ ಪ್ರಾರಂಭವಾಯಿತೆನ್ನಬಹುದು. ಇದರೊಂದಿಗೆ, ಭಾರತೀಯ ರೈತ ತನ್ನ ಸ್ಥಳೀಯ ಪದ್ಧತಿಯೊಂದಿಗೆ ಆಧುನಿಕ ತಂತ್ರಜ್ಞಾನವನ್ನು ಸೇರಿಸಿ ಬೆಳೆ ಇಳುವರಿಯನ್ನು ದುಪ್ಪಟ್ಟು ಮಾಡಿ ದೇಶವನ್ನು ಆಹಾರ ಸ್ವಾವಲಂಬನೆಯ ಹಂತಕ್ಕೆ ತಂದು ಚರಿತ್ರೆಯನ್ನೇ ನಿರ್ಮಾಣ ಮಾಡಿದ. ಆದರೆ ಈ ಪ್ರಕ್ರಿಯೆಯಲ್ಲಿ, ಆತ ಕೆಲವು ಖರೀದಿಸಿದ ಪರಿಕರಗಳ ಮೇಲೆ ಅವಲಂಬಿತವಾಗಬೇಕಾಯಿತು. ಈ ಹಂತದಲ್ಲಿ ಕೃಷಿ ವ್ಯವಸ್ಥೆ ಕ್ರಮೇಣ ತನ್ನ ಕೆಲವು ಅತ್ಯುತ್ತಮ ಸಾಂಪ್ರದಾಯಿಕ ಪದ್ಧತಿಗಳನ್ನು ತೊರೆಯಲಾರಂಭಿಸಿತೆಮಂದು ಇಲ್ಲಿ ಗಮನಿಸಬೇಕಾದ ಅಂಶ.

ಹಸಿರು ಕ್ರಾಂತಿಯ ಪ್ರಾರಂಭದಿಂದಾಗಿ ಕಾಣಿಸಿಕೊಂಡ ಮೂರನೆಯ ಹಂತವೇ **ಮಾರುಕಟ್ಟೆ ಕೃಷಿಯ** ಹಂತ. ಕೃಷಿರಂಗದಲ್ಲಿ ಮಾತ್ರವಲ್ಲ, ಅದರ ಆರ್ಥಿಕ ಪರಿಸರದಲ್ಲೂ ಇತ್ತೀಚಿನ ವರ್ಷಗಳಲ್ಲಿ ಕ್ರಮೇಣ ಬದಲಾವಣೆಗಳಾಗುತ್ತಿವೆ. ಎಲ್ಲ ರೈತಾಪಿ ಕುಟುಂಬಗಳಿಗೂ, ಇಂದು ನಗರ ದ ಆದಾಯದ ಅವಶ್ಯಕತೆಯಿದೆ. ಹಾಗಾಗಿ, ಬಹುಪಾಲು ಸಣ್ಣ ರೈತರು ಸ್ಥಳೀಯ ವಾರದ ಸಂತೆಗಳಿಗೆ ಬೆಳೆದರೆ, ಹೈ-ಟೆಕ್ ರೈತರು ರಫ್ತು ಮಾರುಕಟ್ಟೆಗಾಗಿ

ಬೆಳೆಯುತ್ತಾರೆಂಬ ಸಾಮಾನ್ಯ ಭಾವನೆಯಿದೆ. ಮಧ್ಯಹಂತದ ರೈತರು, ಏರುತ್ತಿರುವ ತಮ್ಮ ನಿರೀಕ್ಷೆಗಳಿಂದ ಹಾಗೂ ಪ್ರಸ್ತುತ ದಿನದ ಹೆಚ್ಚಿನ ಅರಿವಿನಿಂದಾಗಿ ಮಾರುಕಟ್ಟೆ ಮತ್ತು ಬೇಡಿಕೆಯನ್ನು ಸರಿಯಾಗಿ ಗುರುತಿಸದೆ ಹೆಚ್ಚೆಚ್ಚು ಬೆಳೆಯಲು ಪ್ರಾರಂಭಿಸಿದ್ದಾರೆ.

ಗ್ರಾಮೀಣ ಆರ್ಥಿಕ ಪರಿಸರದಲ್ಲಿ ಮೊದಲಿಗೆ ನಗದು ಹಣಕ್ಕೆ ಸ್ಥಾನವೇ ಇರಲಿಲ್ಲ. ಈಗ ಹಣ ಗ್ರಾಮೀಣ ಬದುಕನ್ನು ಸಂಪೂರ್ಣವಾಗಿ ಆಕ್ರಮಿಸಿದೆ. ಕೆಲದಶಕಗಳ ಹಿಂದೆ ಗ್ರಾಮೀಣ ಬದುಕು ಬಹಳ ಸರಳವಾಗಿತ್ತು ಹಾಗೂ ಕೃಷಿಯ ಮತ್ತು ಕೌಟುಂಬಿಕ ಅವಶ್ಯಕತೆಗಳು ಕೆಲಮೂಲಭೂತ ಅವಶ್ಯಕತೆಗಳನ್ನೊಳಗೊಂಡಂತೆ ತೀರಾ ಸೀಮಿತವಾಗಿದ್ದವು. ಬಹುಪಾಲು ಈ ಅವಶ್ಯಕತೆಗಳನ್ನು ಸ್ಥಳೀಯವಾಗಿಯೇ ನೀಗಿಸಿಕೊಳ್ಳಲಾಗುತ್ತಿತ್ತು. ಸಾಂಪ್ರದಾಯಿಕವಾಗಿ, ಈ ಸೇವೆಗಳಿಗೆ ಸಂದಾಯವನ್ನು ಕೃಷಿ ಉತ್ಪನ್ನಗಳ ರೂಪದಲ್ಲಿಯೇ ಕುಯಿಲಿನ ಸಮಯದಲ್ಲಿ ಪಾವತಿಸಲಾಗುತ್ತಿತ್ತು. ಈಗ ಇದೆಲ್ಲಾ ಬದಲಾಗಿದೆ. ಕೃಷಿ ಕುಟುಂಬಗಳ ಅವಶ್ಯಕತೆಗಳು ಹೆಚ್ಚುತ್ತಿರುವಂತೆ, ನಗರ ಬದುಕಿನ ಶೈಲಿಯನ್ನು ಅನುಕರಿಸುವುದರಿಂದಾಗಿ ಕೃಷಿ ಅವಶ್ಯಕತೆಗಳನ್ನೂ ಸಹ ಖರೀದಿಸಿದ ಪರಿಕರಗಳಿಂದಾಗಿ ಪೂರೈಸಿಕೊಳ್ಳಬೇಕಾದ ಸ್ಥಿತಿ ಬಂದಿದೆ. ಅದರ ಜೊತೆಗೆ ಗ್ರಾಮೀಣ ಬದುಕಿನಲ್ಲಿದ್ದ 'ವಸ್ತುವಿನಿಮಯ' (Barter System) ರೂಪದ ಸಂದಾಯ ಪದ್ಧತಿ ಸಂಪೂರ್ಣ ಕಣ್ಮರೆಯಾಗಿ ಅದರ ಸ್ಥಾನವನ್ನು ಹಣದ ವ್ಯವಹಾರ ಆಕ್ರಮಿಸಿದೆ. ಹಾಗಾಗಿ, ಇಂದು ಯಾವುದೇ ರೈತ ಸಾಕಷ್ಟು ಹಣದ ಆದಾಯವಿಲ್ಲದೆ ಬದುಕಲಾರ. ಅದಕ್ಕಾಗಿ ಮಾರುಕಟ್ಟೆಗಾಗಿ ಏನನ್ನಾದರೂ ಬೆಳೆಯಲೇಬೇಕಾಗಿರುವುದು ಇಂದು ಎಲ್ಲ ರೈತರಿಗೆ ಅನಿವಾರ್ಯವಾಗಿದೆ.

ಕರ್ನಾಟಕದಲ್ಲಿ ಜೀವನಾಧಾರದ ಕೃಷಿ ವಾಣಿಜ್ಯ ಅಥವಾ ಮಾರುಕಟ್ಟೆ ಕೃಷಿಯಾಗಿ ರೂಪಾಂತರಗೊಳ್ಳುವ ಕ್ರಿಯೆ ಹಲವಾರು ದಶಕಗಳ ಹಿಂದೆಯೇ ಮಂಡ್ಯದಲ್ಲಿ ೧೯೪೦ರಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪಿತಗೊಳ್ಳುವುದರೊಂದಿಗೆ ಪ್ರಾರಂಭವಾಯಿತು (ಪಾಣಿನಿ, ೧೯೯೯). ಆನಂತರ ೧೯೭೦ರಿಂದ ರೇಷ್ಮೆಕೃಷಿಯನ್ನು ಸರ್ಕಾರ ಜನಪ್ರಿಯಗೊಳಿಸಿತು. ಎಷ್ಟೋ ಜನ ರೈತರು ಆಹಾರ ಧಾನ್ಯವನ್ನು ಬೆಳೆಯುವುದನ್ನು ನಿಲ್ಲಿಸಿ ಕಬ್ಬು, ಹಿಪ್ಪುನೇರಳೆ ಸೊಪ್ಪು ಬೆಳೆಯಲು ಪ್ರಾರಂಭಿಸಿದರು. ೧೯೯೦ನೇ ದಶಕದಿಂದೀಚೆಗೆ ಅಲಂಕಾರಿಕ ಪುಷ್ಪಕೃಷಿ ಪ್ರಾರಂಭವಾಗಿದೆ.

ಜಾಗತೀಕರಣ ಹಾಗೂ ಉದಾರೀಕರಣ ಪ್ರಾರಂಭವಾದಾಗಲಿಂದಲೂ ಕೃಷಿ ಕ್ಷೇತ್ರಕ್ಕೆ ದೊಡ್ಡ ಹೊಡೆತ ಬಿದ್ದಿದೆ. ಭಾರತದಲ್ಲಿ ವಿಫುಲವಾಗಿ ಸಣ್ಣ ಕೃಷಿ ಹಿಡುವಳಿಗಳಿರುವುದರಿಂದ ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದಕ್ಕೆ ಉತ್ಪಾದಿಸುವುದು ಕಡಿಮೆ ಪ್ರಮಾಣದಲ್ಲಿದೆ. ಆದ್ದರಿಂದ ಜಾಗತೀಕರಣದಿಂದಾಗಿ ಭಾರತದಲ್ಲಿ ರೈತಾಪಿ ವರ್ಗಗಳಿಗೆ ಏನೇನೂ ಸಿಗುವುದಿಲ್ಲ. ದೊಡ್ಡ ಹಿಡುವಳಿದಾರರಿಗೆ ಪ್ರಯೋಜನಗಳು ಸಿಗುತ್ತವೆ.

ಜಾಗತೀಕರಣ ಉದಾರೀಕರಣದಿಂದಾಗಿ ಕೃಷಿ ಸಲಕರಣೆ ಉತ್ಪಾದಿಸುವ ಕೈಗಾರಿಕೆಗಳು ಹೆಚ್ಚು ಲಾಭ ಗಳಿಸುತ್ತವೆ. ಈ ಕೈಗಾರಿಕೆಗಳಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಹೆಚ್ಚಿವೆ. ಕಾರ್ಗಿಲ್, ಮಾನ್ಸಂಟೊ, ಸಿಬಾ ಮುಂತಾದ ಬಹುರಾಷ್ಟ್ರೀಯ ಕಂಪನಿಗಳ ಪಟ್ಟಿಯನ್ನು ಕೊಡಬಹುದು. ಜಾಗತೀಕರಣ ಹಾಗೂ ಉದಾರೀಕರಣ ಬಹುರಾಷ್ಟ್ರೀಯ ಕಂಪನಿಗಳು ಲಾಭ ಗಳಿಸುವುದಕ್ಕೆ ಪೂರಕವಾದ ಅಂಶಗಳಾಗಿವೆ. ಜಾಗತೀಕರಣ ಹಾಗೂ ಉದಾರೀಕರಣದಿಂದಾಗಿ ಇಂದು ಬಹುರಾಷ್ಟ್ರೀಯ ಕಂಪನಿಗಳು ಹೂಡುವ ಬಂಡವಾಳಕ್ಕೆ ಹೆಚ್ಚು ಲಾಭವಿದೆ. ಇಲ್ಲಿ ಕಡಿಮೆ ದರದಲ್ಲಿ ದೊರೆಯುವ ಕಚ್ಚಾ ಸಾಮಗ್ರಿಗಳು, ಮಾನವ ಸಂಪನ್ಮೂಲಗಳು, ಸರಕಾರದಿಂದ ಸಿಗುವ ಉತ್ತೇಜಕ ಬೆಂಬಲ ಮುಂತಾದುವುಗಳಿಂದ ಬಹುರಾಷ್ಟ್ರೀಯ ಕಂಪನಿಗಳು ಭಾರತದಲ್ಲಿ ಆಳವಾಗಿ ಬೇರು ಬಿಡಲಾರಂಭಿಸಿವೆ (ಸೋಮಶೇಖರ್, ೨೦೦೪). ಜಾಗತೀಕರಣವು ಇಂದು ರೈತರನ್ನು ರೈತೋದ್ಯಮಿಗಳನ್ನಾಗಿ ಮಾಡುತ್ತಿದೆ ಹಾಗೂ ಅವರಲ್ಲಿ ವಿಫುಲವಾಗಿದ್ದ ಕೃಷಿಕ ಬದುಕಿನ ಸಾಂಸ್ಕೃತಿಕ ಬಂಡವಾಳವನ್ನು ಕಣ್ಮರೆಯಾಗಿಸುತ್ತಿದೆ.

ಕೃಷಿ ವಲಯದಲ್ಲಿ ಸಂಶೋಧನೆಗಳ ಮೂಲಕ ಅಭಿವೃದ್ಧಿಪಡಿಸುವ ಹೊಸ ಸಸ್ಯ ಹಾಗೂ ಪ್ರಾಣಿ ತಳಿಗಳ ಮೇಲೆ ಹೊಂದುವ 'ಬೌದ್ಧಿಕ ಆಸ್ತಿ' ಹಕ್ಕುಗಳನ್ನು ಅಂತರರಾಷ್ಟ್ರೀಯ ಸಂಸ್ಥೆಯಾದ 'ಹೊಸ ತಳಿಗಳನ್ನು ಸಂರಕ್ಷಿಸುವ ಪರಿಷತ್' (UPOV) ಸ್ವಾಮ್ಯ ಕೊಡುವ ಕಾರ್ಯವನ್ನು ನಿರ್ವಹಿಸುತ್ತಿದೆ. ಈ ಸಂಸ್ಥೆ ೧೯೬೧ರಷ್ಟು ಹಿಂದೆಯೇ ಅಸ್ತಿತ್ವಕ್ಕೆ ಬಂದಿತು. ಈ ಸಂಸ್ಥೆಗೆ ಮೂವತ್ತು ರಾಷ್ಟ್ರಗಳು ಸದಸ್ಯರಾಗಿದ್ದಾರೆ. ಈ ಎಲ್ಲ ರಾಷ್ಟ್ರಗಳು ಕೈಗಾರಿಕಾ ರಾಷ್ಟ್ರಗಳಾಗಿರುವುದು, ತೃತೀಯ ಜಗತ್ತಿನ ರಾಷ್ಟ್ರಗಳು ಈ ಸಂಸ್ಥೆಯನ್ನು ಅನುಮಾನದಿಂದ ನೋಡಲು ಸಾಧ್ಯ. ಭಾರತದ ಸರಕಾರ ಈ ಸಂಸ್ಥೆಗೆ ಸದಸ್ಯತ್ವ ಪಡೆಯಲು ಯೋಚಿಸುತ್ತಿದೆ. ಆದರೆ ರಾಷ್ಟ್ರದ ಸಂಶೋಧನೆಯ ಬಗ್ಗೆ ಕಳಕಳಿಯಿರುವ ಎಲ್ಲರೂ ಇದನ್ನು ವಿರೋಧಿಸುತ್ತಿದ್ದಾರೆ. ಕೃಷಿ ಸಂಶೋಧನೆಗಳು ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಇದುವರೆಗೂ ಯಾವುದೇ ಬೌದ್ಧಿಕ ಆಸ್ತಿ ಹಕ್ಕುಗಳ ವ್ಯಾಪ್ತಿಯಲ್ಲಿ ಬರುತ್ತಿರಲಿಲ್ಲ. ಯಾಕೆಂದರೆ ಇವು ಪ್ರಕೃತಿಯ ಕೊಡುಗೆ. ಭಾರತದಲ್ಲಿ ಉಪಯುಕ್ತ ಪ್ರಭೇದಗಳು ಲಕ್ಷಾಂತರದಷ್ಟು ಇವೆ. ರೈತರಿಗೆ ತಳಿಗಳ ಮೇಲೆ ಹಕ್ಕಿದೆ ಅಥವಾ ಇವುಗಳನ್ನು ಗುರುತಿಸಿದ ತಳಿ ಶಾಸ್ತ್ರಜ್ಞರಿಗೆ ಇದರ ಮೇಲೆ ಹಕ್ಕಿದೆ ಎಂಬ ವಿಚಾರವೇ ತಿಳಿಯದು. ಉರುಗ್ವೆ ಸುತ್ತಿನ ಮಾತುಕತೆಯ ನಂತರ ಕೃಷಿವಲಯಕ್ಕೂ ಬೌದ್ಧಿಕ ಆಸ್ತಿ ಹಕ್ಕುಗಳನ್ನು ನಿರ್ದೇಶಿಸುವ ಪ್ರಕ್ರಿಯೆ ಪ್ರಾರಂಭವಾಗಿದೆ. ಇದರಿಂದಾಗಿ ಇಂದು ಕಾಡಿನಲ್ಲಿ ವಿಫುಲವಾಗಿ ಬೆಳೆಯುವ ಉಪಯುಕ್ತ ಸಸ್ಯಗಳನ್ನು ರೈತರು ಆಯ್ದು ಬೆಳೆಯುವುದಕ್ಕೂ ಕುತ್ತು ಬಂದಿದೆ. ರೈತರು ಆಯ್ದು ಬೆಳೆಸುವ ಸಸ್ಯಗಳ ಮೇಲೆ ಯಾರು ಹಕ್ಕುಗಳನ್ನು ಪಡೆದಿರುತ್ತಾರೋ ಅದು ರೈತರಿಗೆ

ತಿಳಿದೇ ಇರುವುದಿಲ್ಲ. ಆದ್ದರಿಂದ ಇಂದು ಬೇವಿನಂತ ಕಾಡು ಸಸ್ಯಕ್ಕೂ ಪೇಟೆಂಟ್ ಪಡೆಯುವ ಸಂಸ್ಥೆಗಳಿವೆ. ಪೇಟೆಂಟ್ ಪಡೆದ ನಮತರ ಬೆಳೆದು ಅಭಿವೃದ್ಧಿಪಡಿಸುವ ಹಕ್ಕುಗಳು ಸಂಸ್ಥೆಗಳಿಗೆ ಸೇರಿರುತ್ತದೆ. ಈ ಸಂಸ್ಥೆಗಳಿಗೆ ರಾಯಲ್ಟಿ ಕೊಡದೇ ಈ ತಳಿಗಳನ್ನು ರೈತರು ಮುಟ್ಟಲಾಗುವುದಿಲ್ಲ. ಆದ್ದರಿಂದ ಒಂದು ಕಾಲದಲ್ಲಿ ಮುಕ್ತವಾಗಿದ್ದ ಜೈವಿಕ ವಲಯ ಇಂದು ಬೌದ್ಧಿಕ ಆಸ್ತಿ ಹಕ್ಕುಗಳ ಕಾನೂನುಗಳ ಸುಳಿಯಲ್ಲಿ ಸಿಲುಕಿ ರೈತರಿಗೆ ಮಾರಕವಾಗಲಿದೆ (ಸೋಮಶೇಖರ್, ೨೦೦೪).

ಈ ಹೊಸ ವಿಚಾರಗಳ ಪ್ರಕಟಣೆಗೆ ಹಲವಾರು ಸರ್ಕಾರೇತರ ಸಂಸ್ಥೆಗಳು, ಸ್ವಯಂಸೇವಾ ಸಂಸ್ಥೆಗಳು, ಆಸಕ್ತ ಬರಹಗಾರರು, ರೈತರು ಮುಂದಾಗಿದ್ದಾರೆ. ಈ ವಿಷಯಗಳ ಬಗೆಗೆ ಚರ್ಚಿಸಲು, ವಿಚಾರ ವಿನಿಮಯ ನಡೆಸಲು ರೈತರನ್ನು ಒಳಗೊಂಡಂತೆ ಹಲವಾರು ಕಮ್ಮಟ, ವಿಚಾರ ಸಂಕಿರಣಗಳು ರಾಜ್ಯಾದ್ಯಂತ ನಡೆಯುತ್ತಿದೆ. ಕನ್ನಡ ಪುಸ್ತಕ ಪ್ರಾಧಿಕಾರವು ಸಹ ಕೃಷಿಸಾಹಿತ್ಯ ಪ್ರಕಟಣೆಗೆ ಮುಂದಾಗಿದೆ. ಅದಕ್ಕೆ ಪೂರ್ವಭಾವಿಯಾಗಿ ಚಿತ್ರದುರ್ಗ ಜಿಲ್ಲೆಯ ಸಾಣೆಹಳ್ಳಿಯಲ್ಲಿ ದೇಸಿ ಕೃಷಿ ಕಮ್ಮಟವನ್ನು ಮೇ ೨೦೦೬ರಲ್ಲಿ ಆಯೋಜಿಸಿತ್ತು. ಆಧುನಿಕ ಬೇಸಾಯದ ಹೊಡೆತಕ್ಕೆ ಸಿಲುಕಿ ಗ್ರಾಮಗಳಲ್ಲಿ ಕೃಷಿ ಸಂಸ್ಕೃತಿ ನಾಶವಾಗುತ್ತಿರುವ ಸಂದರ್ಭದಲ್ಲಿ, ನೆಲಮೂಲ ಜ್ಞಾನದಿಂದ ಜಾಗತೀಕರಣದ ಅಪಾಯವನ್ನು ಎದುರಿಸಲು ಸಾಧ್ಯ ಎಂಬುದು ಆ ಕಮ್ಮಟದ ಆಯೋಜನೆಯ ಹಿಂದಿನ ಉದ್ದೇಶ. 'ಕೃಷಿ ವಿಶ್ವವಿದ್ಯಾನಿಲಯ, ಸಂಶೋಧನಾ ಕೇಂದ್ರಗಳ ತಜ್ಞರು ಬರೆದಿದ್ದೇ ಕೃಷಿ ಸಾಹಿತ್ಯವೆಂದು ವಿಜೃಂಬಿಸುತ್ತಿದೆ. ಆದರೆ ಅವರ ಅನುಭವ ಸೀಮಿತ. ನಾಡಿನ ಬಹುಸಂಖ್ಯಾತರ (ರೈತರ) ಜ್ಞಾನವನ್ನು ಜಗತ್ತಿನಿಂದ ವಂಚಿಸುವಂತೆ ಮಾಡುವುದು ಎಷ್ಟು ಸರಿ? ಕೃಷಿಯ ನಿಜವಾದ ವಾರಸುದಾರರಿಗೆ– ಅಂದರೆ ರೈತರಿಗೆ– ಸಂಶೋಧಕರ ಪ್ರಬಂಧಗಳಿಂದ ಪ್ರಯೋಜನ ಆಗಿದೆಯೇ? ಐವತ್ತು ವರ್ಷಗಳ ಹಿಂದೆ ಸುಖದಿಂದ ಬದುಕುತ್ತಿದ್ದ ರೈತ ಈಗ ಆತ್ಮಹತ್ಯೆಗೆ ಮುಂದಾಗಿದ್ದಾನೆ. ಇಷ್ಟೊಂದು ಸಂಶೋಧನೆ ನಡೆದ ಬಳಿಕವೂ ಜಾಗತೀಕರಣದ ಕಿಡಿ ಸಾಂಪ್ರದಾಯಿಕ ಜ್ಞಾನವನ್ನು ಸುಟ್ಟುಹಾಕುತ್ತಿದೆ. ಈಗಲೇ ಎಚ್ಚೆತ್ತುಕೊಳ್ಳದಿದ್ದರೆ ಮುಂದಿನ ಪೀಳಿಗೆ ಅನುಭವಿಸುವ ಕಷ್ಟಗಳಿಗೆ ನಾವೇ ಹೊಣೆಯಾಗುತ್ತೇವೆ. ಹಾಗಾಗಿ ಪ್ರಾಧಿಕಾರ ಈ ಕೆಲಸಕ್ಕೆ ಮುಂದಾಗಿದೆ' ಎಂದಿದ್ದರು ಪ್ರಾಧಿಕಾರದ ಅಧ್ಯಕ್ಷ ಪ್ರೊ.ಎಸ್.ಜಿ.ಸಿದ್ಧರಾಮಯ್ಯ (ಆನಂದತೀರ್ಥ ಪ್ಯಾಟಿ). ದೇಸಿ ಕೃಷಿ ಜ್ಞಾನವನ್ನು ದಾಖಲಿಸಿ ಪ್ರಕಟಿಸುವ ಉದ್ದೇಶ ಕನ್ನಡ ಪುಸ್ತಕ ಪ್ರಾಧಿಕಾರದ್ದು.

ದೇಸೀ ಜ್ಞಾನವನ್ನು ದಾಖಲಿಸಿ ಸಂರಕ್ಷಿಸುವ ಕಾರ್ಯದ ಹಿಂದಿನ ಉದ್ದೇಶ ಘನವಾದದ್ದೆ. ಜಾಗತೀಕರಣದಿಂದ ನಾವು ಪ್ರತ್ಯೇಕವಾಗಿ ಬದುಕಲು ಸಾಧ್ಯವಿಲ್ಲ. ಆದರೆ ಭಾರತೀಯ ರೈತನಿಗೆ ಸಧ್ಯದ ವಿಶ್ವವಾಣಿಜ್ಯ ಸಂಸ್ಥೆಯ ಒಪ್ಪಂದದಲ್ಲಿ 'ಸಮಾನ ಅವಕಾಶದ ಅಂಕಣ'ವನ್ನು ಒದಗಿಸಿಲ್ಲ (ದ್ವಾರಕೀನಾಥ್. ೨೦೦೬).

ಹಸಿರು ಕ್ರಾಂತಿಗೆ ಹಾದಿ ಮಾಡಿಕೊಟ್ಟ ಆಧುನಿಕ ಕೃಷಿ ಹಲವಾರು ಸಾಮಾಜಿಕ, ಆರ್ಥಿಕ ಹಾಗೂ ಪರಿಸರ ಸಮಸ್ಯೆಗಳನ್ನು ಹುಟ್ಟುಹಾಕಿತು. ಇರುವ ಜಾಗದಲ್ಲಿ ಹೆಚ್ಚು ಹೆಚ್ಚು ಬೆಳೆಯಬೇಕಾಯಿತು. ಭೂಮಿ ತನ್ನ ಸ್ವಾಭಾವಿಕ ಫಲವತ್ತತೆ ಕಳೆದುಕೊಳ್ಳತೊಡಗಿತು. ಫಲವತ್ತತೆ ಹೆಚ್ಚಿಸಲು ರಾಸಾಯನ ಗೊಬ್ಬರಗಳನ್ನು ಬಳಸಬೇಕಾಯಿತು. ಹೊಸ ಹೊಸ ಅಧಿಕ ಇಳುವರಿ ತಳಿಗಳ ಅವಿಷ್ಕಾರ ಮಾಡಬೇಕಾಯಿತು. ಹಾಗೇ ಬೆಳೆಗಳನ್ನು ಕಾಡುವ ರೋಗಗಳು, ಕೀಟಗಳೂ ಸಹ ಹೆಚ್ಚಾಗತೊಡಗಿದವು. ಅವುಗಳನ್ನು ನಿಯಂತ್ರಿಸಲು ಕೀಟನಾಶಕ, ರೋಗನಾಶಕಗಳನ್ನು ಕಂಡುಹಿಡಿಯುಲಾಯಿತು. ಅವುಗಳನ್ನು ಸತತವಾಗಿ ಉಪಯೋಗಿಸಿದಂತೆ ಅವುಗಳನ್ನೂ ಸಹಿಸಿಕೊಳ್ಳುವಂತಹ ಹೊಸ ಹೊಸ ಕೀಟಗಳು, ರೋಗಗಳು ಹುಟ್ಟಿಕೊಳ್ಳತೊಡಗಿದವು. ಹಾಗೇ ಇನ್ನೂ ಹೆಚ್ಚು ಹೆಚ್ಚು ಶಕ್ತಿಯುತ ರಾಸಾಯನಿಕಗಳನ್ನು ಬಳಸಬೇಕಾಗಿ ಬಂತು.

ಇದರಿಂದಾಗಿ ಪರಿಸರದ ಜೀವರಾಶಿಗಳ ಸಮತೋಲನವೇ ಹಾಳಾಗುತ್ತಿದೆ. ರಾಸಾಯನಗಳನ್ನು ಉಪಯೋಗಿಸಿ ಬೆಳೆಸಿದ ಆಹಾರಗಳು ಮನುಷ್ಯನಲ್ಲಿ ಹಲವಾರು ರೋಗಗಳನ್ನುಂಟು ಮಾಡುತ್ತವೆ. ಪರಿಸರವೇ ವಿಷಪೂರಿತವಾಗುತ್ತಿದೆ. ಹೊಸ ತಳಿಗಳನ್ನು ಉಪಯೋಗಿಸಿ ಬೇಸಾಯ ಮಾಡಬೇಕಾದಲ್ಲಿ ರಸಗೊಬ್ಬರ, ರಾಸಾಯನಗಳನ್ನು ಉಪಯೋಗಿಸಲೇಬೇಕಾದ ಅನಿವಾರ್ಯ ಪರಿಸ್ಥಿತಿ ಬಂದೊದಗಿದೆ.

ಕೃಷಿಯಲ್ಲಿ ಮನುಷ್ಯ ಪ್ರಕೃತಿಯೊಂದಿಗೆ ಸಹಕರಿಸಬೇಕೇ ಹೊರತು ಅದನ್ನು 'ಜಯಿಸಿ' ಇನ್ನೂ 'ಅಭಿವೃದ್ಧಿ'ಪಡಿಸುವುದರ ಮೂಲಕವಲ್ಲ. ಗಿಡಮರ ಬೆಳೆಯುವುದನ್ನು ಯಾರೂ ಪ್ರಕೃತಿಗೆ ಹೇಳಿಕೊಡುವುದಿಲ್ಲ. ಪ್ರಕೃತಿಯಲ್ಲಿನ ಜೀವರಾಶಿ ಒಂದಕ್ಕೊಂದು ಸಹಕರಿಸಿಕೊಂಡು ಬದುಕಬಲ್ಲವು. ಪ್ರಕೃತಿಯೇ ಮಾಡುವ ಗಿಡಮರಗಳ ಬಿತ್ತನೆ ಅಷ್ಟು ಸುಲಭವಾಗಿ ರೋಗರುಜಿನಗಳಿಗೆ ತುತ್ತಾಗುವಷ್ಟು ದುರ್ಬಲವಾಗಿರುವುದಿಲ್ಲ. ಬಹಳಷ್ಟು ಗಿಡಮರಗಳು ರೋಗನಿಯಂತ್ರಣ ರಾಸಾಯನಗಳನ್ನು ತಾವೇ ಉತ್ಪಾದಿಸುತ್ತವೆ. ಈ ಆಲೋಚನೆಯನ್ನು ಪ್ರತಿಪಾದಿಸುವ ವಿಜ್ಞಾನವನ್ನೇ ಗುಮಾನಿಯಿಂದ ನೋಡುವ ಜಪಾನಿನ ವಿಜ್ಞಾನಿಯಾದ ಮಸಾನೊಬು ಫುಕುವೋಕರ ಸಹಜ ಕೃಷಿಯ ಬಗೆಗೆ ಕನ್ನಡದಲ್ಲಿ ೧೯೮೮ರಲ್ಲಿ ಪ್ರಕಟವಾಯಿತು (ಬಾಲಕೃಷ್ಣ, ೧೯೮೮). ಈ ಸಹಜ ಕೃಷಿಯ ವಿಧಾನವನ್ನು 'ಋಷಿ ಬೇಸಾಯ' ಎಂತಲೂ ಕರೆಯುತ್ತಾರೆ. ಕೆಲವರು ಅದನ್ನು 'ಕೆಲಸವೇ ಇಲ್ಲದ ಕೃಷಿ'(ಡೂ ನಥಿಂಗ್ ಫಾರ್ಮಿಂಗ್) ಎನ್ನುತ್ತಾರೆ. ಫುಕುವೋಕ ಅದನ್ನು 'ಗಾಂಧಿ ವಿಧಾನ' ಎಂದೂ ಕರೆದಿದ್ದಾರೆ. ಜಪಾನಿ ಭಾಷೆಯಿಂದ ಇಂಗ್ಲಿಶಿಗೆ ಅನುವಾದಗೊಂಡು ಪ್ರಕಟವಾಗಿದ್ದ ಫುಕುವೋಕಾರ **'ದ ಒನ್ ಸ್ಟ್ರಾ ರೆವೊಲ್ಯೂಶನ್'** ಕೃತಿಯನ್ನು ಸಂತೋಷ್ ಕೌಲಗಿ ಕನ್ನಡಕ್ಕೆ ಅನುವಾದಿಸಿ **'ಒಂದು ಹುಲ್ಲಿನ ಕ್ರಾಂತಿ'**ಯ ಹೆಸರಿನಲ್ಲಿ ಪ್ರಕಟಿಸಿದರು. ಪೂರ್ಣಚಂದ್ರ

ತೇಜಸ್ವಿಯವರು **'ಸಹಜ ಕೃಷಿ ಪರಿಚಯ'**ದಲ್ಲಿ ಫುಕುವೊಕಾರ ತತ್ವಗಳನ್ನು ಕನ್ನಡಕ್ಕೆ ತಂದರು.

ಇಂದು ಕರ್ನಾಟಕದ ಬಹುಪಾಲು ಎಲ್ಲ ರೈತರಿಗೂ ಸಾವಯವ ಕೃಷಿಯ ಬಗ್ಗೆ ಹೆಚ್ಚೆಚ್ಚು ಅರಿವು ಮೂಡುತ್ತಿದೆ. ಇಂದು ವಿಶ್ವವಿದ್ಯಾನಿಲಯಗಳು, ಸರ್ಕಾರದ ಇಲಾಖೆಗಳು, ಹಲವಾರು ಸ್ವಯಂ ಸೇವಾ ಸಂಸ್ಥೆಗಳು ಸಾವಯವ ಕೃಷಿಯನ್ನು ಅನುಸರಿಸುವಂತೆ ಹೇಳುತ್ತಿವೆ. ಸಾವಯವ ಗೊಬ್ಬರಗಳ ಪ್ರಾಮುಖ್ಯತೆಯ ಬಗ್ಗೆ ೧೯೪೯ರಷ್ಟು ಹಿಂದೆಯೇ ಗೋವಿಂದರಾಜನ್ (೧೯೪೯) ಎಂಬ ಕೃಷಿ ಅಧಿಕಾರಿ ಬರೆದಿದ್ದರು. ವಿರೋಧಿ ಸಂವತ್ಸರದ (೧೯೪೯-೧೯೫೦) **'ಮೈಸೂರು ವ್ಯವಸಾಯದ ಪಂಚಾಂಗ'**ದ ಸಂಚಿಕೆಯ 'ಸಾವಯವ ಗೊಬ್ಬರಗಳು' ಎಂಬ ಲೇಖನದಲ್ಲಿ,

> **ಜಮೀನಿನ ಫಲವತ್ತನ್ನು ಸತತವಾಗಿ ಕಾಪಾಡಿಕೊಂಡು ಬರುವುದಕ್ಕೆ ಸಾವಯವ ಗೊಬ್ಬರಗಳನ್ನು ಉಪಯೋಗಿಸುವುದು ಎಷ್ಟು ಮುಖ್ಯವೆಂಬುದು ನಮ್ಮ ರೈತರಿಗೆ ಇನ್ನೂ ಅಷ್ಟು ಮಂದಟ್ಟಾಗಿಲ್ಲ. ಅವನ್ನೇ ಹಾಕುತ್ತಿದ್ದರೆ ಜಮೀನು ಬೀಳಾಗುವುದು ನಿಜ. ಸಾವಯವ ಗೊಬ್ಬರಗಳು ಹಾಗಲ್ಲ; ಅವುಗಳ ಪ್ರಯೋಜನ ಸ್ವಲ್ಪ ಫಲವತ್ತನ್ನು ಕೂಡಿಸಿಕೊಡುತ್ತದೆ. ಸಸ್ಯಗಳಿಗೆ ಆಹಾರವನ್ನು ಕೂಡಿಸಿ, ಫಲವತ್ತನ್ನು ಬೆಳೆಸುವುದರಲ್ಲಿ ಕೇಂದ್ರಪಾತ್ರವನ್ನು ವಹಿಸುವ ಈ ಸಾವಯವಾಂಶಕ್ಕೆ 'ಹ್ಯೂಮಸ್' ಎಂದು ಹೆಸರು**

ಎಂದು ಬರೆದಿದ್ದಾರೆ. ಹಸಿರು ಕ್ರಾಂತಿಯ ಬಗ್ಗೆ ಕೊಂಚ ತಡವಾಗಿಯಾದರೂ ಹತಾಶನಾದ ರೈತ ಬದಲಿ ವಿಧಾನಗಳನ್ನು ಹಾಗೂ ಜ್ಞಾನ ವಿನಿಮಯದ ಮಾಧ್ಯಮಗಳನ್ನು ಅರಸತೊಡಗಿದ್ದಾನೆ. ಇಂದು ವಿಶ್ವದಾದ್ಯಂತ ಚಾಲ್ತಿಯಲ್ಲಿರುವ ಬದಲಿ ಕೃಷಿ ವಿಧಾನಗಳು ಬಹುಪಾಲು ಈ ಮುಂದಿನ ಅಂಶಗಳನ್ನು ಒಳಗೊಂಡಿರುತ್ತವೆ:

೧. ಪರಿಸರ ಸ್ನೇಹಿ ಮತ್ತು ಸುಸ್ಥಿರ ವಿಧಾನಗಳು.
೨. ನಿರ್ದಿಷ್ಟ ಭೌಗೋಳಿಕ ಪರಿಸರದ ರೈತರ ಅನಿಸಿಕೆ ಮತ್ತು ಅನುಭವಗಳಿಗೆ ಆದ್ಯತೆ ಮತ್ತು
೩. ಕೃಷಿಯ ಬಗೆಗೆ ಹೋಲಿಸ್ಟಿಕ್ ಅಪ್ರೋಚ್.

ಸಾವಯವ ಕೃಷಿ ಇಂದು ದೊಡ್ಡ ಉದ್ಯಮವಾಗಿ ಬೆಳೆಯುತ್ತಿದೆ. ಸುಸ್ಥಿರ ಕೃಷಿ, ಸಾವಯವ ಕೃಷಿ, ಪರಿಸರ ಸ್ನೇಹಿ ಕೃಷಿಯ ಹೆಸರಿನಲ್ಲಿ ಬಹಳಷ್ಟು ಸಾಹಿತ್ಯ ಪ್ರಕಟವಾಗುತ್ತಿದೆ. ಈ ಎಲ್ಲ ಪ್ರಯೋಗಗಳನ್ನು ನಡೆಸುತ್ತಿರುವಂತಹ ಶಿವನಂಜಯ್ಯ ಬಾಳೆಕಾಯಿ, ಭರಮಪ್ಪ ಗೌಡ್ರು ಮತ್ತು ನಾರಾಯಣರೆಡ್ಡಿಯಂತಹ ಬಹಳಷ್ಟು ರೈತರು ಸಹ ಕೃಷಿಸಾಹಿತ್ಯ ರಚನೆಗೆ ಕೈಹಾಕಿ ತಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತಿದ್ದಾರೆ.

ನಾರಾಯಣರೆಡ್ಡಿಯವರು 'ಲೀಸಾ' ಎನ್ನುವ ಕೃಷಿ ಸಂಬಂಧಿ ಇಂಗ್ಲಿಶ್ ಮಾಸಪತ್ರಿಕೆಯಲ್ಲಿ ನಿಯತವಾಗಿ ಅಂಕಣವೊಂದನ್ನು ಬರೆಯುತ್ತಿದ್ದಾರೆ. ಶಿವನಂಜಯ್ಯ ಮತ್ತು ಭರಮಪ್ಪ ಗೌಡ್ರು ಕೃಷಿ ಸಂಬಂಧಿ ವಿಚಾರ ಸಂಕಿರಣಗಳಲ್ಲಿ ಕಾರ್ಯಾಗಾರಗಳಲ್ಲಿ ಭಾಗವಹಿಸಿ ತಮ್ಮ ನಿಲುವುಗಳನ್ನು ದಿಟ್ಟತನದಿಂದ ವ್ಯಕ್ತಗೊಳಿಸುತ್ತಾರೆ ಹಾಗೂ ಪತ್ರಿಕೆಗಳಿಗೆ ಪತ್ರಗಳನ್ನು ಬರೆಯುತ್ತಾರೆ. ಈ ಹೊಸ ವಿಚಾರಗಳ ಪರಿಸರ ಸ್ನೇಹಿ ಹಾಗೂ ಸುಸ್ಥಿರ ಕೃಷಿ ಯಾವ್ಯಾವ ಅಂಶಗಳನ್ನು ಒಳಗೊಂಡಿರಬೇಕೆಂಬುದನ್ನು (ಶಿವನಂಜಯ್ಯ, ೨೦೦೨) ಈ ಮುಂದೆ ನೀಡಲಾಗಿದೆ:

೧. ಕೃಷಿಕನ ಬದುಕಿಗೆ ಬೆಸೆದುಕೊಂಡು, ಜೀವನ ವಿಧಾನವಾಗಬೇಕು.

೨. ರೈತನನ್ನು ಪರಾವಲಂಬಿಯಾಗಿಸದೆ, ಸ್ವಾವಲಂಬಿಯಾಗಿಸಬೇಕು.

೩. ಕೃಷಿ ಒಳಸುರಿಗಳು ರೈತನ ಉತ್ಪನ್ನಗಳೇ ಆಗಿದ್ದು, ಎಲ್ಲರ ಕೈಗೆ ಎಟುಕುವಂತಿರಬೇಕು, ಯಾವುದನ್ನೂ ಮಾರುಕಟ್ಟೆಯಿಂದ ಹಣತೆತ್ತು ಕೊಂಡುತರಬಾರದು.

೪. ಕಡಿಮೆ ಬಂಡವಾಳ ಬೇಡುವ, ಕಡಿಮೆ ಖರ್ಚಿನ ಕ್ರಮವಾಗಿದ್ದು ಕೃಷಿ ಉತ್ಪನ್ನಗಳಿಗೆ ಪ್ರತೀಕೂಲ ಮಾರುಕಟ್ಟೆ ಬೆಲೆಗಳ ನಡುವೆಯೂ, ಆರ್ಥಿಕವಾಗಿ ರೈತನನ್ನು ದಿವಾಳಿ ಎಬ್ಬಿಸಬಾರದು.

೫. ಕೃಷಿ ಹೆಣಭಾರದ ಕೆಲಸವಾಗದೆ, ಕ್ರೀಡೆಯಂತಿರಬೇಕು. 'ಬೇಸಾಯ ಮನೆಮಂದಿಯೆಲ್ಲ ಸಾಯ' ಎನ್ನುವ ಗಾದೆಮಾತಿಗೆ ಅಪವಾದವಾಗಿರಬೇಕು.

೬. ಹಸಿದ ಎಲ್ಲ ಹೊಟ್ಟೆಗಳಿಗೆ 'ನೈಜ' ಆಹಾರ ನೀಡಬೇಕು. ಈಗಿರುವಂತೆ ವಿಷ ಉಣಿಸಬಾರದು.

೭. ಹಿಗ್ಗುತ್ತಿರುವ ಜನಸಂಖ್ಯೆ, ವಿಸ್ತರಿಸುತ್ತಿರುವ ಕೈಗಾರಿಕೆಗಳಿಂದಾಗಿ, ಕುಗ್ಗುತ್ತಲೇ ನಡೆದಿರುವ ಕೃಷಿ ಭೂಮಿಯಲ್ಲಿಯೇ, ಲಭ್ಯವಿರುವ ಪ್ರಾಕೃತಿಕ ಸಂಪನ್ಮೂಲಗಳಾದ ಪ್ರತಿಹನಿನೀರು, ಪ್ರತಿ ಸೂರ್ಯರಶ್ಮಿ ಮತ್ತು ಪ್ರತಿ ಅಂಗುಲ ಮಣ್ಣನ್ನು ಸಂಪೂರ್ಣವಾಗಿ ದುಡಿಸಿಕೊಂಡು ಗರಿಷ್ಠ ಪ್ರಮಾಣದ ಉತ್ಪಾದನೆ ಪಡೆಯುವಂತಿರಬೇಕು.

೮. ಈ ಭೂಮಿಯಲ್ಲಿ ಎಲ್ಲ ಜೀವಜಂತುಗಳಿಗೂ ನಮ್ಮಂತೆಯೇ ಬದುಕಿ ಬಾಳುವ ಹಕ್ಕಿದೆ. ಇವುಗಳ ಅಸ್ತಿತ್ವದ ಮೇಲೆ ಆಕ್ರಮಣ ಮಾಡದೆ, ಸಾಧ್ಯವಿರುವ ಎಲ್ಲವನ್ನೂ ಬಳಸುತ್ತ ಸಹಕಾರ ತತ್ವದ ಆಧಾರದ ಮೇಲೆ ಕೃಷಿ ಮಾಡಬೇಕು.

೯. ಪ್ರಕೃತಿ ವೈವಿಧ್ಯಮಯ, ಸಹಕಾರ ಇದರ ಉಸಿರು. ಹಸಿರು ಇದರ ಜೀವ. ಇವೆಲ್ಲವನ್ನೂ ಉಳಿಸುತ್ತ, ಬೆಳೆಸುತ್ತ ಬೆಳೆತೆಗೆಯುವ ಕೃಷಿ ನಮ್ಮದಿರಬೇಕು.

೧೦. ಎಲ್ಲಕ್ಕಿಂತ ಮಿಗಿಲಾಗಿ ಮಾನವ ಪ್ರಾಣಿಯ ರಾಕ್ಷಸಿ ಪ್ರವೃತ್ತಿಗೆ ಸಂಸ್ಕಾರನೀಡಿ ಅವನನ್ನು ಸಾತ್ವಿಕ 'ಮಾನವ'ನನ್ನಾಗಿ ಪರಿವರ್ತಿಸುವಂತಿರಬೇಕು.

**೪.೪.೩.೨. ಜೀವತಂತ್ರಜ್ಞಾನ ಮತ್ತು ಕೃಷಿ**

ಜೀವತಂತ್ರಜ್ಞಾನ ಇಂದು ಬದುಕಿನ ಪ್ರತಿ ರಂಗದಲ್ಲೂ ಹಾಸುಹೊಕ್ಕಾಗುತ್ತಿದೆ. ಕೃಷಿ, ಪಶುವೈದ್ಯಕೀಯ ಮತ್ತು ವೈದ್ಯಕೀಯ ಕ್ಷೇತ್ರಗಳಲ್ಲಿ ಇದರ ಪಾತ್ರ ಮಹತ್ತರವಾದುದು. ಹಸಿರುಕ್ರಾಂತಿಯಿಂದಾದ ಇಳುವರಿಯ ಲಾಭಗಳು ಕ್ಷಣಿಕವಾಗಿದ್ದು ಅದರಿಂದ ಹಲವಾರು ಪರಿಸರ, ಸಾಂಸ್ಕೃತಿಕ, ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳುಂಟಾದುವು. ೧೯೮೦ರ ದಶಕದಿಂದೀಚೆಗೆ ಜೀವತಂತ್ರಜ್ಞಾನ ಕ್ಷೇತ್ರದಲ್ಲಿ ಉಂಟಾಗಿರುವ ಮಹತ್ತರ ಅಭಿವೃದ್ಧಿಗಳಿಂದಾಗಿ ಇಂದು ಹೆಚ್ಚುತ್ತಿರುವ ಜನಸಂಖ್ಯೆಗೆ ಆಹಾರ ಒದಗಿಸಲು, ಲಭ್ಯವಿರುವ ಸಂಪನ್ಮೂಲಗಳಿಂದಲೇ ಹೆಚ್ಚುಹೆಚ್ಚು ಉತ್ಪಾದಿಸಲು ಜೀವತಂತ್ರಜ್ಞಾನದಿಂದಲೇ ಸಾಧ್ಯ ಎನ್ನುವ ಮಾತೂ ಕೇಳಿಬರುತ್ತಿದೆ. ಕುಲಾಂತರಿ ಸಸ್ಯಗಳನ್ನು ಹಾಗೂ 'ಟರ್ಮಿನೇಟರ್' ತಂತ್ರಜ್ಞಾನವನ್ನು ಪರಿಚಯಿಸುವ ಲೇಖನ 'ಸುಧಾ' ವಾರಪತ್ರಿಕೆಯಲ್ಲಿ ಮೊದಲಿಗೆ ನಾಗೇಶ್ ಹೆಗಡೆ ಬರೆದರು. ಬಿ.ಟಿ. ಹತ್ತಿಯನ್ನು ಪರಿಚಯಿಸಿದ ನಂತರ ಕರ್ನಾಟಕ ರೈತ ಸಂಘ ರೈತರಲ್ಲಿ ಅದರ ಅಪಾಯಗಳ ಬಗೆಗೆ ರೈತರಲ್ಲಿ ಅರಿವು ಮೂಡಿಸಲು ಸಾಕಷ್ಟು ಕರಪತ್ರಗಳನ್ನು ತಂದಿತು. ಅಲ್ಲದೆ ಜೀವತಂತ್ರಜ್ಞಾನ ಕೆಲವೇ ವಿದೇಶೀ ಕಂಪೆನಿಗಳ ನಿಯಂತ್ರಣದಲ್ಲಿದ್ದು ರೈತರು ಪ್ರತಿ ಬೆಳೆಯ ಬಿತ್ತನೆಯನ್ನು ಆ ವಿದೇಶೀ ಕಂಪೆನಿಗಳಿಂದ ಹಾಗೂ ಅವರು ಹೇಳಿದ ಬೆಲೆಯಲ್ಲೇ ಕೊಂಡುತರಬೇಕಾಗುತ್ತದೆಂದು ೧೯೯೦ರಿಂದೀಚೆಗೆ ಕರ್ನಾಟಕ ರಾಜ್ಯ ರೈತ ಸಂಘದ ಪ್ರೊ.ನಂಜುಂಡಸ್ವಾಮಿಯವರು ಹೊಸ ಕೃಷಿ ನೀತಿಯ ಮೇಲೆ ಹಾಗೂ ಕಾರ್ಗಿಲ್ ಮತ್ತು ನಂತರದ ಮಾನ್ಸಾಂಟೋ ಕಂಪೆನಿಗಳ ಮೇಲೆ ದಾಳಿ ನಡೆಸಿದರು. ಹೊಲಗಳಲ್ಲಿ ಬೆಳೆದು ನಿಂತಿದ್ದ ಬಿ.ಟಿ. ಹತ್ತಿಯನ್ನು ಸುಟ್ಟುಹಾಕಿದರು (ಪಾಣಿನಿ, ೧೯೯೯).

ಇಷ್ಟೆಲ್ಲಾ ಆದರೂ ಜೀವತಂತ್ರಜ್ಞಾನವನ್ನು, ಅದರ ತಾಂತ್ರಿಕತೆಯನ್ನು ರೈತರಿಗೆ ಪರಿಚಯಿಸುವ ಅಲ್ಲೊಂದು ಇಲ್ಲೊಂದು ಲೇಖನಗಳು ಪತ್ರಿಕೆಯಲ್ಲಿ ಪ್ರಕಟವಾಗಿವೆಯೇ ಹೊರತು ವಿಜ್ಞಾನ ಸಾಹಿತ್ಯ ಕೃತಿ ಕನ್ನಡದಲ್ಲಿ ಪ್ರಕಟವಾಗಿಲ್ಲ. ಈ ದಿಸೆಯಲ್ಲಿ ಕೃಷಿ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗವು **ಜೀವತಂತ್ರಜ್ಞಾನ ಅರ್ಥವಿವರಣಾ ಕೋಶ (ಇಂಗ್ಲಿಷ್-ಕನ್ನಡ)**ವೊಂದನ್ನು ಪ್ರಕಟಿಸಿದೆ (ಜಿ.ಬಾಲಕೃಷ್ಣ, ೨೦೦೪).

### ೪.೫. ಕನ್ನಡದಲ್ಲಿ ಕೃಷಿ ಪತ್ರಿಕೆಗಳು

ಕೋಲ್ಮನ್‌ರವರು ೧೯೧೮ರಲ್ಲಿ ಪ್ರಾರಂಭಿಸಿ ಮೈಸೂರು ವ್ಯವಸಾಯ ಶೋಧಕ ಸಂಘವು ಹೊರತಂದ **'ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ'** ಕನ್ನಡದ ಮೊಟ್ಟ ಮೊದಲ ಕೃಷಿ ನಿಯತಕಾಲಿಕ. ಮೈಸೂರು ವ್ಯವಸಾಯ ಶೋಧಕ ಸಂಘವು ೧೯೫೪ರಲ್ಲಿ ಕರ್ನಾಟಕ ಪ್ರದೇಶ ಕೃಷಿಕ ಸಮಾಜದೊಂದಿಗೆ ವಿಲೀನವಾಗಿ **ಕರ್ನಾಟಕ ವ್ಯವಸಾಯ ಪತ್ರಿಕೆ**ಯಾಗಿ ನಿರಂತರವಾಗಿ ಪ್ರಕಟವಾಗುತ್ತಿದೆ.

ಇತರ ರಾಷ್ಟ್ರಗಳಿಗೆ ಹೋಲಿಸಿದಲ್ಲಿ ಭಾರತದಲ್ಲಿ ಕೃಷಿ ಪತ್ರಿಕೋದ್ಯಮ ಒಂದು ಬೃಹತ್ ಉದ್ಯಮವಾಗಿ ನೆಲೆಯೂರಿದೆ. ಇಂದು ಕನ್ನಡದಲ್ಲಿ ೧೭ರಿಂದ ೨೫ ಕೃಷಿ ಪತ್ರಿಕೆಗಳಿವೆ. ನಾಯಿಕೊಡೆಗಳಂತೆ ಕೃಷಿ ಪತ್ರಿಕೆಗಳು ಹುಟ್ಟಿಕೊಳ್ಳುತ್ತವೆ ಹಾಗೂ ಕೆಲಸಮಯದ ನಂತರ ಹಾಗೆಯೇ ಕಣ್ಮರೆಯಾಗುತ್ತವೆ. ಪ್ರಕಟವಾಗುತ್ತಿರುವ ಕೃಷಿ ಪತ್ರಿಕೆಗಳಲ್ಲಿ ೬ ಮಾತ್ರ ೫೦೦೦ಕ್ಕಿಂತ ಹೆಚ್ಚಿನ ಪ್ರತಿಗಳನ್ನು, ೬ ಪತ್ರಿಕೆಗಳು ೨೦೦೦-೫೦೦೦ ಪ್ರತಿಗಳನ್ನು ಹಾಗೂ ಇನ್ನುಳಿದವು ೨೦೦೦ಕ್ಕಿಂತ ಕಡಿಮೆ ಪ್ರತಿಗಳನ್ನು ಮುದ್ರಿಸುತ್ತವೆ. ಕೃಷಿ ವಿಶ್ವವಿದ್ಯಾನಿಲಯಗಳು, ಸರ್ಕಾರಿ ಮತ್ತು ಅರೆ ಸರ್ಕಾರಿ ಸಂಸ್ಥೆಗಳು, ಹಲವಾರು ಖಾಸಗಿ ಸಂಸ್ಥೆಗಳು, ಸ್ವಯಂಸೇವಾ ಸಂಸ್ಥೆಗಳು ಕೃಷಿ ಪತ್ರಿಕೆಗಳನ್ನು ಪ್ರಕಟಿಸುತ್ತಿವೆ. ಪ್ರಸ್ತುತ ಪ್ರಕಟವಾಗುತ್ತಿರುವ ಪ್ರಮುಖ ಕೃಷಿ ಪತ್ರಿಕೆಗಳನ್ನು ಕೋಷ್ಟಕ ೭ರಲ್ಲಿ ಹಾಗೂ ಕೆಲವು ಪತ್ರಿಕೆಗಳ ಚಿತ್ರಗಳನ್ನು ಚಿತ್ರ ೫ ಮತ್ತು ೬ರಲ್ಲಿ ಕೊಡಲಾಗಿದೆ.

ಕೃಷಿಯ ಆಧುನೀಕರಣ ಮತ್ತು ಜಾಗತೀಕರಣದಿಂದಾಗಿ ಹಲವಾರು ಕೃಷಿಯ ಪೂರಕ ಉದ್ದಿಮೆಗಳು ಹುಟ್ಟಿಕೊಳ್ಳುತ್ತಿವೆ. ಈ ಎಲ್ಲ ಅವಕಾಶಗಳಿಂದಾಗಿ ಜಾಹೀರಾತಿನಿಂದ ಸಿಗುವ ಆದಾಯವೂ ಸಹ ಗಣನೀಯವಾಗಿರುವುದರಿಂದ 'ವ್ಯಾಪಾರೀ' ಕೃಷಿ ಪತ್ರಿಕೆಗಳು ಪ್ರಕಟವಾಗುತ್ತಿವೆ. ಅವುಗಳ ಉದ್ದೇಶ ರೈತರಿಗೆ ಯಾವುದೇ ಮಾಹಿತಿ ಅಥವಾ ತಿಳಿವಳಿಕೆ ನೀಡುವುದಲ್ಲ. ಬದಲಿಗೆ ಜಾಹೀರಾತುಗಳನ್ನು ಪ್ರಕಟಿಸಿ ಹಣ ಸಂಪಾದಿಸಿಕೊಳ್ಳುವುದೇ ಆಗಿದೆ. ಕನ್ನಡ ಬಾರದವರೂ ಸಹ ಕನ್ನಡ ಕೃಷಿ ಪತ್ರಿಕೆಗಳ ಸಂಪಾದಕರಾಗಿದ್ದಾರೆ ಹಾಗೂ ನೆರೆಹೊರೆಯ ರಾಜ್ಯಗಳಿಂದಲೂ ಸಹ ಕನ್ನಡ ಕೃಷಿ ಪತ್ರಿಕೆಗಳು ಪ್ರಕಟವಾಗುತ್ತಿವೆ.




ಚಿತ್ರ ೫: ಕನ್ನಡದ ಕೆಲವು ಕೃಷಿ ಪತ್ರಿಕೆಗಳು




ಚಿತ್ರ ೬: ಕನ್ನಡದ ಕೆಲವು ಕೃಷಿ ಪತ್ರಿಕೆಗಳು

ಕೋಷ್ಟಕ ೭: ಕನ್ನಡದ ಕೆಲವು ಪ್ರಮುಖ ಕೃಷಿ ಪತ್ರಿಕೆಗಳು

| ಕ್ರಸಂ. | ಪತ್ರಿಕೆ | ನಿಯತಕಾಲಿಕತೆ | ಪ್ರಕಾಶಕರು |
|---|---|---|---|
| ೧ | ೨ | ೩ | ೪ |
| ೧. | ಕೃಷಿ ವಿಜ್ಞಾನ | ತ್ರೈಮಾಸಿಕ | ಕೃಷಿ ವಿ.ವಿ., ಬೆಂಗಳೂರು. |
| ೨. | ಕೃಷಿ ಮುನ್ನಡೆ, | ತ್ರೈಮಾಸಿಕ | ಕೃಷಿ ವಿ.ವಿ., ಧಾರವಾಡ |
| ೩. | ಜಲ ಸಂವರ್ಧನೆ ವಾರ್ತಾಪತ್ರ | ಮಾಸಿಕ | ಜಲಸಂವರ್ಧನೆ ಯೋಜನಾ ಸಂಘ, ಬೆಂಗಳೂರು. |
| ೪. | ಸ್ಪೈಸ್ ಇಂಡಿಯ, | ಮಾಸಿಕ, | ಸ್ಪೈಸ್ ಮಂಡಳಿ, ಎರ್ನಾಕುಲಂ. |
| ೫. | ಕರ್ನಾಟಕ ವ್ಯವಸಾಯ ಪತ್ರಿಕೆ (ಮೊದಲಿಗೆ ಮೈಸೂರು ವ್ಯವಸಾಯ ಶೋಧಕರ ಸಂಘದ ಪತ್ರಿಕೆ) | ಮಾಸಿಕ | ಕರ್ನಾಟಕ ಪ್ರದೇಶ ಕೃಷಿಕ ಸಮಾಜ, ಬೆಂಗಳೂರು |
| ೬. | ಅಡಿಕೆ ಪತ್ರಿಕೆ | ಮಾಸಿಕ | ಫಾರ್ಮರ್ಸ್ ಫಸ್ಟ್ ಟ್ರಸ್ಟ್, ಪುತ್ತೂರು. |
| ೭. | ಸುಜಾತ ಸಂಚಿಕೆ, | ಮಾಸಿಕ, | ಮಂಗಳೂರು. |
| ೮. | ಹಿತ್ತಲಗಿಡ | ಚಾತುರ್ಮಾಸಿಕ | ಬೆಂಗಳೂರು. |
| ೯. | ವಾಯ್ಸ್ ಆಫ್ ಫಾರ್ಮರ್ | ಮಾಸಿಕ | ಬೆಂಗಳೂರು. |
| ೧೦. | ಮೇಟಿ ವಿದ್ಯೆ | ತ್ರೈಮಾಸಿಕ | ಬೆಂಗಳೂರು. |
| ೧೧. | ಕೃಷಿ ಬೆಳಕು | ದ್ವೈಮಾಸಿಕ | ತರೀಕೆರೆ. |
| ೧೨. | ಇಂಡಿಯನ್ ಕಾಫಿ | ಮಾಸಿಕ | ಕಾಫಿ ಮಂಡಳಿ, ಬೆಂಗಳೂರು. |
| ೧೩. | ಕೃಷಿಕ ಬಂಧು, | ಮಾಸಿಕ | ವಸುಂಧರಾ ಪಬ್ಲಿಕೇಷನ್ಸ್, ಹೈದರಾಬಾದ್. |
| ೧೪. | ಕ್ಷೀರಸಾಗರ | ಮಾಸಿಕ, | ಕರ್ನಾಟಕ ಸಹಕಾರ ಹಾಲು ಉತ್ಪಾದಕರ ಮಂಡಳಿ, ಬೆಂಗಳೂರು. |

ಕೋಷ್ಟಕ ಮುಂದುವರಿದಿದೆ

| ೧ | ೨ | ೩ | ೪ |
|---|---|---|---|
| ೧೫. | **ಐಶ್ವರ್ಯ ಕನ್ನಡನಾಡು** | ಮಾಸ ಪತ್ರಿಕೆ | ವಡಮಲೈ ಮೀಡಿಯ ಪ್ರೈ ಲಿ., ಬೆಂಗಳೂರು. |
| ೧೬. | **ಆಗ್ರೋ ಇಂಡಿಯಾ** | ತ್ರೈಮಾಸಿಕ | ಬೆಂಗಳೂರು. |
| ೧೭. | **ಸಹಜ ಸಾಗುವಳಿ** | ದ್ವೈಮಾಸಿಕ | ಸಾಂಸ್ಕೃತಿಕ ಸಂಶೋಧನೆ ಮತ್ತು ಕ್ರಿಯಾ ಸಂಸ್ಥೆ, ಬೆಂಗಳೂರು. |
| ೧೮. | **ರೇಷ್ಮೆ ದರ್ಪಣ** | ತ್ರೈಮಾಸಿಕ | ಕರ್ನಾಟಕ ರಾಜ್ಯ ರೇಷ್ಮೆ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆ, ಬೆಂಗಳೂರು. |
| ೧೯. | **ಕೃಷಿ ಪೇಟೆ** | ಮಾಸಿಕ | ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ, ಹುಬ್ಬಳ್ಳಿ |

ಪುತ್ತೂರಿನ 'ಫಾರ್ಮರ್ಸ್ ಫಸ್ಟ್' ಎಂಬ ಟ್ರಸ್ಟ್ 'ಕೃಷಿಕರ ಕೈಗೆ ಲೇಖನಿ' ಎಂಬ ಶಿಬಿರಗಳನ್ನು ನಡೆಸಿ ರೈತರೇ ಕೃಷಿ ಬರಹಗಳನ್ನು ಬರೆಯುವಂತೆ ಉತ್ತೇಜಿಸುತ್ತದೆ. 'ಫಾರ್ಮರ್ಸ್ ಫಸ್ಟ್'ನ ಅಧ್ಯಯನದಂತೆ (೧೯೯೫), ವಿಜ್ಞಾನ ಬರಹಗಾರರಾದ ಪೂರ್ಣಚಂದ್ರ ತೇಜಸ್ವಿಯವರು (೧೯೯೫) ಹಾಗೂ ಚನ್ನೇಶ್ (೨೦೦೪) ಮತ್ತು ಬದಲಿ ಕೃಷಿ ಮಾಧ್ಯಮ ಕೇಂದ್ರದ ನಿರ್ದೇಶಕರಾಗಿರುವ ಶಿವರಾಂ ಪೈಲೂರರ (೨೦೦೫) ಕನ್ನಡ ಕೃಷಿ ಪತ್ರಿಕೆಗಳ ಅವಲೋಕನದಂತೆ ಈ ಮುಂದಿನ ಅಂಶಗಳನ್ನು ಗಮನಿಸಬೇಕಾಗಿದೆ:

೧. ಬಹುಪಾಲು ಕೃಷಿ ಪತ್ರಿಕೆಗಳು ರೈತರಿಗೆ ಅವಶ್ಯಕವಿರುವ ಮಾಹಿತಿಯನ್ನು ಒದಗಿಸುವುದಿಲ್ಲ.

೨. ಕೃಷಿ ಪತ್ರಿಕೆಗಳಲ್ಲಿ ವಿವರಿಸಿರುವ ಕೃಷಿ ಪದ್ಧತಿ ಅಥವಾ ವಿಧಾನಗಳನ್ನು ರೈತರ ಹೊಲಗದ್ದೆಗಳಲ್ಲಿ ಪರೀಕ್ಷಿಸಿರುವುದಿಲ್ಲ.

೩. ಬಹುಪಾಲು ಲೇಖನಗಳು ಯಾವುದೋ ಇಂಗ್ಲಿಶ್ ಲೇಖನದ ಅನುವಾದಗಳಾಗಿರುತ್ತವೆ ಅಥವಾ ವಿಶ್ವವಿದ್ಯಾನಿಲಯದ ಅಧ್ಯಾಪಕರು ಮತ್ತು ವಿಜ್ಞಾನಿಗಳು ಒಂದೆರಡು ಲೇಖನಗಳು ಪ್ರಕಟವಾದಲ್ಲಿ ತಮ್ಮ ಪದೋನ್ನತಿಯಲ್ಲಿ ಅಂಕಗಳು ಸಿಗುತ್ತವೆನ್ನುವ ಕಾರಣಕ್ಕೆ ಹಳೆಯ ಸರಕನ್ನೇ ರೂಪ ಬದಲಿಸಿ ಒಂದೇ ಲೇಖನಕ್ಕೆ ನಾಲ್ಕೈದು ಜನರ ಹೆಸರನ್ನು ಸೇರಿಸಿ ಪ್ರಕಟಿಸುವ ಲೇಖನಗಳಾಗಿರುತ್ತವೆ.

೪. ರೈತರ ಅನುಭವ ಕಥನಗಳಿಗೆ ಅವುಗಳಲ್ಲಿ ಸ್ಥಾನವೇ ಇರುವುದಿಲ್ಲ.

೫. ಬಹುಪಾಲು ಲೇಖಕರಿಗೆ ರೈತರ ಅಥವಾ ಗ್ರಾಮೀಣ ಬದುಕಿನ ಅನುಭವವೇ

ಇರುವುದಿಲ್ಲ. ತಾವು ತಿಳಿದಿರುವುದು ಹಾಗೂ ಬರೆದಿರುವುದೇ ಅಂತಿಮ ಸತ್ಯವೆಂಬ ಮನೋಭಾವ ಆ ಲೇಖನಗಳಲ್ಲಿ ವ್ಯಕ್ತವಾಗುತ್ತದೆ.

೬. ಅಂತಹ ಪತ್ರಿಕೆಗಳಲ್ಲಿ ಜಾಹೀರಾತಿಗೆ ಹೆಚ್ಚಿನ ಆದ್ಯತೆ.

೭. ಕೃಷಿ ವಿಶ್ವವಿದ್ಯಾನಿಲಯಗಳು ಪ್ರಕಟಿಸುವ ಕೃಷಿ ಪತ್ರಿಕೆಗಳು ನಿಯತಕಾಲಿಕೆಗಳಾದರೂ ನಿಯತವಾಗಿ ಪ್ರಕಟವಾಗುವುದಿಲ್ಲ ಹಾಗೂ ಬಹುಪಾಲು ರೈತರಿಗೆ ಅವು ಪ್ರಕಟವಾಗುವ ವಿಷಯವೇ ತಿಳಿದಿರುವುದಿಲ್ಲ ಮತ್ತು ಅವು ತೀರಾ ಕಡಿಮೆ ಸಂಖ್ಯೆಯಲ್ಲಿ ಪ್ರಕಟವಾಗುವುದರಿಂದ ಉದ್ದೇಶಿಸಿದವರನ್ನೆಂದೂ ಅವು ತಲುಪುವುದಿಲ್ಲ.

ದಕ್ಷಿಣ ಕನ್ನಡ ಜಿಲ್ಲೆಯಿಂದ ಪ್ರಕಟವಾಗುವ **ಅಡಿಕೆ ಪತ್ರಿಕೆ** ಈ ರೀತಿಯ ಸಮಸ್ಯೆಗಳ ಪರಿಹಾರಕ್ಕೆ ಪ್ರಯತ್ನಿಸಿದೆ. ಕೃಷಿಕರ ಬೇಕು-ಬಯಕೆಗೆ ಸ್ಪಂದಿಸುವ, ಕೃಷಿಕರ ಹಿತ ಬಯಸುವ ಮಾಹಿತಿ ಕೊರತೆ ಬಹುಕಾಲದಿಂದಲೂ ಇದ್ದು, ಕೃಷಿಕರ ಸಂವಹನ ಅರ್ಥಪೂರ್ಣ ಹಾಗೂ ಉಪಯುಕ್ತ ಆಗಬೇಕಾದರೆ ಕೃಷಿಕರು ಓದುಗರಾಗಿ ಮಾತ್ರವಲ್ಲ, ಬರಹಗಾರರಾಗಿಯೂ ರೂಪು ಪಡೆಯಬೇಕೆಂಬ ಆಶಯದಿಂದ ಪುತ್ತೂರಿನ 'ಫಾರ್ಮರ್ಸ್ ಫಸ್ಟ್' ಎಂಬ ಟ್ರಸ್ಟ್ 'ಕೃಷಿಕರ ಕೈಗೆ ಲೇಖನಿ' ಎಂಬ ಕೃಷಿ ಮತ್ತು ಗ್ರಾಮೀಣ ಪತ್ರಿಕೋದ್ಯಮ ಶಿಬಿರಗಳನ್ನು ನಡೆಸಿದೆ. ಕೃಷಿ ಪತ್ರಿಕೋದ್ಯಮ ತರಬೇತಿ ನೀಡುವ ಸಂಸ್ಥೆಗಳೂ ಹುಟ್ಟಿಕೊಂಡಿವೆ. ಬದಲಿ ಕೃಷಿ ಮಾಧ್ಯಮ ಕೇಂದ್ರದ ನಿರ್ದೇಶಕರಾಗಿರುವ ಶಿವರಾಂ ಪೈಲೂರರ (೨೦೦೫) ಪ್ರಕಾರ ಕೃಷಿ ಸಾಹಿತ್ಯ ಮತ್ತು ಪತ್ರಿಕೋದ್ಯಮ ಮಾಹಿತಿ ಸಂವಹನವನ್ನೂ ಮೀರಿ ರೈತರನ್ನು ತಲುಪಬೇಕಿದೆ. ಅಂದರೆ,

೧. ರೈತರಿಗಾಗಿ ಅವಶ್ಯಕತೆ ಆಧಾರಿತ ಸಂವಹನ ವ್ಯವಸ್ಥೆ ಇರಬೇಕು.

೨. ಕೃಷಿ ಸಂವಹನದಲ್ಲಿ ಬದಲಿ ಪ್ರಯತ್ನಗಳನ್ನು ಉತ್ತೇಜಿಸುವುದು.

೩. ರೈತರಲ್ಲಿ ಸ್ವ-ಸಹಾಯ ಪತ್ರಿಕೋದ್ಯಮವನ್ನು ಉತ್ತೇಜಿಸುವುದು.

೪. ರೈತರ ಮತ್ತು ಸರ್ಕಾರದ/ವಿಜ್ಞಾನಿಗಳ ನಡುವಿನ ಅಂತರವನ್ನು ಕಡಿಮೆಮಾಡುವುದು.

೫. ರೈತರ ಅನ್ವೇಷಣೆ/ಸಂಶೋಧನೆ ಮತ್ತು ರೈತಪರ ವಿಷಯಗಳ ಮೇಲೆ ಕೇಂದ್ರೀಕರಿಸುವುದು.

೬. ಬದಲಿ ಕೃಷಿ ಮತ್ತು ಬದಲಿ ಕೃಷಿ ಮಾಧ್ಯಮಗಳ ಬಗೆಗೆ ಗ್ರಂಥಾಲಯವನ್ನು ಸ್ಥಾಪಿಸುವುದು, ಇವೇ ಮುಂತಾದುವು.

ರೈತರಿಗಾಗಿ ಬರೆಯುವುದಕ್ಕಿಂತ ರೈತರೇ ಬರೆದಲ್ಲಿ ಅಂತಹ ಬರಹಗಳು ಹೆಚ್ಚು ಪ್ರಭಾವಯುತವಾಗಿ ರೈತರನ್ನು ತಲುಪುತ್ತವೆ. ಈ ಎರಡು ರೀತಿಯ ಬರಹಗಳ ನಡುವಿನ ವ್ಯತ್ಯಾಸವನ್ನು ಈ ಮುಂದೆ ನೀಡಲಾಗಿದೆ:

| ರೈತರಿಂದ | ರೈತರಿಗಾಗಿ |
|---|---|
| ತಮ್ಮ ಅನಿಸಿಕೆ/ಅನುಭವಗಳನ್ನು ರೈತರೇ ತಮ್ಮ ಸಹ ರೈತರಿಗೆ ಸಂವಹಿಸುತ್ತಾರೆ. | ವಿಜ್ಞಾನಿಗಳು/ವಿಷಯ ತಜ್ಞರು/ ವಿಸ್ತರಣ ಸಿಬ್ಬಂದಿ ತಮ್ಮ ಜ್ಞಾನವನ್ನು ರೈತರಿಗೆ ಸಂವಹಿಸುತ್ತಾರೆ. |
| ರೈತ ರೈತರ ನಡುವಿನ ಪರಸ್ಪರ ಸಂವಹನ. | ವಿಷಯ ತಜ್ಞ ಮತ್ತು ರೈತರ ನಡುವಿನ ಸಂವಹನ |
| ಸಾಮಾನ್ಯವಾಗಿ ಭಾಗವಹಿಸುವಿಕೆ ರೀತಿಯ ಸಂವಹನ | ನಿರ್ದೇಶಕ ರೀತಿಯ ಸಂವಹನ |
| ಸ್ವ-ಸಹಾಯ ತತ್ವಾಧಾರಿತ | ಬಾಹ್ಯ ವ್ಯವಸ್ಥೆಯ ಮೇಲೆ ಅವಲಂಬಿತ |
| ನೇರ ಸಂಭಾಷಣಾ ಶೈಲಿ | ಪರೋಕ್ಷ ನಿರೂಪಣೆ ಶೈಲಿ |
| ಪೂರ್ವನಿಯಾಮಕ ವಿಧಾನ | ಪ್ರತಿಕ್ರಿಯಾ ವಿಧಾನ |
| ಸರಳ ಆಡುಮಾತಿನ ಭಾಷೆ | ಸಂಕೀರ್ಣ, ಪಠ್ಯಪುಸ್ತಕ ಭಾಷೆ |
| ಸುಲಭವಾಗಿ ಓದಿಸಿಕೊಳ್ಳುವ ಗುಣ | ಕಡಿಮೆ ಓದಿಸಿಕೊಳ್ಳುವ ಗುಣ |
| ಅನ್ವಯಿಕ ಮತ್ತು ಕ್ಲಿಷ್ಟ ಶೈಕ್ಷಣಿಕ ರೂಪವಲ್ಲದ | ಇಚ್ಛಾಪೂರ್ವಕವಾಗಲ್ಲದಿದ್ದರೂ ಶೈಕ್ಷಣಿಕ ರೂಪ |
| ಸ್ವ-ಅನುಭವ ಆಧಾರಿತ ಬರವಣಿಗೆ | ಇತರ ಮೂಲಗಳಿಂದ ಪಡೆದ ಜ್ಞಾನ |
| ವಿಷಯದ ಗಾಢ ಚಿಂತನೆ | ವಿಷಯದ ಮೇಲ್ಮೇಲಿನ ಬರಹ |
| ಸಹ ರೈತರನ್ನು ಗಮನದಲ್ಲಿರಿಸಿ ಬರೆದ ಬರಹ | ಸಾರ್ವಜನಿಕರನ್ನು ಗಮನದಲ್ಲಿರಿಸಿ ಬರೆದ ಬರಹ |
| ಕ್ಷೇತ್ರ ಪರಿಸ್ಥಿತಿಗಳನ್ನು ವಾಸ್ತವಿಕವಾಗಿ ಚಿತ್ರಿಸುತ್ತದೆ | ಬಹಳಷ್ಟು ಸಾರಿ ಪರಿಸ್ಥಿತಿಗಳನ್ನು ನಾಟಕೀಯಗೊಳಿಸುತ್ತದೆ |
| ಪ್ರಾಕೃತಿಕ ಪರಿಸರದ ಚಿತ್ರಣ | ಪ್ರಯೋಗಾಲಯ ಪರಿಸರದ ಚಿತ್ರಣ |
| ಬರಹ ಹೃದಯದಿಂದ ಹರಿದುಬರುತ್ತದೆ | ಬರಹ ಮಿದುಳಿನಿಂತ ಹರಿದುಬರುತ್ತದೆ |
| ಭಾವನಾತ್ಮಕ ವಸ್ತು ವಿಷಯ ನಿರೂಪಣೆ | ವಿಷಯದ ನಿರೂಪಣೆಯಷ್ಟೆ |
| ರೈತರಿಗೆ ಅವಶ್ಯಕವಿರುವ ಸಂಪೂರ್ಣ ಮಾಹಿತಿ ಒದಗಿಸುತ್ತದೆ | ಬಹುಪಾಲು ಅಪೂರ್ಣ ಮಾಹಿತಿ |
| ಆತ್ಮವಿಶ್ವಾಸದ ಬರವಣಿಗೆ | ಆತ್ಮವಿಶ್ವಾಸದ ಕೊರತೆಯ ಬರವಣಿಗೆ |
| ಮಾಹಿತಿಯ ನಿಖರ ಚಿತ್ರಣ | ಮಾಹಿತಿ ಹಲವಾರು ಸಾರಿ ಸತ್ಯಕ್ಕೆ ದೂರ |
| ಮಾನವ ಕೇಂದ್ರಿತ ಬರವಣಿಗೆ | ಯಾಂತ್ರಿಕ, ಪರಕೀಯ ಬರವಣಿಗೆ |
| ಸಂಶೋಧನೆಯೊಂದರ ಗುಣ ಮತ್ತು ಅವಗುಣಗಳನ್ನು ಪ್ರಾಮಾಣಿಕವಾಗಿ ಚಿತ್ರಿಸುತ್ತದೆ | ಗುಣಗಳನ್ನು ಮಾತ್ರ ನಿರೂಪಿಸುವ ಪ್ರಯತ್ನ |

**೪.೫.೧. ಪತ್ರಿಕೆಗಳಲ್ಲಿ ಕೃಷಿ ಅಂಕಣಗಳು**

'ಇತರ ಪತ್ರಿಕೆಗಳವರು ಸಂಘಕ್ಕೆ ತಮ್ಮ ಪತ್ರಿಕೆಗಳನ್ನು ವಿನಿಮಯವಾಗಿ ಕಳಿಸಿ, ಅವರಲ್ಲಿ ಕೆಲವರು ವ್ಯವಸಾಯ ಶೋಧಕರ ಸಂಘದ ಪತ್ರಿಕೆಯಲ್ಲಿನ ಲೇಖನಗಳನ್ನು ಆಯ್ದುಕೊಂಡು ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿ ಅವುಗಳ ಉಪಯುಕ್ತತೆಯ ಬಗ್ಗೆ ನಮ್ಮಲ್ಲಿ ಧೈರ್ಯತುಂಬಿದ್ದಾರೆ' ಎಂದು ಜನವರಿ ೧೯೪೧, ಸಂಚಿಕೆ ೧, ಸಂಪುಟ ೧೭ರ ಸಂಪಾದಕೀಯದಲ್ಲಿ ಬರೆಯಲಾಗಿದೆ. ೧೯೫೪ರಿಂದ 'ತಾಯಿನಾಡು' ದಿನಪತ್ರಿಕೆಯಲ್ಲಿ ವಾರಕ್ಕೆ ಎರಡು ಸಾರಿ 'ರೈತರ ವೃತ್ತಾಂತಗಳ' ಬಗ್ಗೆ ಪ್ರಕಟಿಸಲು ಪ್ರಾರಂಭಿಸಿತು. ಜನವರಿ ೧೯೫೫, ಸಂಚಿಕೆ ೧, ಸಂಪುಟ ౩೧ರ ವ್ಯವಸಾಯ ಶೋಧಕರ ಸಂಘದ ಪತ್ರಿಕೆಯಲ್ಲಿ 'ತಾಯಿನಾಡು' ಪತ್ರಿಕೆಯ ವ್ಯವಸ್ಥಾಪಕರು ಜಾಹಿರಾತೊಂದನ್ನು ನೀಡಿ, 'ಕಳೆದ ಒಂದೆರಡು ತಿಂಗಳಿಂದ ಈ ರೈತರ ವಿಭಾಗವನ್ನು ತೆರೆದಿದ್ದೇವೆ. ಸಂಸ್ಥಾನದ ನಾನಾಕಡೆಗಳಿಂದ ನಮಗೆ ಪ್ರಶಂಸೆಯ ಪತ್ರಗಳು ಬರುತ್ತಿವೆ. ಅದರಿಂದ ರೈತರಲ್ಲಿ ಹೊಸ ಉತ್ಸಾಹವೂ, ಹುರುಪೂ ಮೂಡಿದೆ. ನಮ್ಮ ಮೈಸೂರು ರೈತರು ಹೆಚ್ಚಿನ ಪ್ರೋತ್ಸಾಹ ನೀಡುವುದಾದರೆ, ಆ ವಿಭಾಗವನ್ನು ವಿಸ್ತರಿಸಿ ಇನ್ನೂ ಹೊಸ ವಿಷಯಗಳನ್ನು ಬರೆದು ರೈತರ ಮುಂದಿಡುತ್ತೇವೆ' ಎಂದಿದ್ದರು. ಕನ್ನಡದ ದಿನಪತ್ರಿಕೆಗಳಲ್ಲಿ ಕೃಷಿ ಲೇಖನ ಮತ್ತು ಕೃಷಿ ಅಂಕಣಗಳು ಪ್ರಕಟವಾದದ್ದು ಇದೇ ಮೊದಲು.

ಕನ್ನಡ ವೃತ್ತ ಪತ್ರಿಕೆಗಳಲ್ಲಿ ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯವು ಒದಗಿಸುವ ಮಾಹಿತಿಯನ್ನು ಪ್ರಕಟಿಸುವ ಕಾರ್ಯವು ೧೯೬೮ರಿಂದ ನಡೆಸಲಾಗುತ್ತಿದೆ.

ಪತ್ರಿಕೆಗಳಲ್ಲಿ ಕೃಷಿ ವಿಶ್ವವಿದ್ಯಾನಿಲಯಗಳು ಪ್ರಕಟಿಸುವ ಪ್ರಶ್ನೋತ್ತರ ಅಂಕಣಗಳು (ಉದಾ: 'ಪ್ರಜಾವಾಣಿ'– ಬೇಸಾಯ ಬೆನ್ನೆಲುಬು: ಈಗ ನಿಲ್ಲಿಸಲಾಗಿದೆ) ಮೈಸೂರಿನ ರೈತರಲ್ಲಿ ಹೆಚ್ಚು ಜನಪ್ರಿಯವಾಗಿವೆಯೆಂದು ಜೋಸೆಫ್‌ರವರು (೧೯೭೩) ತಿಳಿಸಿದ್ದಾರೆ. ಈ ಅಂಕಣವನ್ನು ನಿಲ್ಲಿಸುವ ಇಚ್ಛೆಯನ್ನು ಕೆಲವು ಪತ್ರಿಕೆಗಳು ವ್ಯಕ್ತಪಡಿಸಿದಾಗ ಹಲವರು ರೈತರು ಅವುಗಳನ್ನು ನಿಲ್ಲಿಸಬಾರದೆಂದೂ, ಅದರಿಂದ ಬಹಳಷ್ಟು ಉಪಯುಕ್ತ ಮಾಹಿತಿ ದೊರಕುತ್ತಿದೆಯೆಂದು ಕೋರಿ ಪತ್ರಗಳನ್ನು ಬರೆದಿದ್ದರು.

ಕನ್ನಡದ ಬಹುಪಾಲು ಎಲ್ಲ ದಿನಪತ್ರಿಕೆಗಳು ಕೃಷಿ ವಿಷಯಗಳ ಅಂಕಣಗಳನ್ನು ಪ್ರಕಟಿಸಲು ಪ್ರಾರಂಭಿಸಿ ಕ್ರಮೇಣ ವಾರದ ಒಂದು ನಿರ್ದಿಷ್ಟ ದಿನ ಪ್ರತ್ಯೇಕ ಪುರವಣಿಯನ್ನೇ ತರಲು ಪ್ರಾರಂಭಿಸಿವೆ (ಚಿತ್ರ ೭ ಮತ್ತು ೮). ಕೃಷಿವಿಜ್ಞಾನ ಪುಸ್ತಕಗಳಾದರೆ ಸೀಮಿತ ಜನರನ್ನು ಮಾತ್ರ ತಲುಪುತ್ತವೆ. ಆದರೆ ದಿನಪತ್ರಿಕೆಗಳು ಇಂದು ಹಳ್ಳಿಹಳ್ಳಿಗೂ ತಲುಪುತ್ತವೆ.

ದಿನ ಪತ್ರಿಕೆಗಳ ಈ ಕೃಷಿ ಅಂಕಣ/ಪುರವಣಿಗಳಲ್ಲಿ ಆಧುನಿಕ ಮತ್ತು ಸುಧಾರಿತ ಕೃಷಿ ವಿಧಾನಗಳನ್ನು ಪರಿಚಯಿಸುವುದರ ಜೊತೆಗೆ ರೈತರ ಅನುಭವಗಳ ಮಂಡನೆಗೆ, ಸಾಂಪ್ರದಾಯಿಕ ಕೃಷಿ ಜ್ಞಾನದ ಪುನರುಜ್ಜೀವನದ ಬಗೆಗೆ ಹಾಗೂ ರೈತರೇ ತಮ್ಮ ಹೊಲಗದ್ದೆಗಳಲ್ಲಿ ನಡೆಸುವ ಅನ್ವೇಷಣೆಗಳ ಬಗೆಗೆ ಹೆಚ್ಚು ಒತ್ತು ಕೊಡಲಾಗುತ್ತಿದೆ. ಇದೆಲ್ಲದರ ಜೊತೆಗೆ ರೈತರಿಗೆ ಹೆಚ್ಚು ಅವಶ್ಯಕವಿರುವ ಮಾರುಕಟ್ಟೆಯ ಬಗೆಗೂ ತಿಳಿವಳಿಕೆಯನ್ನು ಈ ಪುರವಣಿಗಳು ನೀಡುತ್ತಿವೆ.

ಈ ಅಂಕಣ/ಪುರವಣಿಗಳು ಹಾಗೂ ಕೃಷಿ ಪತ್ರಿಕೆಗಳು ರೈತರ ಬದುಕಿನ ಮೇಲೆ ಎಷ್ಟು ಪ್ರಭಾವ ಬೀರಿವೆ, ಅವುಗಳಿಂದ ರೈತರ ಬೇಸಾಯದ ಬದುಕಿಗೆ ಏನಾದರೂ ಲಾಭವುಂಟಾಗಿದೆಯೇ, ಆ ಪತ್ರಿಕೆ, ಪುರವಣಿಗಳಿಂದ ರೈತರು ಬಯಸುವುದಾದರೂ ಏನೆಂಬುದರ ಬಗೆಗೆ ಪ್ರತ್ಯೇಕ ಕ್ಷೇತ್ರ ಅಧ್ಯಯನ ನಡೆಸಲಾಗಿದೆ.

## ೪.೬. ಕೃಷಿಕರ ಮೇಲೆ ಕೃಷಿ ಸಾಹಿತ್ಯದ ಪ್ರಭಾವ

ಇಂದು ಕೃಷಿ ಪತ್ರಿಕೋದ್ಯಮದ ಸುಗ್ಗಿಯ ಕಾಲವೆಂದೇ ಹೇಳಬಹುದು. ಕನ್ನಡದ ಎಲ್ಲ ದಿನಪತ್ರಿಕೆಗಳು ವಾರಕ್ಕೊಮ್ಮೆ ಪ್ರತ್ಯೇಕ ಕೃಷಿ ಪುರವಣಿ/ಅಂಕಣಗಳನ್ನೇ ಪ್ರಕಟಿಸುತ್ತಿವೆ. ಕೃಷಿ ವಿಜ್ಞಾನ ಪುಸ್ತಕಗಳು ಸೀಮಿತ ಜನರನ್ನು ಮಾತ್ರ ತಲುಪುತ್ತವೆ. ಆದರೆ ದಿನಪತ್ರಿಕೆಗಳು ಇಂದು ಹಳ್ಳಿಹಳ್ಳಿಗೂ ತಲುಪುತ್ತದೆ. ಕೃಷಿವಿಜ್ಞಾನದ ಕನ್ನಡ ಪತ್ರಿಕೆ/ಪುರವಣಿ/ಅಂಕಣಗಳಲ್ಲಿ ಪ್ರಕಟವಾಗುವ ಕೃಷಿವಿಜ್ಞಾನ ಲೇಖನ, ಮಾಹಿತಿಗಳ ಬಗೆಗೆ ರೈತರಿಗೆ ಅರಿವಿದೆಯೆ? ಪತ್ರಿಕೆಗಳಲ್ಲಿ ಪ್ರಕಟವಾಗುವ ಕೃಷಿ ಲೇಖನ, ಮಾಹಿತಿಗಳು ರೈತರ ಮೇಲೆ ಎಷ್ಟು ಪ್ರಭಾವ ಬೀರುತ್ತವೆ, ಅವುಗಳಿಂದ ರೈತರ ಬೇಸಾಯದ ಬದುಕಿಗೆ ಏನಾದರೂ ಲಾಭವುಂಟಾಗಿದೆಯೇ, ಆ ಪತ್ರಿಕೆ, ಪುರವಣಿಗಳಿಂದ ರೈತರು ಬಯಸುವುದಾದರೂ ಏನೆಂಬುದರ ಬಗೆಗೆ ಅಧ್ಯಯನ ನಡೆಸಲಾಯಿತು. ಅದಕ್ಕಾಗಿ ಪ್ರತ್ಯೇಕ ಪ್ರಶ್ನಾವಳಿಯೊಂದನ್ನು ಸಿದ್ಧಪಡಿಸಿಕೊಂಡು ಅದನ್ನು ಪೂರ್ವಪರೀಕ್ಷೆಗೊಳಪಡಿಸಲಾಯಿತು. ಪೂರ್ವಪರೀಕ್ಷೆಯ ನಂತರ ಕಂಡುಬಂದ ಕೆಲವೊಂದು ದೋಷಗಳನ್ನು ಸರಿಪಡಿಸಿ ಅಂತಿಯ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಮಾಹಿತಿಯನ್ನು ಸಂಗ್ರಹಿಸಲಾಯಿತು. ಪ್ರಶ್ನಾವಳಿಯ ಮಾದರಿಯನ್ನು ಅನುಬಂಧ ೧ರಲ್ಲಿ ಕೊಡಲಾಗಿದೆ.

ಪ್ರಶ್ನಾವಳಿಯಲ್ಲಿ ಸಂಗ್ರಹಿಸಿದ ಪ್ರಮುಖ ಮಾಹಿತಿಯ ಪಟ್ಟಿಯನ್ನು ಈ ಮುಂದೆ ಕೊಡಲಾಗಿದೆ:

೧. ರೈತರ ಹಾಗೂ ಅವರ ಕುಟುಂಬದ ಮಾಹಿತಿ ಹಾಗೂ ವಾಸಸ್ಥಳ.

೨. ರೈತರ ವಯಸ್ಸು, ಶೈಕ್ಷಣಿಕ ಮಟ್ಟ.

೩. ರೈತರ ಭೂ ಹಿಡುವಳಿ ಗಾತ್ರ

೪. ಸಮೂಹ ಮಾಧ್ಯಮಗಳಾದ ದಿನಪತ್ರಿಕೆ, ನಿಯತಕಾಲಿಕಗಳನ್ನು ಗಮನಿಸುತ್ತಾರೆಯೆ?

೫. ದಿನಪತ್ರಿಕೆಗಳಲ್ಲಿ ಕೃಷಿ ಅಂಕಣ/ಲೇಖನಗಳನ್ನು ಓದುತ್ತಾರೆಯೆ? ಕೃಷಿ ನಿಯತಕಾಲಿಕೆಗಳನ್ನು ಓದುತ್ತಾರೆಯೆ?

೬. ದೂರದರ್ಶನದಲ್ಲಿ ಕೃಷಿ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಾರೆಯೆ?

೭. ಕೃಷಿ ಅಂಕಣ/ಲೇಖನ, ಪತ್ರಿಕೆಗಳಲ್ಲಿನ ಬರಹ ರೈತರಿಗೆ ಸುಲಭವಾಗಿ ಅರ್ಥವಾಯುತ್ತದೆಯೆ?

೮. ಆ ಬರಹಗಳು ಅವರಿಗೆ ಅನ್ವಯಿಸುವಂತಿರುತ್ತವೆಯೆ? ರೈತರು ಅವನ್ನು ಅನುಸರಿಸುತ್ತಾರೆಯೆ? ಅವುಗಳನ್ನು ಅನುಸರಿಸುವುದು ಸುಲಭವೆ? ಅವುಗಳನ್ನು ಅನುಸರಿಸುವುದರಿಂದ ಅವರಿಗೆ ಲಾಭವಾಗುತ್ತದೆಯೆ?

೯. ಅಂತಹ ಸಾಹಿತ್ಯದಿಂದ ರೈತರು ನಿರೀಕ್ಷಿಸುವುದು ಏನನ್ನು? ಬರಹದ ರೀತಿ ಹಾಗೂ ವಸ್ತು ವಿಷಯ ಹೇಗಿರಬೇಕು?

ರೈತರನ್ನು ಖುದ್ದಾಗಿ ಭೇಟಿಮಾಡಿ ಅವರಿಂದ ಮಾಹಿತಿ ಸಂಗ್ರಹಿಸಲು ಭೌಗೋಳಿಕ, ಸಾಂಸ್ಕೃತಿಕ, ಸಾಕ್ಷರತೆಯ ಹಾಗೂ ಕೃಷಿ ಪರಿಸರದ ದೃಷ್ಟಿಯಿಂದ ಎರಡು ಪ್ರತ್ಯೇಕ ಪ್ರದೇಶಗಳನ್ನು ಆರಿಸಿಕೊಳ್ಳಲಾಯಿತು:

೧. ಕೋಲಾರ ಜಿಲ್ಲೆಯ ಕೋಲಾರ ತಾಲ್ಲೂಕಿನ ಕೊಂಡರಾಜನಹಳ್ಳಿ, ಮದ್ದೇರಿ, ಕೋಡಿಹಳ್ಳಿ ಹಾಗೂ ಅಣ್ಣೇರಿ ಗ್ರಾಮಗಳ ಪ್ರದೇಶ. ಕೋಲಾರ ಜಿಲ್ಲೆ ಕರ್ನಾಟಕದ ದಕ್ಷಿಣ ಪೂರ್ವ ಭಾಗದಲ್ಲಿದೆ. ಆಂಧ್ರಪ್ರದೇಶ ಹಾಗೂ ತಮಿಳುನಾಡುಗಳು ಇದರ ಗಡಿಭಾಗಗಳು. ಬಹುಪಾಲು ಮಳೆಯಾಶ್ರಿತ ಬೇಸಾಯದ, ಬಯಲುಸೀಮೆಯ ಈ ಜಿಲ್ಲೆ ದೇಶದಲ್ಲೇ ಹೆಚ್ಚಿನ ಸಂಖ್ಯೆಯ ಕೆರೆಗಳನ್ನು ಹೊಂದಿದೆ. ಉತ್ತಮ ಮಳೆಯಾಗಿ ಕೆರೆಗಳಲ್ಲಿ ಸಾಕಷ್ಟು ನೀರು ಸಂಗ್ರಹವಾದಲ್ಲಿ ಕೆಲವೆಡೆ ವರ್ಷಕ್ಕೆ ಮೂರು ಬೆಳೆಗಳನ್ನು ತೆಗೆದಿರುವ ಉದಾಹರಣೆಗಳೂ ಇವೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಮಳೆಯ ವಿಫಲತೆಯಿಂದಾಗಿ ಹಾಗೂ ಹೆಚ್ಚಿದ ಕೊಳವೆ ಬಾವಿಗಳ ಸಂಖ್ಯೆಯಿಂದಾಗಿ ಅಂತರ್ಜಲ ಮಟ್ಟ ಅಪಾಯಕಾರಿ ಮಟ್ಟಕ್ಕೆ ಇಳಿದು ಕೆಲವು ತಾಲ್ಲೂಕುಗಳನ್ನು ಸರ್ಕಾರವು 'ಕಪ್ಪು ಪ್ರದೇಶ'ವೆಂದು ಘೋಷಿಸಿ ಅಲ್ಲಿ ಕೊಳವೆ ಬಾವಿ ಕೊರೆಯುವುದನ್ನು ನಿಷೇಧಿಸಿತ್ತು.

ಕೋಲಾರ ತಾಲ್ಲೂಕಿನ ಪ್ರಮುಖ ಬೆಳೆಗಳೆಂದರೆ ರಾಗಿ, ಬತ್ತ, ನೆಲಗಡಲೆ, ಆಲೂಗೆಡ್ಡೆ, ಟೊಮೇಟೊ ಮತ್ತು ವಿವಿಧ ತರಕಾರಿಗಳು. ರೇಷ್ಮೆ ಮತ್ತು ಹೈನುಗಾರಿಕೆ ರೈತರಿಗೆ ನಿರಂತರ ಆದಾಯ ತಂದುಕೊಡುವ ಉಪ ಕೃಷಿಕಸುಬುಗಳು. ಕೋಲಾರ ತಾಲ್ಲೂಕಿನ ಸಾಕ್ಷರತೆ ಶೇ.೬೩.೧೪ರಷ್ಟಿದೆ. ತಾಲ್ಲೂಕಿನಲ್ಲಿ ಕನ್ನಡದ ಜೊತೆಗೆ ತೆಲುಗು ಭಾಷೆಯನ್ನೂ ಮಾತನಾಡುತ್ತಾರೆ.

೨. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕು ಪಶ್ಚಿಮಘಟ್ಟಗಳ ಮಲೆನಾಡಿನಲ್ಲಿದೆ. ಕೋಲಾರ ಜಿಲ್ಲೆಗಿಂತ ಸಾಕ್ಷರತೆ ಹೆಚ್ಚಿರುವ (ಶೆ. ೬೮.೧೪) ಹಾಗೂ ಕೋಲಾರದಿಂದ ಸಾಂಸ್ಕೃತಿಕವಾಗಿ ವಿಭಿನ್ನವಾಗಿರುವ ಮಲೆನಾಡಿನ ತೀರ್ಥಹಳ್ಳಿ ತಾಲ್ಲೂಕಿನ ವಾಟಗಾರು, ತನಿಕಲ್, ಗುಬ್ಬಿಗ ಕಡೇಗದ್ದೆ, ಬೇಳೂರು ಮತ್ತು ಆರಗ ಗ್ರಾಮಗಳ ಪ್ರದೇಶಗಳಲ್ಲಿ ಕ್ಷೇತ್ರ ಸಮೀಕ್ಷೆ ನಡೆಸಲಾಯಿತು.

ಅಧಿಕ ಮಳೆಯಾಗುವ ಪಶ್ಚಿಮಘಟ್ಟಗಳ ಈ ತಾಲ್ಲೂಕಿನ ಪ್ರಮುಖ ಆಹಾರ ಬೆಳೆ ಬತ್ತ. ಸಾಮಾನ್ಯವಾಗಿ ಬತ್ತವನ್ನು ಸಮತಟ್ಟಾದ ಪ್ರದೇಶಗಳಲ್ಲಿ ಬೆಳೆಯುತ್ತಿದ್ದು ಬೆಟ್ಟಗುಡ್ಡಗಳಲ್ಲಿ ಅಡಿಕೆ ತೋಟಗಳನ್ನು ಹೊಂದಿರುತ್ತಾರೆ. ಅಡಿಕೆ ಇಲ್ಲಿನ ಪ್ರಮುಖ ವಾಣಿಜ್ಯ ಬೆಳೆ. ಕೆಲವರ್ಷಗಳಿಂದೀಚೆಗೆ ವೆನಿಲ್ಲಾ ಬೆಳೆಯನ್ನೂ ವಿಸ್ತೃತವಾಗಿ ಬೆಳೆಯಲಾಗುತ್ತಿದೆ.

**೪.೬.೧. ಮಾಹಿತಿ ವಿಶ್ಲೇಷಣೆ**

೧. ಪರಾಮರ್ಶಿಸಿದ ಸಾಹಿತ್ಯದ ವಸ್ತು ವಿಶೇಷಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಿ, ಅವಲೋಕನಗಳನ್ನು ತರ್ಕಬದ್ಧವಾಗಿ ದಾಖಲಿಸಲಾಯಿತು.

೨. ಪ್ರಶ್ನಾವಳಿಯ ಮೂಲಕ ಸಂಗ್ರಹಿಸಿದ ಎರಡು ವಿಭಿನ್ನ ಪ್ರದೇಶದ ರೈತರ ಕೃಷಿ ಪತ್ರಿಕೋದ್ಯಮ ಸಾಹಿತ್ಯದ ಬಗೆಗಿನ ಅಭಿಪ್ರಾಯಗಳ ಮಾಹಿತಿಯನ್ನು ಸಂಖ್ಯಾಶಾಸ್ತ್ರದನ್ವಯ ವಿಶ್ಲೇಷಿಸಿ, ಫಲಿತಾಂಶಗಳನ್ನು ವಿವರಿಸಿ ವಿವಿಧ ಕೋಷ್ಟಕಗಳಲ್ಲಿ ನೀಡಲಾಗಿದೆ.

ಕೋಲಾರ ಮತ್ತು ತೀರ್ಥಹಳ್ಳಿ ತಾಲ್ಲೂಕಿನ ಜನಸಂಖ್ಯೆ, ಸಾಕ್ಷರತೆ ಇತ್ಯಾದಿ ಸಾಮಾನ್ಯ ವಿವರಗಳ ಮಾಹಿತಿಯನ್ನು ಕೋಷ್ಟಕ ೮ರಲ್ಲಿ ಕೊಡಲಾಗಿದೆ. ಭೌಗೋಳಿಕವಾಗಿ ಹಾಗೂ ಜನಸಂಖ್ಯಾ ದೃಷ್ಟಿಯಿಂದ ಕೋಲಾರ ತಾಲ್ಲೂಕು ತೀರ್ಥಹಳ್ಳಿ ತಾಲ್ಲೂಕಿಗಿಂತ ದೊಡ್ಡದು. ೨೦೦೧ರ ಜನಗಣತಿಯಂತೆ ಕೋಲಾರ ತಾಲ್ಲೂಕಿನ ಒಟ್ಟು ಜನಸಂಖ್ಯೆ ೨೫೩೬೦೬೯ ಇದ್ದಲ್ಲಿ ತೀರ್ಥಹಳ್ಳಿ ತಾಲ್ಲೂಕಿನ ಜನಸಂಖ್ಯೆ ೧೪೩೨೦೭ರಷ್ಟಿದೆ.

**ಕೋಷ್ಟಕ ೮: ಅಧ್ಯಯನ ಪ್ರದೇಶದ ಜನಸಂಖ್ಯೆ, ಸಾಕ್ಷರತೆ ಇತ್ಯಾದಿ ಅಂಕಿಅಂಶಗಳು**

| | ಕೋಲಾರ | ತೀರ್ಥಹಳ್ಳಿ |
|---|---|---|
| ಒಟ್ಟು ಜನಸಂಖ್ಯೆ | ೨೫೩೬೦೯ | ೧೪೩೨೦೭ |
| ಗ್ರಾಮೀಣ ಜನಸಂಖ್ಯೆ | ೧೯೧೦೫೪೬ (೭೫.೩೩%) | ೧೨೮೩೯೯ (೮೯.೬೬%) |
| ನಗರ ಜನಸಂಖ್ಯೆ | ೬೨೫೫೨೩ (೨೪.೬೭%) | ೧೪೮೦೮ (೧೦.೩೪%) |
| ಒಟ್ಟು ಸಾಕ್ಷರರು | ೧೬೦೧೨೭೩ (೬೩.೧೪%) | ೯೯೦೦೮ (೬೯.೧೪%) |
| ಗ್ರಾಮೀಣ ಪ್ರದೇಶಗಳಲ್ಲಿನ ಸಾಕ್ಷರರು | ೭೬೪೨೧೮(೪೦%) | ೮೭೨೬೦ (೬೭.೯೬%) |
| ನಗರ ಪ್ರದೇಶಗಳಲ್ಲಿನ ಸಾಕ್ಷರರು | ೪೬೯೧೪೨ (೭೫%) | ೧೧೭೪೮ (೭೯.೩೩%) |
| ಒಟ್ಟು ಪ್ರೈಮರಿ ಶಾಲೆಗಳು | ೪೨೪ | ೨೧೪ |
| ಒಟ್ಟು ಪ್ರೌಢಶಾಲೆಗಳು | ೩೪ | ೩೧ |
| ಒಟ್ಟು ಕಾಲೇಜುಗಳು | ೨೦ | ೯ |
| ಒಟ್ಟು ಗ್ರಂಥಾಲಯಗಳು | ೧೬ | ೧೨ |
| ಒಟ್ಟು ಆಸ್ಪತ್ರೆಗಳು | ೧೮ | ೪ |

ಆಧಾರ: ಜಿಲ್ಲಾ ಅಂಕಿಅಂಶಗಳ ಅಧಿಕಾರಿಗಳ ಕಚೇರಿ, ಶಿವಮೊಗ್ಗ ಮತ್ತು ಕೋಲಾರ ಜಿಲ್ಲೆ (೨೦೦೧ರ ಜನಗಣತಿಯಂತೆ)

ಎರಡೂ ತಾಲ್ಲೂಕುಗಳು ಪ್ರಧಾನವಾಗಿ ಗ್ರಾಮೀಣ ಪ್ರದೇಶಗಳು. ಕೋಲಾರ ಮತ್ತು ತೀರ್ಥಹಳ್ಳಿ ತಾಲ್ಲೂಕಿನ ಗ್ರಾಮೀಣ ಜನಸಂಖ್ಯೆ ಅನುಕ್ರಮವಾಗಿ ೧೯೧೦೫೪೬ ಮತ್ತು ೧೨೮೩೯೯ರಷ್ಟಿದ್ದು ಒಟ್ಟು ಜನಸಂಖ್ಯೆಯ ಶೇಕಡಾ ೭೫.೩೩ ಮತ್ತು ಶೇಕಡಾ ೮೯.೬೬ರಷ್ಟಿವೆ ಹಾಗೂ ನಗರ ಜನಸಂಖ್ಯೆ ಅನುಕ್ರಮವಾಗಿ ೬೨೫೫೨೩ (ಶೇ. ೨೪.೬೭) ಮತ್ತು ೧೪೮೦೮(ಶೇ.೧೦.೩೪)ರಷ್ಟಿದೆ. ಬಯಲುಸೀಮೆಯ ಕೋಲಾರ ತಾಲ್ಲೂಕಿನ ಸಾಕ್ಷರತೆ (ಸಂಖ್ಯೆ ೧೬೦೧೨೭೩– ಶೇ.೬೩.೧೪) ಮಲೆನಾಡಿನ ತೀರ್ಥಹಳ್ಳಿ ತಾಲ್ಲೂಕಿನ ಸಾಕ್ಷರತೆಗಿಂತ (ಸಂಖ್ಯೆ ೯೯೦೦೮– ಶೇ.೬೯.೧೪) ಕಡಮೆಯಿದೆ. ಕೋಲಾರ ಮತ್ತು ತೀರ್ಥಹಳ್ಳಿ ತಾಲ್ಲೂಕುಗಳ ನಗರ ಪ್ರದೇಶಗಳ ಸಾಕ್ಷರರ ಸಂಖ್ಯೆ ಅನುಕ್ರಮವಾಗಿ ೬೨೫೫೨೩ (ಶೇ.೭೫) ಹಾಗೂ ೧೧೭೪೮(ಶೇ.೭೯.೩೩)ರಷ್ಟಿದ್ದರೆ ಗ್ರಾಮೀಣ ಪ್ರದೇಶಗಳಲ್ಲಿನ ಸಾಕ್ಷರರ ಸಂಖ್ಯೆ ೭೬೪೨೧೮ (ಶೇ.೪೦) ಮತ್ತು ೮೭೨೬೦(ಶೇ.೬೭.೯೬)ರಷ್ಟಿದೆ. ನಗರ ಪ್ರದೇಶಗಳ ಹಾಗೂ ಗ್ರಾಮೀಣ ಪ್ರದೇಶಗಳ ಮತ್ತು ಒಟ್ಟಾರೆ ಸಾಕ್ಷರತೆಯಲ್ಲಿ ಮಲೆನಾಡಿನ ತೀರ್ಥಹಳ್ಳಿ ತಾಲ್ಲೂಕು, ಬಯಲುಸೀಮೆಯ ಕೋಲಾರ ತಾಲ್ಲೂಕಿಗಿಂತ ಮುಂದಿದೆ.

ಕೋಷ್ಟಕ ೯ರಲ್ಲಿ ಅಧ್ಯಯನ ಪ್ರದೇಶದ ಎರಡೂ ತಾಲ್ಲೂಕುಗಳ ನಗರಸಭೆಗಳ, ಗ್ರಾಮಗಳ ಹಾಗೂ ಹೋಬಳಿಗಳ ವಿವರಗಳನ್ನು ನೀಡಲಾಗಿದೆ.

**ಕೋಷ್ಟಕ ೯: ಹೋಬಳಿ, ಗ್ರಾಮಗಳು, ನಗರಸಭೆಗಳ ವಿವರಗಳು**

| ತಾಲ್ಲೂಕು | ಹೋಬಳಿಗಳು | ಗ್ರಾಮ ಪಂಚಾಯಿತಿಗಳು | ಗ್ರಾಮಗಳು | ನಗರ ಸಭೆಗಳು | ಉಪ ಗ್ರಾಮಗಳು |
|---|---|---|---|---|---|
| ಕೋಲಾರ | ೭ | ೩೬ | ೩೬೧ | ೧ | – |
| ತೀರ್ಥಹಳ್ಳಿ | ೫ | ೩೮ | ೨೪೭ | ೧ | ೮೮೯ |

ಆಧಾರ: ಜಿಲ್ಲಾ ಅಂಕಿಅಂಶಗಳ ಅಧಿಕಾರಿಗಳ ಕಚೇರಿ, ಶಿವಮೊಗ್ಗ ಮತ್ತು ಕೋಲಾರ ಜಿಲ್ಲೆ

ಕೋಲಾರ ತಾಲ್ಲೂಕು ಹಾಗೂ ತೀರ್ಥಹಳ್ಳಿ ತಾಲ್ಲೂಕುಗಳಲ್ಲಿ ತಾಲ್ಲೂಕು ಕೇಂದ್ರ ಸ್ಥಳಗಳಲ್ಲಿ ಮಾತ್ರ ಒಂದೊಂದು ನಗರಸಭೆಗಳಿವೆ ಹಾಗೂ ಅನುಕ್ರಮವಾಗಿ ೭ ಮತ್ತು ೫ ಹೋಬಳಿಗಳನ್ನು, ೩೬೧ ಮತ್ತು ೨೪೭ ಗ್ರಾಮಗಳನ್ನು ಹಾಗೂ ೩೬ ಮತ್ತು ೩೮ ಗ್ರಾಮ ಪಂಚಾಯಿತಿಗಳನ್ನು ಹೊಂದಿವೆ.

### ೪.೬.೨. ಪ್ರತಿಕ್ರಯಿಸಿದವರ ಕೃಷಿಕ ಹಿನ್ನೆಲೆ

ಪ್ರತಿ ತಾಲ್ಲೂಕಿನಲ್ಲಿ ೨೦೦ ಜನ ರೈತರಿಂದ ಮಾಹಿತಿಯನ್ನು ಸಂಗ್ರಹಿಸಲಾಯಿತು. ಎಲ್ಲ ಸಾಮಾಜಿಕ, ಆರ್ಥಿಕ ವರ್ಗಗಳ ರೈತರು ಪ್ರತಿನಿಧಿಸಿರುವಂತೆ ಎಚ್ಚರವನ್ನು ವಹಿಸಲಾಯಿತು. ಪ್ರತಿಕ್ರಯಿಸಿದವರ ಕೃಷಿಕ ಹಿನ್ನೆಲೆಯ ವಿವರಗಳನ್ನು ಕೋಷ್ಟಕ ೧೦ರಲ್ಲಿ ಕೊಡಲಾಗಿದೆ. ಈ ಹಿನ್ನೆಲೆಯ ವಿವರಗಳ ವಿಶ್ಲೇಷಣೆ ಈ ಮುಂದಿನಂತಿದೆ:

### ೪.೬.೨.೧. ಕೋಲಾರ ತಾಲ್ಲೂಕು

ಮಾಹಿತಿ ಸಂಗ್ರಹಿಸಿದ ರೈತರಲ್ಲಿ ೧–೨ ಎಕರೆ ಕೃಷಿ ಭೂಮಿ ಹೊಂದಿದ್ದವರ ಸಂಖ್ಯೆ ೩೨ (ಶೇಕಡಾ ೧೬), ೨–೫ ಎಕರೆ ಇದ್ದವರು ೧೨೦ (ಶೇಕಡಾ ೬೦) ಹಾಗೂ ೫ ಎಕರೆಗಿಂತ ಹೆಚ್ಚು ಇದ್ದವರ ಸಂಖ್ಯೆ ೪೮ (ಶೇಕಡಾ ೨೪) ಇತ್ತು ಹಾಗೂ ಅವರಲ್ಲಿ ಕೃಷಿಯನ್ನು ಜೀವನಾಧಾರದ ಏಕೈಕ ಉದ್ಯೋಗವಾಗಿ ಹೊಂದಿದ್ದವರು ಅನುಕ್ರಮವಾಗಿ ೨೦ (ಶೇಕಡಾ ೧೦), ೧೦೨ (ಶೇಕಡಾ ೫೧) ಮತ್ತು ೩೫ (ಶೇಕಡಾ ೧೭.೫) ಮಂದಿ ಇದ್ದರು. ಕೃಷಿಯಲ್ಲದೆ ಜೀವನಾಧಾರಕ್ಕೆ ಇತರ ಉದ್ಯೋಗಗಳನ್ನು ಹೊಂದಿದ್ದವರು ಒಟ್ಟು ೪೩ (ಶೇಕಡಾ ೨೧.೫) ಮಂದಿ ಇದ್ದರು. ಅವರು ಕೈಗೊಳ್ಳುತ್ತಿದ್ದ ಇತರ ಉದ್ಯೋಗಗಳೆಂದರೆ ಅಂಗಡಿ ವ್ಯಾಪಾರ, ಹಿಟ್ಟಿನ ಗಿರಣಿ, ಹೈನುಗಾರಿಕೆ, ಸಣ್ಣಮಟ್ಟ

ಗುತ್ತಿಗೆ, ಟೊಮೇಟೊ ಮತ್ತು ಆಲೂಗೆಡ್ಡೆ ಕೊಯಿಲಿನ ಸಂದರ್ಭಗಳಲ್ಲಿ ಕಮೀಶನ್ ವ್ಯಾಪಾರ, ರೇಷ್ಮೆ ಗೂಡಿನ ಕಮೀಶನ್ ವ್ಯಾಪಾರ, ಟ್ರ್ಯಾಕ್ಟರ್ ಬಾಡಿಗೆಗೆ ನಡೆಸುವುದು, ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿನ ಉದ್ಯೋಗ ಮುಂತಾದುವು. ೨-೫ ಎಕರೆ ಭೂಮಿ ಹೊಂದಿದ್ದವರಲ್ಲಿ ಹೆಚ್ಚು ಮಂದಿ ಜಾನುವಾರುಗಳನ್ನು (೮೫ ಮಂದಿ- ಶೇಕಡಾ ೪೨.೫) ಹೊಂದಿದ್ದರು. ೧-೨ ಎಕರೆ ಭೂಮಿ ಹೊಂದಿದ್ದ ೨೯ ಮಂದಿ (ಶೇಕಡಾ ೧೪.೫) ಮತ್ತು ೫ ಎಕರೆಗಿಂತ ಹೆಚ್ಚು ಭೂಮಿ ಹೊಂದಿದ್ದ ರೈತರಲ್ಲಿ ೩೦ ಮಂದಿ (ಶೇಕಡಾ ೧೫) ಉಳುಮೆ ಎತ್ತು, ಹಾಲು ಕರೆಯುವ ಹಸು, ಎಮ್ಮೆ ಹಾಗೂ ಕುರಿ ಮತ್ತು ಮೇಕೆಗಳನ್ನು ಹೊಂದಿದ್ದರು. ಪ್ರತಿಕ್ರಯಿಸಿದ ೨೦೦ ಮಂದಿಯಲ್ಲಿ ಆರು ಮಾತ್ರ (ಶೇಕಡಾ ೩) ಟ್ರ್ಯಾಕ್ಟರ್ ಹೊಂದಿದ್ದರು ಹಾಗೂ ಅವರು ೫ ಎಕರೆಗಿಂತ ಹೆಚ್ಚು ಭೂಮಿ ಹೊಂದಿದ್ದವರು. ಅವರು ಟ್ರ್ಯಾಕ್ಟರನ್ನು ತಮ್ಮ ಭೂಮಿಯಲ್ಲಿ ಕೃಷಿ ಉದ್ದೇಶಗಳಿಗೆ ಅದನ್ನು ಬಳಸುವುದಲ್ಲದೆ ಬೇರೆ ರೈತರಿಗೆ ಬಾಡಿಗೆಗೆ ಸಹ ನೀಡುತ್ತಿದ್ದರು.

**೪.೬.೨.೨. ತೀರ್ಥಹಳ್ಳಿ ತಾಲ್ಲೂಕು**

ಪ್ರತಿಕ್ರಯಿಸಿದ ತೀರ್ಥಹಳ್ಳಿ ತಾಲ್ಲೂಕಿನ ರೈತರಲ್ಲಿ ೧-೨ ಎಕರೆ ಭೂಮಿ ಹೊಂದಿದ್ದ ರೈತರು ೨೨ (ಶೇಕಡಾ ೧೧), ೨-೫ ಎಕರೆ ಹೊಂದಿದ್ದವರು ೯೮ (ಶೇಕಡಾ ೪೯) ಮತ್ತು ೫ ಎಕರೆಗಿಂತ ಹೆಚ್ಚು ಇದ್ದವರು ೮೦ (ಶೇಕಡಾ ೪೦) ಮಂದಿ ಇದ್ದರು. ಅವರಲ್ಲಿ ಕೃಷಿಯನ್ನು ಮಾತ್ರ ಜೀವನೋಪಾಯಕ್ಕಾಗಿ ಅನುಸರಿಸುತ್ತಿದ್ದವರು ಅನುಕ್ರಮವಾಗಿ ೮ (ಶೇಕಡಾ ೪), ೭೦ (ಶೇಕಡಾ ೩೫) ಮತ್ತು ೬೪ (ಶೇಕಡಾ ೩೨) ಮಂದಿ ಆಗಿದ್ದರು. ೫೮ ಮಂದಿ (ಶೇಕಡಾ ೨೯) ಕೃಷಿಯಲ್ಲದೆ ಇತರ ಉದ್ಯೋಗಗಳನ್ನು ಜೀವನೋಪಾಯಕ್ಕಾಗಿ ನಡೆಸುತ್ತಿದ್ದರು. ಅಂತಹ ಪ್ರಮುಖ ಉದ್ಯೋಗಗಳೆಂದರೆ ಅಂಗಡಿ ವ್ಯಾಪಾರ, ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಉದ್ಯೋಗ, ಅಡಿಕೆ, ವೆನಿಲ್ಲಾ ಕಮೀಶನ್ ವ್ಯಾಪಾರ, ಹೈನುಗಾರಿಕೆ, ಸಣ್ಣಮಟ್ಟ ಗುತ್ತಿಗೆ, ಟ್ರ್ಯಾಕ್ಟರ್ ಬಾಡಿಗೆಗೆ ನೀಡುವುದು ಮುಂತಾದುವು. ೧-೨ ಎಕರೆ ಹೊಂದಿದ್ದವರಲ್ಲಿ ೧೬ (ಶೇಕಡಾ ೮), ೨-೫ ಎಕರೆ ಹೊಂದಿದ್ದವರಲ್ಲಿ ೫೪ (ಶೇಕಡಾ ೨೭) ಮತ್ತು ೫ ಎಕರೆಗಿಂತ ಹೆಚ್ಚು ಭೂಮಿ ಹೊಂದಿದ್ದವರಲ್ಲಿ ೩೬ (ಶೇಕಡಾ ೧೮) ಮಂದಿ ಜಾನುವಾರುಗಳನ್ನು ಹೊಂದಿದ್ದರು ಹಾಗೂ ಒಟ್ಟು ೫ ಮಂದಿ (ಶೇಕಡಾ ೨.೫) ಟ್ರ್ಯಾಕ್ಟರ್‌ಗಳನ್ನು ಹೊಂದಿದ್ದರು.

**೪.೬.೩. ಶೈಕ್ಷಣಿಕ ಮಟ್ಟ**

ಎರಡೂ ತಾಲ್ಲೂಕುಗಳಲ್ಲಿ ಓದು-ಬರಹ ಬಲ್ಲ ರೈತರನ್ನು ಮಾತ್ರ ಸಮೀಕ್ಷೆಗೆ ಆರಿಸಿಕೊಳ್ಳಲಾಯಿತು. ಪ್ರತಿಕ್ರಯಿಸಿದ ರೈತರನ್ನು ಅವರ ವಯಸ್ಸಿಗನುಗುಣವಾಗಿ ಹಾಗೂ

## ಕೋಷ್ಟಕ ೧೦: ಪ್ರತಿಕ್ರಯಿಸಿದವರ ಕೃಷಿಕ ಹಿನ್ನೆಲೆ

ಕೋಲಾರ ತಾಲ್ಲೂಕು

| ಕೃಷಿಕರ ಭೂಹಿಡುವಳಿ ಗಾತ್ರ | ಪ್ರತಿಕ್ರಯಿಸಿದವರ ಸಂಖ್ಯೆ | ಜೀವನೋಪಾಯ | | ಜಾನುವಾರು ಹೊಂದಿರುವವರು | ಟ್ರ್ಯಾಕ್ಟರ್ ಹೊಂದಿರುವವರು |
|---|---|---|---|---|---|
| | | ಕೃಷಿ ಮಾತ್ರ | ಜೊತೆಗೆ ಇತರ ಉದ್ಯೋಗ | | |
| ೧-೨ ಎಕರೆ | ೩೨ (೧೬%) | ೨೦ (೧೦%) | ೧೨ (೬%) | ೨೯ (೧೪.೫%) | ೦ |
| ೨-೫ ಎಕರೆ | ೧೨೦ (೬೦%) | ೧೦೨ (೫೧%) | ೧೮ (೯%) | ೮೫ (೪೨.೪%) | ೦ |
| ೫ ಎಕರೆಗಿಂತ ಹೆಚ್ಚು | ೪೮ (೨೪%) | ೩೫ (೧೭.೫%) | ೧೩ (೬.೫%) | ೩೦ (೧೫%) | ೬ (೩%) |

ಪ್ರತಿಕ್ರಯಿಸಿದವರ ಒಟ್ಟು ಸಂಖ್ಯೆ: ೨೦೦

ತೀರ್ಥಹಳ್ಳಿ ತಾಲ್ಲೂಕು

| ಕೃಷಿಕರ ಭೂಹಿಡುವಳಿ ಗಾತ್ರ | ಪ್ರತಿಕ್ರಯಿಸಿದವರ ಸಂಖ್ಯೆ | ಜೀವನೋಪಾಯ | | ಜಾನುವಾರು ಹೊಂದಿರುವವರು | ಟ್ರ್ಯಾಕ್ಟರ್ ಹೊಂದಿರುವವರು |
|---|---|---|---|---|---|
| | | ಕೃಷಿ ಮಾತ್ರ | ಜೊತೆಗೆ ಇತರ ಉದ್ಯೋಗ | | |
| ೧-೨ ಎಕರೆ | ೨೨ (೧೧%) | ೮ (೪%) | ೧೪ (೭%) | ೧೬ (೮%) | ೦ |
| ೨-೫ ಎಕರೆ | ೯೮ (೪೯%) | ೭೦ (೩೫%) | ೨೮ (೧೪%) | ೫೪ (೨೭%) | ೧ |
| ೫ ಎಕರೆಗಿಂತ ಹೆಚ್ಚು | ೮೦ (೪೦%) | ೬೪ (೩೨%) | ೧೬ (೮%) | ೩೬ (೧೮%) | ೪ |

ಪ್ರತಿಕ್ರಯಿಸಿದವರ ಒಟ್ಟು ಸಂಖ್ಯೆ: ೨೦೦

ಅವರು ಪಡೆದಿರುವ ಶಾಲಾ ಶಿಕ್ಷಣದ ಅನುಗುಣವಾಗಿ ಮಾಹಿತಿಯನ್ನು ವರ್ಗೀಕರಿಸಿಕೊಳ್ಳಲಾಗಿದೆ. ಆ ವಿವರಗಳನ್ನು ಕೋಷ್ಟಕ ೧೧ರಲ್ಲಿ ನೀಡಲಾಗಿದೆ. ರೈತರ ಶೈಕ್ಷಣಿಕ ಮಾಹಿತಿಯ ವಿಶ್ಲೇಷಣೆ ಈ ಮುಂದಿನಂತಿದೆ:

**೪.೬.೩.೧. ಕೋಲಾರ ತಾಲ್ಲೂಕು**

ಪ್ರತಿಕ್ರಯಿಸಿದ ಒಟ್ಟು ೨೦೦ ರೈತರಲ್ಲಿ ೨೫ ವರ್ಷ ವಯಸ್ಸಿನವರೆಗಿನ ರೈತರು ೨೩ ಮಂದಿ (೧೧.೫%), ೨೬-೪೦ ವರ್ಷ ವಯಸ್ಸಿನವರು ೧೦೯ (೫೪.೫%), ೪೧-೬೦ ವರ್ಷ ವಯಸ್ಸಿನವರು ೪೩ (೨೧.೫%) ಮತ್ತು ೬೧-೭೫ ವಯಸ್ಸಿನವರು ೨೫ (೧೨.;೫%) ಮಂದಿ ಇದ್ದರು.

೨೫ರವರೆಗಿನ ವಯಸ್ಸಿನಲ್ಲಿ ಪ್ರೌಢಶಾಲೆಯವರೆಗೆ ಅಥವಾ ಇನ್ನೂ ಕಡಮೆ ಓದಿದ, ಆದರೆ ಓದು-ಬರಹ ಬಲ್ಲಂತಹವರು ೧೩ (೬.೫%), ಎಸ್.ಎಸ್.ಎಲ್.ಸಿ.ಯವರೆಗೆ ಓದಿದವರು ೭ (೩.೫%), ಪಿ.ಯು.ಸಿ. ಮಾಡಿದವರು ೩ (೧.೫%) ಹಾಗೂ ಪದವೀಧರರಾದವರು ಯಾರೂ ಇರಲಿಲ್ಲ.

೨೬ರಿಂದ ೪೦ ವರ್ಷ ವಯಸ್ಸಿನವರಲ್ಲಿ ಪ್ರೌಢಶಾಲೆ ಅಥವಾ ಇನ್ನೂ ಕಡಮೆ ಓದಿದವರು ೭೨ ಮಂದಿ (೩೬%), ಎಸ್.ಎಸ್.ಎಲ್.ಸಿ. ಓದಿದವರು ೧೮ (೯%), ಪಿ.ಯು.ಸಿ. ಓದಿದವರು ೧೧ (೫.೫%) ಮತ್ತು ಪದವೀಧರರು ೮ ಮಂದಿ (೪%) ಇದ್ದರು. ಪ್ರತಿಕ್ರಯಿಸಿದ ೪೧ರಿಂದ ೬೦ ವಯಸ್ಸಿನ ರೈತರಲ್ಲಿ ಪ್ರೌಢಶಾಲೆ ಅಥವಾ ಇನ್ನೂ ಕಡಮೆ ಓದಿದ ರೈತರು ೨೯ (೧೪.೫%), ಎಸ್.ಎಸ್.ಎಲ್.ಸಿ. ಮಾಡಿದವರು ೮ (೪%), ಪಿ.ಯು.ಸಿ. ಮಾಡಿದವರು ೪ (೨%) ಮತ್ತು ಪದವೀಧರರು ಇಬ್ಬರು (೧%) ಇದ್ದರು.

೬೧ರಿಂದ ೭೫ ವಯಸ್ಸಿನ ರೈತರಲ್ಲಿ ಪ್ರೌಢಶಾಲೆಯವರೆಗೆ ಅಥವಾ ಇನ್ನೂ ಕಡಮೆ ಓದಿದ ರೈತರು ೨೩ ಮಂದಿ (೧೧.೫%), ಎಸ್.ಎಸ್.ಎಲ್.ಸಿ ಅಥವಾ ಸಮಾನಾಂತರ ಓದಿದವರು ಇಬ್ಬರು (೧%) ಇದ್ದರು ಹಾಗೂ ಪಿ.ಯು.ಸಿ. ಅಥವಾ ಪದವೀಧರರಾದವರು ಯಾರೂ ಇರಲಿಲ್ಲ.

ಕೋಲಾರ ಜಿಲ್ಲೆ ಸಾಕ್ಷರತೆಯಲ್ಲಿ ಮೊದಲಿನಿಂದಲೂ ಹಿಂದುಳಿದಿದ್ದು ಕಳೆದ ಒಂದೆರಡು ದಶಕಗಳಲ್ಲಿ ಸುಧಾರಣೆ ಕಾಣುತ್ತಿದೆ. ರಾಜ್ಯದ ಸರಾಸರಿ ಸಾಕ್ಷರತೆ ಶೇ.೬೭ರಷ್ಟಿದ್ದರೂ ಕೋಲಾರ ತಾಲ್ಲೂಕಿನ ಸಾಕ್ಷರತೆ ಶೇ.೬೩ರಷ್ಟಿದೆ.

## ಕೋಷ್ಟಕ ೧೧: ಕ್ಷೇತ್ರ ಅಧ್ಯಯನ ನಡೆಸಿದ ಪ್ರದೇಶಗಳ ರೈತರ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ವಿವರಗಳು

ಕೋಲಾರ ತಾಲ್ಲೂಕು

| ಪ್ರತಿಕ್ರಯಿಸಿದವರ ವಯಸ್ಸು | ಪ್ರತಿಕ್ರಯಿಸಿದವರ ಸಂಖ್ಯೆ | ಶಿಕ್ಷಣ | | | |
|---|---|---|---|---|---|
| | | ಪ್ರೌಢಶಾಲೆ/ ಓದುಬಲ್ಲವರು | ಎಸ್.ಎಸ್.ಎಲ್.ಸಿ. | ಪಿ.ಯು.ಸಿ. | ಪದವೀಧರ |
| ೨೫ರವರೆಗೆ | ೨೩ (೧೧.೫%) | ೧೩ (೬.೫%) | ೭ (೩.೫%) | ೩ (೧.೫%) | ೦ |
| ೨೬-೪೦ | ೧೦೯ (೫೪.೫%) | ೭೨ (೩೬%) | ೧೮ (೯%) | ೧೧ (೫.೫%) | ೮ (೪%) |
| ೪೧-೬೦ | ೪೩ (೨೧.೫%) | ೨೯ (೧೪.೫%) | ೮ (೪%) | ೪ (೨%) | ೨ (೧%) |
| ೬೧-೭೫ | ೨೫ (೧೨.೫%) | ೨೩ (೧೧.೫%) | ೨ (೧%) | ೦ | ೦ |

ಪ್ರತಿಕ್ರಯಿಸಿದವರ ಒಟ್ಟು ಸಂಖ್ಯೆ: ೨೦೦

ಕೋಷ್ಟಕ ೧೧ ಮುಂದುವರಿದಿದೆ

ಕೋಷ್ಟಕ ೧೧ (ಮುಂದುವರಿದುದು): ಕ್ಷೇತ್ರ ಅಧ್ಯಯನ ನಡೆಸಿದ ಪ್ರದೇಶಗಳ ರೈತರ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ವಿವರಗಳು

ತೀರ್ಥಹಳ್ಳಿ ತಾಲ್ಲೂಕು

| ಪ್ರತಿಕ್ರಯಿಸಿದವರ ವಯಸ್ಸು | ಪ್ರತಿಕ್ರಯಿಸಿದವರ ಸಂಖ್ಯೆ | ಶಿಕ್ಷಣ | | | |
|---|---|---|---|---|---|
| | | ಪ್ರೌಢಶಾಲೆ/ ಓದುಬಲ್ಲವರು | ಎಸ್.ಎಸ್.ಎಲ್.ಸಿ. | ಪಿ.ಯು.ಸಿ. | ಪದವೀಧರ |
| ೨೫ರವರೆಗೆ | ೪೫ (೨೨.೫%) | ೪ (೨%) | ೮ (೪%) | ೧೮ (೯%) | ೧೫ (೭.೫%) |
| ೨೬-೪೦ | ೮೮ (೪೪%) | ೨೦ (೧೦%) | ೨೯ (೧೪.೫%) | ೨೭ (೧೩.೫%) | ೧೨ (೬%) |
| ೪೧-೬೦ | ೫೫ (೨೭.೫%) | ೧೭ (೮.೫%) | ೧೮ (೯%) | ೧೩ (೬.೫%) | ೭ (೩.೫%) |
| ೬೧-೭೫ | ೧೨ (೬%) | ೬ (೩%) | ೪ (೨%) | ೨ (೧%) | ೦ |

ಪ್ರತಿಕ್ರಯಿಸಿದವರ ಒಟ್ಟು ಸಂಖ್ಯೆ: ೨೦೦

**೪.೬.೩.೨. ತೀರ್ಥಹಳ್ಳಿ ತಾಲ್ಲೂಕು**

ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಪ್ರಶ್ನಾವಳಿಗೆ ಪ್ರತಿಕ್ರಯಿಸಿದ ಇನ್ನೂರು ರೈತರಲ್ಲಿ ೨೫ ವರ್ಷ ವಯಸ್ಸಿನವರೆಗಿನವರು ೪೫ (೨೨.೫%), ೨೬-೪೦ ವರ್ಷ ವಯಸ್ಸಿನವರು ೮೮ (೪೪%), ೪೧ರಿಂದ ೬೦ ವರ್ಷ ವಯಸ್ಸಿನವರು ೪೪ (೨೭.೫%) ಹಾಗೂ ೬೧ರಿಂದ ೭೫ ವರ್ಷ ವಯಸ್ಸಿನವರು ೧೨ (೬%) ಮಂದಿ ಇದ್ದರು.

೨೫ ವರ್ಷ ವಯಸ್ಸಿನ ರೈತರಲ್ಲಿ ಪ್ರೌಢಶಾಲೆ ಅಥವಾ ಇನ್ನೂ ಕಡಮೆ ಓದಿದ, ಎಸ್.ಎಸ್.ಎಲ್.ಸಿ. ಮಾಡಿರುವ, ಪಿ.ಯು.ಸಿ. ಓದಿರುವ ಹಾಗೂ ಪದವೀಧರರಾಗಿರುವ ರೈತರ ಸಂಖ್ಯೆ ಅನುಕ್ರಮವಾಗಿ ೪ (೨%), ೮ (೪%), ೧೮ (೯%) ಮತ್ತು ೧೫ (೭.೫%) ಇತ್ತು. ಅದೇ ೨೬ರಿಂದ ೪೦ ವರ್ಷ ವಯಸ್ಸಿನವರಲ್ಲಿ ಅನುಕ್ರಮವಾಗಿ ೨೦ (೧೦%), ೨೯ (೧೪.೫%), ೨೭ (೧೩.೫%) ಮತ್ತು ೧೨ (೬%) ಮಂದಿ ಇದ್ದರು. ೪೧ರಿಂದ ೬೦ ವರ್ಷ ವಯಸ್ಸಿನವರಲ್ಲಿ ಪ್ರೌಢಶಾಲೆಯವರೆಗೆ ಓದಿದವರು ೧೭ (೮.೫%), ಎಸ್.ಎಸ್.ಎಲ್.ಸಿ ಅಥವಾ ಸಮಾನಾಂತರ ಓದಿದವರು ೧೮ (೯%), ಪಿ.ಯು.ಸಿ.ವರೆಗೆ ಓದಿದವರು ೧೩ (೬.೫%) ಹಾಗೂ ಪದವೀಧರರಾಗಿದ್ದವರು ೭ ಮಂದಿ (೩.೫%) ಇದ್ದರು. ೬೧ರಿಂದ ೭೫ ವಯಸ್ಸಿನ ರೈತರಲ್ಲಿ ಪದವೀಧರರು ಯಾರೂ ಇರಲಿಲ್ಲ, ಆದರೆ ಪಿ.ಯು.ಸಿ.ವರೆಗೆ ಓದಿದವರು ಇಬ್ಬರು (೧%), ಎಸ್.ಎಸ್.ಎಲ್.ಸಿ. ಅಥವಾ ಸಮಾನಾಂತರ ಓದಿದವರು ನಾಲ್ಕು ಜನ (೨%) ಮತ್ತು ಪ್ರೌಢಶಾಲೆಯವರೆಗೆ ಅಥವಾ ಇನ್ನೂ ಕಡಮೆ ಓದಿರುವ ಆದರೆ ಓದು-ಬರಹ ಬಲ್ಲಂತರವರು ೬ ಮಂದಿ (೩%) ಇದ್ದರು.

**೪.೬.೪. ಸಮೂಹ ಮಾಧ್ಯಮಗಳಲ್ಲಿ ಭಾಗವಹಿಸುವಿಕೆ**

ಓದು-ಬರಹ ಬಲ್ಲ ಎಲ್ಲ ರೈತರೂ ಸಮೂಹ ಮಾಧ್ಯಮಗಳಾದಂತಹ ದಿನ/ವಾರ್ತಾಪತ್ರಿಕೆ, ಸಾಪ್ತಾಹಿಕ, ಮಾಸಿಕ, ತ್ರೈಮಾಸಿಕ ಮುಂತಾದ ನಿಯತಕಾಲಿಕಗಳನ್ನು ಚಂದಾದಾರರಾಗಿ ಅಥವಾ ಗ್ರಂಥಾಲಯಗಳಲ್ಲಿ ಓದುತ್ತಾರೆಯೆ ಎಂಬುದನ್ನು ತಿಳಿಯಲು ಹಾಗೂ ಈ ರೀತಿಯ ಓದುಗರು ವಾರ್ತಾಪತ್ರಿಕೆಗಳಲ್ಲಿ ಪ್ರಕಟವಾಗುವ ಕೃಷಿ ಪುರವಣಿಗಳನ್ನು, ಕೃಷಿ ಅಂಕಣಗಳನ್ನು ಹಾಗೂ ಕೃಷಿ ಲೇಖನಗಳನ್ನು ಮತ್ತು ಕೃಷಿ ನಿಯತಕಾಲಿಕಗಳನ್ನು ಓದುತ್ತಾರೆಯೆ ಎಂಬ ಬಗ್ಗೆಯೂ ಅಧ್ಯಯನ ನಡೆಸಲಾಯಿತು. ಅತ್ಯಂತ ಜನಪ್ರಿಯ ಮಾಧ್ಯಮವಾಗಿರುವಂತಹ ದೂರದರ್ಶನದಲ್ಲಿಯೂ ಕೃಷಿ ಕಾರ್ಯಕ್ರಮಗಳು ಬಿತ್ತರವಾಗುತ್ತಿದ್ದು ರೈತರು ಅವುಗಳನ್ನು ವೀಕ್ಷಿಸುತ್ತಾರೆಯೆ ಎಂಬ ಬಗ್ಗೆಯೂ ಮಾಹಿತಿ ಸಂಗ್ರಹಿಸಲಾಯಿತು.

ಕಂಪ್ಯೂಟರ್ ಮತ್ತು ಇಂಟರ್‌ನೆಟ್ ಇನ್ನು ಕೆಲವೇ ವರ್ಷಗಳಲ್ಲಿ ಭಾರತದ ಹಳ್ಳಿಗೂ ಪ್ರವೇಶಿಸಲಿದೆ. ಈಗಾಗಲೇ ಕೆಲವು ರೈತರು ಕಂಪ್ಯೂಟರ್ ಮತ್ತು ಇಂಟರ್‌ನೆಟ್ ಬಳಕೆಯನ್ನು ಆರಂಭಿಸಿದ್ದಾರೆ. ಕಂಪ್ಯೂಟರ್ ಬಳಕೆಯ ಬಗೆಗೂ ಮಾಹಿತಿಯನ್ನು ಸಂಗ್ರಹಿಸಲಾಯಿತು. ಆ ಮಾಹಿತಿಯ ವಿವರಗಳನ್ನು ಕೋಷ್ಟಕ ೧೨ರಲ್ಲಿ ಕೊಡಲಾಗಿದೆ.

**೪.೬.೪.೧. ಕೋಲಾರ ತಾಲ್ಲೂಕು**

ಪ್ರತಿಕ್ರಯಿಸಿದ ಕೋಲಾರ ತಾಲ್ಲೂಕಿನ ಸಾಕ್ಷರ ರೈತರಲ್ಲಿ ೧೨೫ (೬೨.೫%) ಮಂದಿ ನಿಯತವಾಗಿ ದಿನಪತ್ರಿಕೆ/ವಾರ್ತಾಪತ್ರಿಕೆಗಳನ್ನು ಓದುತ್ತಿದ್ದರು. ಅದರಲ್ಲಿ ೩೦ (೧೫%) ಮಂದಿ ಕೃಷಿ ಲೇಖನ ಮತ್ತು ಕೃಷಿ ಅಂಕಣಗಳನ್ನು ಓದುತ್ತಿದ್ದರು. ಅದರಲ್ಲಿ ಕೆಲವರನ್ನು ಹೊರತುಪಡಿಸಿ ಉಳಿದವರು ಆ ಅಂಕಣ ಮತ್ತು ಪುರವಣಿಗಳನ್ನು ತೀರಾ ಆಸಕ್ತಿಯಿಂದ ಗಮನಿಸುತ್ತಿರಲಿಲ್ಲ. ದಿನಪತ್ರಿಕೆ ಓದುವಾಗ ಕೃಷಿ ಲೇಖನಗಳು ಕಣ್ಣಿಗೆ ಕಂಡಾಗಷ್ಟೆ ಅವುಗಳನ್ನು ಗಮನಿಸುತ್ತಿದ್ದರು. ವಾರದಲ್ಲಿ ಯಾವ ದಿನ ಕೃಷಿ ಅಂಕಣ ಅಥವಾ ಪುರವಣಿ ಪ್ರಕಟವಾಗುತ್ತದೆನ್ನುವುದೂ ಹಲವರಿಗೆ ತಿಳಿದಿರಲಿಲ್ಲ. ಕನ್ನಡ ವಾರಪತ್ರಿಕೆ, ಮಾಸಪತ್ರಿಕೆಗಳನ್ನು ೪೦ (೨೦%) ಮಂದಿ ಓದುತ್ತಿದ್ದರು. ಆದರೆ ಪ್ರತ್ಯೇಕ ಕೃಷಿ ಪತ್ರಿಕೆಗಳನ್ನು ನಿಯತವಾಗಿ ಓದುತ್ತಿದ್ದವರು ಇಬ್ಬರು (೧%) ಮಾತ್ರ.. ಪತ್ರಿಕೆಗಳಿಗೆ ಹೋಲಿಸಿದಲ್ಲಿ ದೂರದರ್ಶನ ರೈತರಿಗೆ ಹೆಚ್ಚು ಆಕರ್ಷಣೀಯ ಮಾಧ್ಯಮವಾಗಿತ್ತು. ಪ್ರತಿಕ್ರಯಿಸಿದವರಲ್ಲಿ ಬಹುಪಾಲು ಜನ (೧೭೨ ಮಂದಿ [೮೬%]) ದೂರದರ್ಶನವನ್ನು ನಿಯತವಾಗಿ ವೀಕ್ಷಿಸುತ್ತಿದ್ದರು. ಅದರಲ್ಲಿ ೧೮ ಜನ (೯%) ಕೃಷಿ ಕಾರ್ಯಕ್ರಮಗಳನ್ನು ವೀಕ್ಷಿಸುವವರಾಗಿದ್ದರು. ಕಂಪ್ಯೂಟರ್ ಅಥವಾ ಕೃಷಿಮಾಹಿತಿಗಾಗಿ ಇಂಟರ್‌ನೆಟ್ ಬಳಸುವ ರೈತರು ನಾನು ಸಮೀಕ್ಷೆ ನಡೆಸಿದ ಕೋಲಾರ ತಾಲ್ಲೂಕಿನ ರೈತರಲ್ಲಿ ಒಬ್ಬರೂ ಕಂಡುಬರಲಿಲ್ಲ.

**೪.೬.೪.೨. ತೀರ್ಥಹಳ್ಳಿ ತಾಲ್ಲೂಕು**

ಸಮೀಕ್ಷೆ ನಡೆಸಿದ ಇನ್ನೂರು ಜನ ತೀರ್ಥಹಳ್ಳಿಯ ಸಾಕ್ಷರ ರೈತರಲ್ಲಿ ೧೬೦ ಮಂದಿ (೮೦%) ದಿನಪತ್ರಿಕೆ/ವಾರ್ತಾಪತ್ರಿಕೆಗಳನ್ನು ಓದುತ್ತಿದರು ಹಾಗೂ ಅವರಲ್ಲಿ ಶೇಕಡಾ ೫೧ರಷ್ಟು ಜನ (೧೦೨) ಕೃಷಿ ಲೇಖನ/ಅಂಕಣ ಮತ್ತು ಕೃಷಿ ಪುರವಣಿಗಳನ್ನು ಓದುತ್ತಿದ್ದರು. ವಾರಪತ್ರಿಕೆ ಮತ್ತು ಮಾಸಪತ್ರಿಕೆಗಳಂತಹ ನಿಯತಕಾಲಿಕಗಳನ್ನು ಓದುವವರು ೧೨೭ ಮಂದಿ ಇದ್ದರು (೬೩.೫%) ಹಾಗೂ ನಿಯತವಾಗಿ ಕೃಷಿ ಪತ್ರಿಕೆ/ನಿಯತಕಾಲಿಕಗಳನ್ನು ಓದುವವರು ೪೮ ಜನ (೨೪%) ಇದ್ದರು. 'ಅಡಿಕೆ ಪತ್ರಿಕೆ'ಗೆ ಕೆಲವರು ಚಂದಾದಾರರಾಗಿದ್ದರು. ದೂರದರ್ಶನ ಎಂದಿನಂತೆ ಜನಪ್ರಿಯ ಮಾಧ್ಯಮವಾಗಿದ್ದು ೨೦೦ರಲ್ಲಿ ೧೮೦ (೯೦%) ಜನ ನಿಯತವಾಗಿ ವೀಕ್ಷಿಸುತ್ತಿದ್ದರು ಹಾಗೂ ಅದರಲ್ಲಿ ೪೨ ಜನ (೨೧%) ಕೃಷಿ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಿದ್ದರು. ಕಂಪ್ಯೂಟರ್ ಬಳಸುವವರು ಕೆಲವರಿದ್ದು (೪ ಜನ, ೨%) ಅದರಲ್ಲಿ ಇಬ್ಬರು ಆಗಾಗ ಕೃಷಿ ಮಾಹಿತಿಗಾಗಿ ಇಂಟರ್‌ನೆಟ್ ಬಳಸುತ್ತಿದ್ದರು.

## ಕೋಷ್ಟಕ ೧೨: ಸಮೂಹ ಮಾಧ್ಯಮಗಳಲ್ಲಿ ಭಾಗವಹಿಸುವಿಕೆ

| ಕ್ರ.ಸಂ. | ವಿವರಗಳು | ಕೋಲಾರ ತಾಲ್ಲೂಕು | ತೀರ್ಥಹಳ್ಳಿ ತಾಲ್ಲೂಕು |
|---|---|---|---|
| ೧ | ದಿನಪತ್ರಿಕೆ/ವಾರ್ತಾಪತ್ರಿಕೆಗಳನ್ನು ಓದುವವರು<br>ಅವರಲ್ಲಿ ಕೃಷಿ ಲೇಖನ/ಅಂಕಣ ಓದುವವರು | ೧೨೫ (೬೨.೫%)<br>೩೦ (೧೫%) | ೧೬೦ (೮೦%)<br>೧೦೨ (೫೧%) |
| ೨ | ನಿಯತಕಾಲಿಕೆ/ಪತ್ರಿಕೆಗಳನ್ನು ಓದುವವರು<br>ಅವರಲ್ಲಿ ಕೃಷಿ ಪತ್ರಿಕೆ ಓದುವವರು | ೪೦ (೨೦%)<br>೨ (೧%) | ೧೨೭ (೬೩.೫%)<br>೪೮ (೨೪%) |
| ೩ | ದೂರದರ್ಶನ ವೀಕ್ಷಿಸುವವರು<br>ಅವರಲ್ಲಿ ಕೃಷಿ ಕಾರ್ಯಕ್ರಮ ವೀಕ್ಷಿಸುವವರು | ೧೭೨ (೮೬%)<br>೧೮ (೯%) | ೧೮೦ (೯೦%)<br>೪೨ (೨೧%) |
| ೪ | ಕಂಪ್ಯೂಟರ್ ಬಳಸುವವರು<br>ಅವರಲ್ಲಿ ಇಂಟರ್‌ನೆಟ್ ಮೂಲಕ ಕೃಷಿ ಮಾಹಿತಿ ಪಡೆಯುವವರು | ೦<br>೦ | ೪ (೨%)<br>೨ (೧%) |

ಪ್ರತಿಕ್ರಯಿಸಿದವರು ಪ್ರತಿ ತಾಲ್ಲೂಕಿನಲ್ಲಿ ಒಟ್ಟು ೨೦೦ ಮಂದಿ

### ೪.೬.೫. ಕೃಷಿ ಪತ್ರಿಕೆ, ಅಂಕಣಗಳಿಗೆ ರೈತರ ಪ್ರತಿಕ್ರಿಯೆ

ಕೃಷಿ ಪತ್ರಿಕೆ ಹಾಗೂ ಅಂಕಣಗಳನ್ನು ನಿಯತವಾಗಿ ಓದುತ್ತಿದ್ದ ರೈತರನ್ನು ಆ ಪತ್ರಿಕೆ, ಅಂಕಣಗಳಲ್ಲಿ ಪ್ರಕಟವಾಗುವ ವಿಷಯಗಳ ಬಗೆಗೆ, ಅವುಗಳ ಉಪಯುಕ್ತತೆಗಳ ಬಗೆಗೆ, ಅವುಗಳ ಭಾಷೆಯ ಸರಳತೆಯ ಬಗೆಗೆ. ರೈತರು ಅವುಗಳನ್ನು ಓದಿ ತಮ್ಮ ಬೇಸಾಯದಲ್ಲಿ ಅವುಗಳನ್ನು ಅಳವಡಿಸಿಕೊಳ್ಳುತ್ತಾರೆಂಬ ಹಾಗೂ ಅವು ಸಮಯೋಚಿತವಾಗಿರುತ್ತವೆಯೆ ಎಂಬ ವಿಷಯಗಳ ಬಗೆಗೆ ಮಾಹಿತಿಯನ್ನು ಸಂಗ್ರಹಿಸಿ ಕೋಷ್ಟಕ ೧೩ರಲ್ಲಿ ಕೊಡಲಾಗಿದೆ. ಸಂಗ್ರಹಿಸಿದ ರೈತರ ಮೇಲಿನ ಕೃಷಿ ಸಾಹಿತ್ಯ ಪ್ರಭಾವದ ಅಂಕಿಅಂಶಗಳನ್ನು ಸಂಖ್ಯಾಶಾಸ್ತ್ರೀಯ ವಿಶ್ಲೇಷಣಾ ವಿಧಾನವಾದ $X^2$ ಪರೀಕ್ಷೆಗೆ ಒಳಪಡಿಸಿ ಪ್ರಭಾವದ ಗಮನಾರ್ಹತೆಯನ್ನು ತುಲನಾತ್ಮಕವಾಗಿ ಕಂಡುಹಿಡಿದು $X^2$ ಮೌಲ್ಯವನ್ನೂ ಕೊಡಲಾಗಿದೆ.

### ೪.೬.೫.೧. ಲೇಖನಗಳ ಉಪಯುಕ್ತತೆ

ಕೃಷಿ ಪತ್ರಿಕೆ, ಅಂಕಣ ಓದುತ್ತಿದ್ದ ಕೋಲಾರ ತಾಲ್ಲೂಕಿನ ರೈತರಲ್ಲಿ ಶೇಕಡಾ ೩೦ರಷ್ಟು ರೈತರು ಅವು ಉಪಯುಕ್ತವಾಗಿದೆಯೆಂದರೆ, ಶೇಕಡಾ ೨೦ ಇಲ್ಲವೆಂದರು ಹಾಗೂ ಶೇಕಡಾ ೫೦ ರೈತರು ಗೊತ್ತಿಲ್ಲವೆಂದರು. ಸಾಮಾನ್ಯವಾಗಿ ಪತ್ರಿಕೆಯಲ್ಲಿ ಪ್ರಕಟವಾಗುವ ವಿಷಯಗಳೆಲ್ಲವೂ ಉಪಯುಕ್ತವಾಗಿರುತ್ತವೆ ಎನ್ನುವುದು ಕೆಲ ರೈತರ ಅಭಿಪ್ರಾಯವಾಗಿತ್ತು. ಬಹಳಷ್ಟು ದಿನಪತ್ರಿಕೆ ಓದುವ ರೈತರು ಕೃಷಿ ವಿಷಯ/ಲೇಖನ ಕಂಡಾಗ ಅವುಗಳಲ್ಲಿ ತಮ್ಮ ಆಸಕ್ತಿಯ ವಿಷಯವಿದ್ದಲ್ಲಿ ಮಾತ್ರ ಓದುತ್ತಿದ್ದರು, ಇಲ್ಲದಿದ್ದಲ್ಲಿ ಅವುಗಳ ಬಗೆಗೆ ಗಮನವೇ ಹರಿಸುತ್ತಿರಲಿಲ್ಲ. ಬರಹಗಳ ಉಪಯುಕ್ತತೆಯ ಬಗೆಗೆ ಕೋಲಾರದ ರೈತರಿಗೆ ಹೋಲಿಸಿದಲ್ಲಿ ತೀರ್ಥಹಳ್ಳಿ ತಾಲ್ಲೂಕಿನ ರೈತರಲ್ಲಿ ಗಮನಾರ್ಹವಾಗಿ ಹೆಚ್ಚು ಜನ ಲೇಖನಗಳು ಉಪಯುಕ್ತವಾಗಿರುತ್ತವೆಂದರು. ಶೇಕಡಾ ೫೨ರಷ್ಟು ರೈತರು ಬರಹಗಳು ಉಪಯುಕ್ತವಾಗಿರುತ್ತವೆಂದರು ಹಾಗೂ ಶೇಕಡಾ ೧೮ ರೈತರು ಇಲ್ಲವೆಂದರೆ ಶೇಕಡಾ ೩೦ ರೈತರು ಗೊತ್ತಿಲ್ಲವೆಂದರು.

### ೪.೬.೫.೨. ಪ್ರಕಟಿತ ವಿಷಯಗಳ ಅರ್ಥಪೂರ್ಣತೆ

ಕೃಷಿ ಪತ್ರಿಕೆ, ಅಂಕಣಗಳಲ್ಲಿ ಪ್ರಕಟವಾಗುವ ಬರಹಗಳು ರೈತರಿಗೆ ಅರ್ಥವಾಗುವ ರೀತಿಯಲ್ಲಿ ವಿವರಿಸಲಾಗಿರುತ್ತದೆಯೆ ಎನ್ನುವ ಪ್ರಶ್ನೆಗೆ ಎರಡೂ ತಾಲ್ಲೂಕುಗಳಲ್ಲಿ ತೀರ್ಥಹಳ್ಳಿಯ ರೈತರಲ್ಲಿ ಗಮನಾರ್ಹವಾಗಿ ಹೆಚ್ಚು ರೈತರು ಸಕಾರಾತ್ಮಕ ಉತ್ತರ ನೀಡಿದರು. ಕೋಲಾರ ತಾಲ್ಲೂಕಿನ ರೈತರಲ್ಲಿ ಶೇಕಡಾ ೧೫ರಷ್ಟು ರೈತರು ಹೌದು ಎಂದರೆ, ಶೇಕಡಾ

## ಕೋಷ್ಟಕ ೧೩: ವಿವಿಧ ಕೃಷಿ ಪತ್ರಿಕೆ.ಅಂಕಣಗಳಿಗೆ ಪ್ರತಿಕ್ರಿಯೆ

| ಕ್ರ.ಸಂ. | ವಿವರಗಳು | | ಕೋಲಾರ ತಾಲ್ಲೂಕು (N=200) | | ತೀರ್ಥಹಳ್ಳಿ ತಾಲ್ಲೂಕು (N=200) | | $X^2$ ಮೌಲ್ಯ |
|---|---|---|---|---|---|---|---|
| | | | ಸಂಖ್ಯೆ (N) | ಶೇಕಡಾ (%) | ಸಂಖ್ಯೆ (N) | ಶೇಕಡಾ (%) | |
| ೧ | ೨ | ೩ | ೪ | ೫ | ೬ | ೭ | ೮ |
| ಅ. | ಅವು ಉಪಯುಕ್ತವಾಗಿವೆಯೆ? | ಹೌದು | ೬೦ | ೩೦ | ೧೦೪ | ೫೨ | ೯.೨೯** |
| | | ಇಲ್ಲ | ೪೦ | ೨೦ | ೩೬ | ೧೮ | |
| | | ಗೊತ್ತಿಲ್ಲ | ೧೦೦ | ೫೦ | ೬೦ | ೩೦ | |
| ಆ. | ನಿಮಗೆ ಅರ್ಥವಾಗುವ ರೀತಿಯಲ್ಲಿ ವಿವರಿಸಲಾಗಿರುತ್ತದೆಯೆ? | ಹೌದು | ೩೦ | ೧೫ | ೬೦ | ೩೦ | ೧೨.೮೭** |
| | | ಇಲ್ಲ | ೬೦ | ೩೦ | ೯೦ | ೪೫ | |
| | | ಗೊತ್ತಿಲ್ಲ | ೧೩೦ | ೬೫ | ೫೦ | ೨೫ | |
| ಇ. | ಭಾಷೆ ಸರಳವಾಗಿರುತ್ತದೆಯೆ? | ಹೌದು | ೪೦ | ೨೦ | ೫೪ | ೨೭ | ೨೮.೭೫$^{NS}$ |
| | | ಇಲ್ಲ | ೪೪ | ೨೨ | ೭೦ | ೩೫ | |
| | | ಗೊತ್ತಿಲ್ಲ | ೧೧೬ | ೫೮ | ೭೬ | ೩೮ | |

ಕೋಷ್ಟಕ ಮುಂದುವರಿದಿದೆ

| ೧ | ೨ | ೩ | ೪ | ೫ | ೬ | ೭ | ೮ |
|---|---|---|---|---|---|---|---|
| ಈ. | ನೀವು ಅವುಗಳನ್ನು ಅನುಸರಿಸುತ್ತೀರೆಯೆ? | ಹೌದು<br>ಇಲ್ಲ<br>ಗೊತ್ತಿಲ್ಲ | ೧೦<br>೮೦<br>೧೧೦ | ೫<br>೪೦<br>೫೫ | ೨೪<br>೯೨<br>೮೪ | ೧೨<br>೪೬<br>೪೨ | ೨೬.೨೫^NS |
| ಉ. | ಅವುಗಳನ್ನು ಅನುಸರಿಸುವುದು ಸುಲಭವೆ? | ಹೌದು<br>ಇಲ್ಲ<br>ಗೊತ್ತಿಲ್ಲ | ೧೬<br>೧೦೦<br>೮೪ | ೮<br>೫೦<br>೪೨ | ೩೬<br>೭೮<br>೮೬ | ೧೮<br>೩೯<br>೪೩ | ೧೨.೫೬** |
| ಊ. | ಅವುಗಳನ್ನು ಅನುಸರಿಸುವುದರಿಂದ ಲಾಭವಾಗಬಹುದೆ? | ಹೌದು<br>ಇಲ್ಲ<br>ಗೊತ್ತಿಲ್ಲ | ೭೦<br>೮೦<br>೫೦ | ೩೫<br>೪೦<br>೨೫ | ೮೨<br>೭೦<br>೪೮ | ೪೧<br>೩೫<br>೨೪ | ೨೪.೭೫^NS |
| ಋ. | ವಿಷಯಗಳು ಸಮಯೋಚಿತ-ವಾಗಿರುತ್ತದೆಯೆ? | ಹೌದು<br>ಇಲ್ಲ<br>ಗೊತ್ತಿಲ್ಲ | ೪<br>೧೧೦<br>೮೬ | ೨<br>೫೫<br>೪೩ | ೩೦<br>೭೪<br>೯೬ | ೧೫<br>೩೭<br>೪೮ | ೧೪.೨೬* |

N = ಪ್ರತಿಕ್ರಯಿಸಿದವರ ಸಂಖ್ಯೆ
NS = ಗಮನಾರ್ಹವಲ್ಲ

* = ಶೇಕಡಾ ೫ರ ಮಟ್ಟದಲ್ಲಿ ಗಮನಾರ್ಹ
** = ಶೇಕಡಾ ೧ರ ಮಟ್ಟದಲ್ಲಿ ಗಮನಾರ್ಹ

೩೦ರಷ್ಟು ರೈತರು ಇಲ್ಲವೆಂದರುಹಾಗೂ ಶೇಕಡಾ ೬೫ರಷ್ಟು ರೈತರು ಇಲ್ಲವೆಂದರು. ಇಲ್ಲಿ ಭಾಷೆಯದೂ ಒಂದು ಸಮಸ್ಯೆಯಿದೆ. ಕೋಲಾರದ ಗ್ರಾಮೀಣ ಪ್ರದೇಶಗಳ ಕನ್ನಡ ತೆಲುಗು ಭಾಷೆಯಿಂದ ಪ್ರಭಾವಿತವಾಗಿ ತನ್ನದೇ ಆದ ಒಂದು ವಿಶಿಷ್ಟ ಶೈಲಿಯನ್ನು ರೂಢಿಸಿಕೊಂಡಿದೆ. ಪತ್ರಿಕೆಗಳಲ್ಲಿ ಪ್ರಕಟವಾಗುವ 'ಶಿಷ್ಟ' ಕನ್ನಡ ಭಾಷೆ ಇಲ್ಲಿ ಸಮಸ್ಯೆಯನ್ನೊಡ್ಡುತ್ತದೆ. ಅಷ್ಟಲ್ಲದೆ ಕೃಷಿಯಲ್ಲಿ ಬಳಕೆಯಾಗುವ ಸಲಕರಣೆಗಳು ಹಾಗೂ ವಿಧಾನಗಳು ಸಾಮಾನ್ಯವಾಗಿ ಆಯಾ ಪ್ರದೇಶದವರಿಗೇ ಅರ್ಥವಾಗುವ ಹೆಸರುಗಳನ್ನು ಹೊಂದಿರುತ್ತವೆ. ಉತ್ತರ ಕರ್ನಾಟಕದ ಅಥವಾ ಮಲೆನಾಡಿನ ಹಲವಾರು ಕೃಷಿ ಉಪಕರಣ ಮತ್ತು ಪದ್ಧತಿಗಳ ಹೆಸರುಗಳು ಕೋಲಾರದ ರೈತರಿಗೆ ಅರ್ಥವಾಗುವುದು ಕಷ್ಟವಾಗುತ್ತದೆ.

ತೀರ್ಥಹಳ್ಳಿಯ ತಾಲ್ಲೂಕಿನ ರೈತರಲ್ಲಿ ಶೇಕಡಾ ೩೦ರಷ್ಟು ರೈತರು ಬರಹಗಳು ಸುಲಭವಾಗಿ ಅರ್ಥವಾಗುತ್ತವೆಂದರೆ, ಶೇಕಡಾ ೪೫ರಷ್ಟು ರೈತರು ಇಲ್ಲವೆಂದರು ಹಾಗೂ ಶೇಕಡಾ ೨೫ ರೈತರು ಗೊತ್ತಿಲ್ಲವೆಂದರು.

**೪.೬.೫.೩. ಭಾಷೆಯ ಸರಳತೆ**

ಬರಹಗಳ ಭಾಷೆಯ ಸರಳತೆಯ ಬಗೆಗಿನ ಪ್ರಶ್ನೆಗೆ ಎರಡೂ ತಾಲ್ಲೂಕುಗಳ ರೈತರ ಪ್ರತಿಕ್ರಿಯೆಯಲ್ಲಿ ಗಮನಾರ್ಹ ವ್ಯತ್ಯಾಸವಿರಲಿಲ್ಲ. ಕೋಲಾರದ ರೈತರಲ್ಲಿ ಶೇಕಡಾ ೨೦ರಷ್ಟು ರೈತರು ಹೌದು ಎಂದರು ಹಾಗೂ ಶೇಕಡಾ ೨೨ರಷ್ಟು ರೈತರು ಇಲ್ಲವೆಂದರು ಮತ್ತು ಶೇಕಡಾ ೫೮ರಷ್ಟು ರೈತರು ಗೊತ್ತಿಲ್ಲವೆಂದರು.

ತೀರ್ಥಹಳ್ಳಿಯ ರೈತರಲ್ಲಿ ಶೇಕಡಾ ೨೭ ರೈತರು ಭಾಷೆ ಸರಳವಾಗಿರುತ್ತದೆಂದರೆ, ಶೇಕಡಾ ೩೫ರಷ್ಟು ರೈತರು ಇಲ್ಲವೆಂದರು ಹಾಗೂ ಶೇಕಡಾ ೩೮ ರೈತರು ಗೊತ್ತಿಲ್ಲವೆಂದರು.

ಇಲ್ಲಿ ಭಾಷೆಯ ಸರಳತೆಯ ಬಗ್ಗೆ ಸರಳವಾಗಿದೆ ಎನ್ನುವವರಿಗಿಂತ ಸರಳವಾಗಿಲ್ಲ ಎನ್ನುವವರೇ ಹೆಚ್ಚು. ಅಧ್ಯಯನದ ಸಮಯದಲ್ಲಿ ಕಂಡುಬಂದ ವಿಷಯವೂ ಅದೇ ಆಗಿತ್ತು. ಬಹಳಷ್ಟು ಲೇಖನಗಳು ಇಂಗ್ಲಿಶಿನಿಂದ ಅನುವಾದಿಸಿದ ಅಥವಾ ತೀರಾ ತಾಂತ್ರಿಕ ವಿಷಯಗಳನ್ನು ಒಳಗೊಂಡಿದುದಾಗಿದ್ದವು. ಸಹಜವಾಗಿಯೇ ಅಂತಹ ಬರಹಗಳು ಗ್ರಾಮೀಣ ಪ್ರದೇಶದವರಿಗೆ ಸರಳವಾಗಿ ಕಂಡುಬರುವುದಿಲ್ಲ.

**೪.೬.೫.೪. ವಿವರಿಸಿದ ಬೇಸಾಯದ ಪದ್ಧತಿಗಳ ಅನುಸರಣೆ**

ಕೃಷಿ ಪತ್ರಿಕೆ ಮತ್ತು ಅಂಕಣಗಳಲ್ಲಿ ಪ್ರಕಟವಾಗುವ ಬರಹಗಳಲ್ಲಿ ರೈತರ ಅನುಕೂಲಕ್ಕಾಗಿ, ರೈತರು ತಮ್ಮ ಬೇಸಾಯದಿಂದ ಅಧಿಕಲಾಭ ಗಳಿಸಲೆಂದು ಸಾಮಾನ್ಯವಾಗಿ

ಹೊಸ ಬೇಸಾಯದ ಪದ್ಧತಿಗಳನ್ನು, ವಿಚಾರಗಳನ್ನು ರೈತರು ಅನುಸರಿಸಲೆಂದೇ ನಿರೂಪಿಸಲಾಗಿರುತ್ತದೆ. ಆದರೆ ಎಷ್ಟು ರೈತರು ಅವುಗಳನ್ನು ಅನುಸರಿಸುತ್ತಾರೆನ್ನುವ ಪ್ರಶ್ನೆಗೆ ಪ್ರತಿಕ್ರಯಿಸಿದ ಎರಡೂ ತಾಲ್ಲೂಕುಗಳ ರೈತರ ಪ್ರತಿಕ್ರಿಯೆಯಲ್ಲಿ ಗಮನಾರ್ಹ ವ್ಯತ್ಯಾಸವಿರಲಿಲ್ಲ. ಕೋಲಾರ ತಾಲ್ಲೂಕಿನ ಸಾಕ್ಷರ ರೈತರಲ್ಲಿ ಶೇಕಡಾ ೫ರಷ್ಟು ರೈತರು ಅನುಸರಿಸುತ್ತೇವೆಂದರು ಹಾಗೂ ಶೇಕಡಾ ೪೦ ರೈತರು ಇಲ್ಲವೆಂದರು ಮತ್ತು ಶೇಕಡಾ ೫೫ ರೈತರು ಗೊತ್ತಿಲ್ಲವೆಂದರು.

ತೀರ್ಥಹಳ್ಳಿಯ ತಾಲ್ಲೂಕಿನ ರೈತರಲ್ಲಿ ಶೇಕಡಾ ೧೨ರಷ್ಟು ರೈತರು ಅನುಸರಿಸುತ್ತೇವೆಂದರೆ, ಶೇಕಡಾ ೪೬ರಷ್ಟು ರೈತರು ಇಲ್ಲವೆಂದರು ಹಾಗೂ ಶೇಕಡಾ ೪೨ರಷ್ಟು ರೈತರು ಗೊತ್ತಿಲ್ಲವೆಂದರು.

ಕರ್ನಾಟಕದ ಭಾಷೆ, ಸಂಸ್ಕೃತಿಯಂತೆ ಕೃಷಿ ಆಚರಣೆ ಮತ್ತು ಪದ್ಧತಿಗಳೂ ಸಹ ವೈವಿಧ್ಯಮಯವಾದುದು. ಬೆಳೆಯುವ ಬೆಳೆಗಳಲ್ಲಿಯೂ ಸಹ ಪ್ರದೇಶದಿಂದ ಪ್ರದೇಶಕ್ಕೆ ವೈವಿಧ್ಯತೆಯಿದೆ. ಒಂದೆರಡು ಪುಟಗಳಿರುವ ಕೃಷಿ ಪುರವಣಿಗಳಲ್ಲಿ ಎಲ್ಲ ರೈತರಿಗೆ ಬೇಕಾಗುವಂತಹ, ಅನುಸರಿಸುವಂತಹ ವಿಧಾನ, ಪದ್ಧತಿಗಳನ್ನು ಕೊಡುವುದೂ ಸಾಧ್ಯವಿಲ್ಲ. ಹಾಗಾಗಿ ವಿವರಿಸಿದ ಬೇಸಾಯ ಪದ್ಧತಿಗಳ ಅನುಸರಣೆಯು ಪ್ರೋತ್ಸಾಹಕರವಾಗಿ ಕಂಡುಬಂದಿಲ್ಲ.

### ೪.೬.೫.೫. ವಿವರಿಸಿದ ಬೇಸಾಯದ ಪದ್ಧತಿಗಳ ಅನುಸರಣೆ ಸುಲಭವೆ?

ರೈತರನ್ನುದ್ದೇಶಿಸಿ ಬರೆದ ತಾಂತ್ರಿಕ ಮಾಹಿತಿ, ಸುಧಾರಿತ ಬೇಸಾಯ ಪದ್ಧತಿಗಳು ಅವರು ಸುಲಭವಾಗಿ ಅನುಸರಿಸಿ ಅಳವಡಿಸಿವಂತಿರಬೇಕು. ಕನ್ನಡ ಪತ್ರಿಕೆಗಳ ಕೃಷಿ ಅಂಕಣಗಳು ಹಾಗೂ ಕೃಷಿ ಪತ್ರಿಕೆಗಳಲ್ಲಿ ಪ್ರಕಟವಾಗುವ ವಿಚಾರಗಳು ಸುಲಭವಾಗಿ ಅಳವಡಿಸುವಂತಿರುತ್ತವೆಯೆ ಎಂಬ ಪ್ರಶ್ನೆಗೆ ಕೋಲಾರ ತಾಲ್ಲೂಕಿನಲ್ಲಿ ಶೇಕಡಾ ೮ರಷ್ಟು ರೈತರು ಹೌದು ಎಂದರು, ಶೇಕಡಾ ೫೦ರಷ್ಟು ರೈತರು ಇಲ್ಲವೆಂದರು ಹಾಗೂ ಶೇಕಡಾ ೪೨ರಷ್ಟು ರೈತರು ಗೊತ್ತಿಲ್ಲವೆಂದರು.

ಪ್ರತಿಕ್ರಯಿಸಿದ ತೀರ್ಥಹಳ್ಳಿ ತಾಲ್ಲೂಕಿನ ರೈತರಲ್ಲಿ ಕೋಲಾರ ಜಿಲ್ಲೆಯ ರೈತರಿಗೆ ಹೋಲಿಸಿದಲ್ಲಿ ಗಮನಾರ್ಹವಾಗಿ ಹೆಚ್ಚು ಜನ ರೈತರು ಅಳವಡಿಸುವುದು (ಶೇಕಡಾ ೧೮) ಸುಲಭವೆಂದರು, ಶೇಕಡಾ ೩೯ರಷ್ಟು ರೈತರು ಇಲ್ಲವೆಂದರು ಹಾಗೂ ಶೇಕಡಾ ೪೩ರಷ್ಟು ರೈತರು ಗೊತ್ತಿಲ್ಲವೆಂದರು.

ಬಹಳಷ್ಟು ರೈತರು ಬರಹಗಳಲ್ಲಿನ ವಿವರಣೆಗಳು ತೀರಾ ತಾಂತ್ರಿಕವಾಗಿರುತ್ತವೆ ಎಂಬುದನ್ನು ವ್ಯಕ್ತಪಡಿಸುತ್ತಿದ್ದರು. ಹಾಗಾಗಿ ಅವುಗಳ ಅನುಸರಣೆ ಕಷ್ಟಸಾಧ್ಯವಾಗಿರುತ್ತದೆ. ಬರಹಗಳಲ್ಲಿ ಹಲವಾರು ಲೇಖನಗಳು ಅವರ ಪ್ರದೇಶ ಅಥವಾ ಬೆಳೆಗಳಿಗೆ ಅನ್ವಯಿಸುವುದಿಲ್ಲ ಎನ್ನುವುದೂ ಅವರ ಅಭಿಪ್ರಾಯವಾಗಿತ್ತು.

**೪.೬.೫.೬. ವಿವರಿಸಿದ ಬೇಸಾಯದ ಪದ್ಧತಿಗಳ ಅನುಸರಣೆಯಿಂದ ಲಾಭವಾಗಬಹುದೆ?**

ಕೃಷಿ ಬರಹದಲ್ಲಿ ಪ್ರಕಟವಾದ ವಿಚಾರಗಳ ಅನುಸರಣೆಯಿಂದ ರೈತರಿಗೆ ಲಾಭವಾಗುತ್ತದೆಯೆ? ಅವರ ಆದಾಯದಲ್ಲಿ ಹೆಚ್ಚಳವಾಗಬಹುದೆ ಎಂಬ ಪ್ರಶ್ನೆಗೆ ಎರಡೂ ತಾಲ್ಲೂಕಿನ ರೈತರ ಪ್ರತಿಕ್ರಿಯೆಯಲ್ಲಿ ಗಮನಾರ್ಹ ವ್ಯತ್ಯಾಸ ಕಂಡುಬರಲಿಲ್ಲ. ಕೋಲಾರ ತಾಲ್ಲೂಕಿನ ರೈತರಲ್ಲಿ ಶೇಕಡಾ ೩೫ರಷ್ಟು ರೈತರು ಹೌದೆಂದರೆ, ಶೇಕಡಾ ೪೦ರಷ್ಟು ರೈತರು ಇಲ್ಲವೆಂದರು ಹಾಗೂ ೨೫ರಷ್ಟು ರೈತರು ಗೊತ್ತಿಲ್ಲವೆಂದರು. ಅದೇ ತೀರ್ಥಹಳ್ಳಿಯ ತಾಲ್ಲೂಕಿನ ಪ್ರತಿಕ್ರಯಿಸಿದ ರೈತರಲ್ಲಿ ಶೇಕಡಾ ೪೧ರಷ್ಟು ರೈತರು ಲಾಭವಾಗಬಹುದೆಂದರು ಹಾಗೂ ಶೇಕಡಾ ೩೫ರಷ್ಟು ರೈತರು ಇಲ್ಲವೆಂದರು ಹಾಗೂ ಶೇಕಡಾ ೨೪ರಷ್ಟು ರೈತರು ಗೊತ್ತಿಲ್ಲವೆಂದರು.

**೪.೬.೫.೭. ವಿಷಯಗಳ ಸಮಯೋಚಿತತೆ**

ಬಹಳಷ್ಟು ಕೃಷಿ ಪತ್ರಿಕೆ ಮತ್ತು ಅಂಕಣಗಳಲ್ಲಿರುವ ಬರಹಗಳು ಯಾವುದಾದರೂ ಇಂಗ್ಲಿಷಿನಿಂದ ಅನುವಾದ ಮಾಡಿದ ಕ್ಲಿಷ್ಟ ತಾಂತ್ರಿಕ ಮಾಹಿತಿಯಾಗಿರುತ್ತದೆ. ಕೆಲವೊಮ್ಮೆ ಕರ್ನಾಟಕದಲ್ಲೇ ಬೆಳೆಯಲು ಸಾಧ್ಯವಾಗದ ಬೆಳೆಗಳ ಬೇಸಾಯ ಪದ್ಧತಿಗಳನ್ನು ವಿವರಿಸಿರಲಾಗಿರುತ್ತದೆ. ಬಿತ್ತನೆಯ ಸಮಯದಲ್ಲಿ ಕೊಯಿಲಿನ ಮಾಹಿತಿ ಹಾಗೂ ಕೊಯಿಲಿನ ಸಮಯದಲ್ಲಿ ಬಿತ್ತನೆಯ ಮಾಹಿತಿ ನೀಡುವ ಪತ್ರಿಕೆಗಳೂ ಇವೆ. ಇಂತಹ ಪತ್ರಿಕೆಗಳಲ್ಲಿ ಪ್ರಕಟವಾಗುವ ಬರಹಗಳ ವಿಷಯಗಳು ಸಮಯೋಚಿತವಾಗಿರುತ್ತವೆಯೆ ಎಂಬ ಪ್ರಶ್ನೆಗೆ ಎರಡೂ ತಾಲ್ಲೂಕಿನ ರೈತರ ಪ್ರತಿಕ್ರಿಯೆಯಲ್ಲಿ ಗಮನಾರ್ಹ ವ್ಯತ್ಯಾಸ ಕಂಡುಬಂದಿತು. ಕೋಲಾರ ತಾಲ್ಲೂಕಿನ ರೈತರಲ್ಲಿ ಶೇಕಡಾ ೨ರಷ್ಟು ರೈತರು ಮಾತ್ರ ಹೌದು ಎಂದರು ಹಾಗೂ ಶೇಕಡಾ ೫೫ರಷ್ಟು ರೈತರು ಇಲ್ಲವೆಂದರು ಮತ್ತು ಶೇಕಡಾ ೪೩ರಷ್ಟು ರೈತರು ಗೊತ್ತಿಲ್ಲವೆಂದರು.

ಈ ಪ್ರಶ್ನೆಗೆ ತೀರ್ಥಹಳ್ಳಿ ತಾಲ್ಲೂಕಿನ ರೈತರಲ್ಲಿ ಶೇಕಡಾ ೧೫ರಷ್ಟು ರೈತರು ಸಮಯೋಚಿತವಾಗಿರುತ್ತವೆ ಎಂದರು, ಶೇಕಡಾ ೩೭ರಷ್ಟು ರೈತರು ಸಮಯೋಚಿತ-ವಾಗಿರುವುದಿಲ್ಲ ಎಂದರು ಹಾಗೂ ಶೇಕಡಾ ೪೮ರಷ್ಟು ರೈತರು ಗೊತ್ತಿಲ್ಲವೆಂದರು.

ಒಟ್ಟಾರೆಯಾಗಿ, 'ಗೊತ್ತಿಲ್ಲ' ಎಂದವರ ಸಂಖ್ಯೆ ಕೋಲಾರ ಜಿಲ್ಲೆಯಲ್ಲಿ ತೀರ್ಥಹಳ್ಳಿ ತಾಲ್ಲೂಕಿಗಿಂತ ಗಮನಾರ್ಹವಾಗಿ ಹೆಚ್ಚಿಗಿತ್ತು. ಪತ್ರಿಕೆ ಓದುವವರಿದ್ದರೂ ಅವರು ಕೃಷಿ ವಿಜ್ಞಾನದ ಬರಹಗಳ ಬಗೆಗೆ ಗಮನ ಹರಿಸುತ್ತಿರಲಿಲ್ಲ ಹಾಗೂ ಅವುಗಳ ಅನ್ವಯಿಕತೆಯ ಬಗೆಗೆ ಕಾಳಜಿ ಅವರಿರಲಿಲ್ಲವೆಂಬುದು ಸಂಶೋಧಕರ ಅಭಿಪ್ರಾಯ.

**೪.೬.೫.೮. ಈ ಬರಹಗಳಲ್ಲಿ ರೈತರು ಅಪೇಕ್ಷಿಸುವುದು ಏನನ್ನು?**

ಮಾಹಿತಿ-ಮನರಂಜನೆ ನೀಡುವ ಸಮೂಹ ಮಾಧ್ಯಮಗಳು ಇಂದು ಆಧುನಿಕ ಜಗತ್ತಿನ ಅತ್ಯವಶ್ಯಕ ಮಾಧ್ಯಮಗಳಾಗಿವೆ. ಹವಾಮಾನ ಮುನ್ಸೂಚನೆ, ಪೇಟೆದಾರಣೆ, ಸರ್ಕಾರದ ಕೃಷಿ ಪ್ರಕಟಣೆಗಳು, ಬೀಜ ಗೊಬ್ಬರ ಮಾಹಿತಿ ಮುಂತಾದುವುಗಳ ಜೊತೆಗೆ ಕೃಷಿ ಕ್ಷೇತ್ರದಲ್ಲಾಗುತ್ತಿರುವ ಬದಲಾವಣೆಗಳು, ಆಧುನಿಕ ವಿಚಾರಗಳು ಮುಂತಾದುವನ್ನು ಈ ಸಮೂಹ ಮಾಧ್ಯಮಗಳು ಒದಗಿಸುತ್ತಿವೆ. ಆಧುನಿಕ ಜಗತ್ತಿನ ಬೇಸಾಯದಲ್ಲಿ ರೈತರು ಇವುಗಳಿಗೆ ವಿಮುಖರಾಗಿ ಬದುಕಲು ಸಾಧ್ಯವಿಲ್ಲ. ಈ ಸಾಹಿತ್ಯವನ್ನು ಅವಲೋಕಿಸುವ, ಪರಾಮರ್ಶಿಸುವ ರೈತರು ಈ ಬರಹಗಳ ಬಗೆಗೆ ತಮ್ಮದೇ ಆದ ನಿರೀಕ್ಷೆಗಳನ್ನು ಇರಿಸಿಕೊಂಡಿರುತ್ತಾರೆ. ಈ ಬರಹಗಳಿಂದ ರೈತರು ಅಪೇಕ್ಷಿಸುವುದಾದರೂ ಏನು ಎಂಬ ನನ್ನ ಅಧ್ಯಯನದ ಸಮೀಕ್ಷೆಯಲ್ಲಿ ರೈತರು ವ್ಯಕ್ತಪಡಿಸಿದ ವಿಷಯಗಳು ಹಲವಾರು. ಅವುಗಳನ್ನು ಈ ಮುಂದೆ ಪಟ್ಟಿಮಾಡಿ ನೀಡಲಾಗಿದೆ:

೧. ಸ್ಥಳೀಯ ಕೀಟ ಮತ್ತು ರೋಗಗಳ ಹತೋಟಿ ವಿಧಾನಗಳು.

೨. ಬೇಸಾಯದ ಪ್ರಾಯೋಗಿಕ ಮತ್ತು ಪ್ರಾತ್ಯಕ್ಷಿಕ ಕಾರ್ಯಕ್ರಮಗಳು

೩. ಕೃಷಿಯಿಂದ ಆರ್ಥಿಕ ಲಾಭ ಗಳಿಸುವುದು/ಹೆಚ್ಚು ಲಾಭ ಗಳಿಸುವ ವಿಧಾನಗಳು

೪. ಕೃಷಿಯನ್ನು ಒಂದು ಕೈಗಾರಿಕೆಯಾಗಿ ಪರಿಗಣಿಸುವ ವಿಚಾರಗಳು

೫. ಆಧುನಿಕ ಕೃಷಿಯ ಬಗೆಗಿನ ಹೆಚ್ಚಿನ ಮಾಹಿತಿ

೬. ಸಾವಯವ ಕೃಷಿ

೭. ಹೆಚ್ಚು ಆದಾಯ ಬರುವ ಅಲ್ಪಾವಧಿ ಬೆಳೆಗಳ ಬಗೆಗೆ ಹೆಚ್ಚು ಮಾಹಿತಿ

೮. ಮಿತವ್ಯಯ, ಅಧಿಕ ಇಳುವರಿ ನೀಡುವ ಬೆಳೆಗಳ ಬಗ್ಗೆ ಮಾಹಿತಿ

೯. ಸಹಜ ಕೃಷಿ– ನೀರಿನ ನಿರ್ವಹಣೆ ಮುಂತಾದ ವಿಷಯಗಳ ಬಗೆಗಿನ ಮಾಹಿತಿ

೧೦. ಮಾಹಿತಿ ಸರಳವಾಗಿರಬೇಕು, ಕ್ಲಿಷ್ಟ ಪದಗಳ ಬಳಕೆ ಬೇಡ

೧೧. ಪರಿಷರ ಸ್ನೇಹಿ ಕೃಷಿ, ಮಿತ ನೀರಿನ ಬಳಕೆ

೧೨. ಬಿ.ಟಿ. ತಂತ್ರಜ್ಞಾನದ ಬಗೆಗೆ ಮಾಹಿತಿ

೧೩. ರೈತರ ಅನುಭವಗಳನ್ನು ವ್ಯಕ್ತಪಡಿಸಲು ಹೆಚ್ಚು ಅವಕಾಶ ಕೊಡಬೇಕು. ವಿಜ್ಞಾನಿಗಳ ವಿವರಣೆಗಳಿಗಿಂತಲೂ ರೈತರ ಅನುಭವಗಳೇ ಹೆಚ್ಚು 'ಅಥೆಂಟಿಕ್' ಆಗಿರುತ್ತವೆ.

೧೪. ಯಾವ್ಯಾವುದೋ ಕಂಪೆನಿಗಳ ಬೀಜ ಗೊಬ್ಬರಗಳ ಜಾಹೀರಾತು ಕೊಡುವುದರ ಬದಲು ಅತ್ಯುತ್ತಮ ಬೀಜ ಕೊಡಬಲ್ಲ ರೈತನ ವಿಳಾಸ ನೀಡುವುದು ಒಳ್ಳೆಯದು.

೧೯೮೩ರಲ್ಲಿ ವಿ.ವೆಂಕಟೇಶ ಶರ್ಮರವರು ನಡೆಸಿದ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯ ಪ್ರಕಟಿಸುವ ತ್ರೈಮಾಸಿಕ 'ಕೃಷಿ ವಿಜ್ಞಾನ' ಪತ್ರಿಕೆಯ ಬಗೆಗಿನ ಅಧ್ಯಯನದಲ್ಲಿ ಶೇ. ೭೫ಕ್ಕಿಂತ ಹೆಚ್ಚು ರೈತರು ಎಲ್ಲ ಲೇಖನಗಳು ಸುಲಭವಾಗಿ ಅರ್ಥವಾಗುತ್ತವೆಂದು, ಶೇ. ೮೬.೨೭ ರೈತರು ಲೇಖನಗಳು ತೀರಾ ದೀರ್ಘವಾಗಿರುತ್ತವೆಂದು ಹಾಗೂ ಶೇ.೮೮.೨೪ ರೈತರು ಆ ಲೇಖನಗಳಲ್ಲಿರುವುದನ್ನೆಲ್ಲ ಅಳವಡಿಸುವುದು ಅಸಾಧ್ಯ ಅವು ಸಂಶೋಧನೆಗಳಿಗಷ್ಟೇ ಸೀಮಿತ ಎಂದು ಹೇಳಿದ್ದರು. ಶೇ.೬೩.೪ ರೈತರು ಅವುಗಳನ್ನು ಓದಿದರೂ ಅವುಗಳನ್ನು ಅಳವಡಿಸುವ ಗೋಜಿಗೇ ಹೋಗಲಿಲ್ಲ.

ನಾಗರಾಜ, ಎಂ.ಎಸ್.ರವರ (೧೯೮೬) 'ಕೃಷಿಲೋಕ' ಪತ್ರಿಕೆಯ ಅಧ್ಯಯನದಂತೆ ಹೆಚ್ಚಿನ ಶಿಕ್ಷಣ ಅಥವಾ ಹೆಚ್ಚಿನ ಕೌಟುಂಬಿಕ ಆದಾಯ ಹೊಂದಿರುವಂತಹ ಚಂದಾದಾರರು ಪತ್ರಿಕೆಯಿಂದ ಹೆಚ್ಚಿನ ಜ್ಞಾನ/ಮಾಹಿತಿ ಪಡೆಯುತ್ತಿದ್ದರು.

ಕೃಷಿಕರೊಂದಿಗೆ ನಡೆಸಿದ ಚರ್ಚೆ, ಸಂವಾದ ಹಾಗೂ ಮಾತುಕತೆಯ ಆಧಾರದ ಮೇಲೆ ಕೃಷಿಕರ ಮೇಲೆ ಕೃಷಿ ಪತ್ರಿಕೆ/ಪುರವಣಿ/ಅಂಕಣಗಳ ಪ್ರಭಾವದ ಪ್ರಸ್ತುತ ಅಧ್ಯಯನದ ಸಮೀಕ್ಷೆಯ ಒಟ್ಟಾರೆ ಸಾರಾಂಶ ಸಂಶೋಧಕರ ಅಭಿಪ್ರಾಯದಂತೆ ಈ ಮುಂದಿನಂತಿದೆ:

೧. ಹೆಚ್ಚಿಗೆ ಅನಕ್ಷರಸ್ಥರಿರುವ ಕೋಲಾರ ಜಿಲ್ಲೆಯ ಗ್ರಾಮಗಳಲ್ಲಿ ಕೆಲ ರೈತರಿಗೆ ಆ ರೀತಿಯ ಕೃಷಿ ಪುರವಣಿ/ಅಂಕಣಗಳಿರುವುದು ತಿಳಿದಿರಲಿಲ್ಲ.

೨. ದಿನ ಪತ್ರಿಕೆ ಓದುವ ಹಲವಾರು ರೈತರು ಕೃಷಿ ಪುರವಣಿ/ಅಂಕಣಗಳನ್ನು ಗಮನಿಸಿದ್ದರೂ ಅವುಗಳನ್ನು ಓದುತ್ತಿರಲಿಲ್ಲ.

೩. ಕೃಷಿ ಪುರವಣಿ/ಅಂಕಣಗಳನ್ನು ಓದುವ ಕೆಲ ರೈತರು ಅವುಗಳನ್ನು ಅನುಸರಿಸುವುದು ಅಸಾಧ್ಯವೆಂಬ ಭಾವನೆ ಹೊಂದಿದ್ದರು.

೪. ಇನ್ನು ಕೆಲ ರೈತರು ಕೃಷಿ ಪುರವಣಿ/ಅಂಕಣಗಳಲ್ಲಿನ ಮಾಹಿತಿ ತಮ್ಮ ಪ್ರದೇಶಗಳಿಗೆ ಅನ್ವಯಿಸುವುದಿಲ್ಲವೆಂಬ ಭಾವನೆ ಹೊಂದಿದ್ದರು.

೫. ಒಟ್ಟಾರೆಯಾಗಿ ಕೋಲಾರ ಜಿಲ್ಲೆಯ ರೈತರ ಮೇಲೆ ದಿನಪತ್ರಿಕೆಗಳ ಕೃಷಿ ಪುರವಣಿ/ಅಂಕಣಗಳು ಯಾವುದೆ ರೀತಿಯ ಪ್ರಭಾವ ಬೀರಿಲ್ಲ ಹಾಗೂ ಪ್ರಕಟವಾಗುವ ಹಲವಾರು ಮಾಸಿಕ ಹಾಗೂ ಇತರ ಕೃಷಿ ಪತ್ರಿಕೆಗಳ ಅರಿವೂ ಇರಲಿಲ್ಲ.

೬. ತೀರ್ಥಹಳ್ಳಿ ತಾಲ್ಲೂಕಿನ ರೈತರಲ್ಲಿ ಬಹಳಷ್ಟು ಜನ ಕೃಷಿ ಪುರವಣಿ/ಅಂಕಣಗಳನ್ನು ಓದುತ್ತಿದ್ದರು.

೭. ಕೆಲ ರೈತರು ಕೃಷಿ ಪುರವಣಿ/ಅಂಕಣಗಳಲ್ಲಿನ ಮಾಹಿತಿ ತಮ್ಮ ಪ್ರದೇಶಗಳಿಗೆ ಅನ್ವಯಿಸುವುದಿಲ್ಲವೆಂಬ ಭಾವನೆ ಹೊಂದಿದ್ದರು.

೮. ಕೃಷಿ ಪುರವಣಿ/ಅಂಕಣಗಳಲ್ಲಿನ ಮಾಹಿತಿ ಸಾಲದು ಎಂಬ ಅಭಿಪ್ರಾಯ ಹೊಂದಿದ್ದರು.

೯. ಬಹಳಷ್ಟು ಜನ ಓದಿದರೂ ಅವುಗಳಲ್ಲಿನ ಸಲಹೆಗಳನ್ನು ಅನುಸರಿಸುತ್ತಿದ್ದವರು ಕಡಿಮೆ ರೈತರು.

೧೦. ಕೆಲ ರೈತರು ಹಲವಾರು ಕೃಷಿ ಪತ್ರಿಕೆಗಳ ಬಗ್ಗೆ ತಿಳಿದುಕೊಂಡಿದ್ದರು ಹಾಗೂ ಕೆಲವರು ಅವುಗಳಿಗೆ ಚಂದಾದಾರರೂ ಆಗಿದ್ದರು.

೧೧. ಕೆಲವರಿಗೆ ಇಂಟರ್‌ನೆಟ್ ಮೂಲಕ ಕೃಷಿ ಮಾಹಿತಿ ಪಡೆಯಬಹುದೆಂಬುದೂ ತಿಳಿದಿತ್ತು.

೧೨. ಪ್ರಕಟವಾಗುವ ಕೃಷಿ ಅಂಕಣ, ಪುರವಣಿಗಳಲ್ಲಿ ರೈತರ ಅನುಭವದ ಲೇಖನಗಳ ಕೊರತೆ ಕಾಡುತ್ತಿತ್ತು.

೧೩. ಕೃಷಿ ಪತ್ರಿಕೆಗಳಲ್ಲಿ ವಿವಿಧ ಕಂಪೆನಿಗಳ, ಬೇಡದ ಜಾಹೀರಾತುಗಳೇ ಹೆಚ್ಚಿಗಿರುತ್ತವೆ. ಇವು ರೈತರನ್ನು ದಾರಿ ತಪ್ಪಿಸಬಹುದೆಂಬ ಆತಂಕ ಕೆಲವರು ಹೊಂದಿದ್ದರು.

೧೪. ಕೃಷಿ ವಿಶ್ವವಿದ್ಯಾನಿಲಯಗಳು ಪ್ರಕಟಿಸುವ ಪತ್ರಿಕೆಗಳ ಬಗೆಗೆ ಬಹಳಷ್ಟು ರೈತರಲ್ಲಿ ಮಾಹಿತಿ ಇರಲಿಲ್ಲ.

೧೫. ಕೆಲವು ರೈತರು ಆಧುನಿಕ ಕೃಷಿ ವಿಚಾರಗಳಾದ ಬಿ.ಟಿ. ತಂತ್ರಜ್ಞಾನ, ಊತಕ ಸಾಕಣೆ (ಟಿಶ್ಯೂ ಕಲ್ಚರ್) ಬಗ್ಗೆ ಮಾಹಿತಿ ಬಯಸುತ್ತಿದ್ದರು.

೧೬. ಅದಕ್ಕೆ ವ್ಯತಿರಿಕ್ತವಾಗಿ ಇನ್ನು ಕೆಲವು ರೈತರು ಸಹಜ ಕೃಷಿ, ಸಾವಯವ ಕೃಷಿಯಂತಹ ಪರಿಸರ ಸ್ನೇಹಿ ಕೃಷಿ ವಿಧಾನಗಳ ಬಗ್ಗೆ ಹೆಚ್ಚು ಮಾಹಿತಿ ಬಯಸುತ್ತಿದ್ದರು.

**೪.೭. ಇಂಟರ್‌ನೆಟ್ ಭವಿಷ್ಯದ ಏಕೈಕ ಸಂವಹನ ಮಾಧ್ಯಮವೆ?**

ಇದು ಇಂಟರ್‌ನೆಟ್ ಯುಗ. ಇಂದು ಎಲ್ಲ ಕೃಷಿ ಇಲಾಖೆಗಳು, ವಿಶ್ವವಿದ್ಯಾನಿಲಯಗಳನ್ನೊಳಗೊಂಡಂತೆ ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳು ಹಾಗೂ ಸಂಬಂಧಿಸಿದ ಇತರ ಇಲಾಖೆಗಳು ಇಂಟರ್‌ನೆಟ್ ವೆಬ್‌ಸೈಟ್‌ಗಳನ್ನು ಹೊಂದಿವೆ. ಅದರ ಮೂಲಕ ರೈತರಿಗೆ ಎಲ್ಲ ಮಾಹಿತಿ ಒದಗಿಸಲು ಪ್ರಯತ್ನಿಸುತ್ತಿವೆ. ಇನ್ನು ಕೆಲವೇ ವರ್ಷಗಳಲ್ಲಿ ಹಳ್ಳಿಹಳ್ಳಿಯಲ್ಲಿಯೂ ಇಂಟರ್‌ನೆಟ್ ಲಭ್ಯವಾಗಬಹುದು. ಆಗ ಪುಸ್ತಕ, ಪತ್ರಿಕೆ ಮುಂತಾದುವನ್ನು ಯಾರೂ ಓದುವುದಿಲ್ಲವೆಂಬ ಆತಂಕ ಕೆಲವರಲ್ಲಿದೆ. ಇಂಗ್ಲಿಷಿನಲ್ಲಿ ಈಗಾಗಲೇ ಬಹಳಷ್ಟು ಪುಸ್ತಕಗಳು ಇಂಟರ್‌ನೆಟ್‌ನಲ್ಲಿ ಉಚಿತವಾಗಿ ಲಭಿಸುತ್ತವೆ. ಕೃಷಿ ಸಾಹಿತ್ಯವನ್ನೊಳಗೊಂಡಂತೆ ಎಲ್ಲ ಕನ್ನಡ ಸಾಹಿತ್ಯವೂ ಡಿಜಿಟಲ್ ಸಾಹಿತ್ಯವಾಗಿಬಿಡುತ್ತದೆಯೆ?

1999ರಲ್ಲಿ ಇಂಟೆಲ್ ಕಂಪೆನಿಯ ಮುಖ್ಯಸ್ಥನಾಗಿದ್ದ ಆಂಡಿ ಗ್ರೋವ್ 2004ರ ಹೊತ್ತಿಗೆ ಸಣ್ಣ ಕಿರಾಣಿ ಅಂಗಡಿಯಿಂದ ಹಿಡಿದು ಬೃಹತ್ ಏರೋಪ್ಲೇನ್ ಕೈಗಾರಿಕೆಗಳವರೆಗೆ ಎಲ್ಲವೂ ಇಂಟರ್‌ನೆಟ್ ಮೇಲೆ ಅವಲಂಬಿಸಬೇಕಾಗುತ್ತದೆ ಎಂದಾಗ ಆತನ ಮಾತನ್ನು ಎಲ್ಲರೂ ಅಪಹಾಸ್ಯಮಾಡಿದ್ದರು. ಇಂಟರ್‌ನೆಟ್ ಒಂದು ಆಧುನಿಕ ಫ್ಯಾಶನ್ ಆಗದೆ ವಿದ್ಯುಚ್ಛಕ್ತಿ ಅಥವಾ ಟೆಲಿಫೋನ್‌ನಂತೆ ಒಂದು ಅತ್ಯಂತ ಅವಶ್ಯಕ ಮಾಧ್ಯಮವಾಗುವುದೆಂದು ಗ್ರೋವ್ ನಂಬಿದ್ದ. ಹೇಗೆ ವಿದ್ಯುತ್ ಅಥವಾ ಟೆಲಿಫೋನ್ ಇಲ್ಲದೆ ಇಂದು ಯಾವುದೇ ವ್ಯಾಪಾರ ವಹಿವಾಟು ಸಾಧ್ಯವಿಲ್ಲವೋ ಅದೇ ರೀತಿ ಇಂಟರ್‌ನೆಟ್ ಇಲ್ಲದೆ ಈ ಸ್ಪರ್ಧಾತ್ಮಕ ಜಗತ್ತಿನಲ್ಲಿ ಯಾವುದೇ ವ್ಯಾಪಾರ ವಹಿವಾಟು ನಡೆಸುವುದು ಸಾಧ್ಯವಿಲ್ಲವೆಂಬುದು ಆತನ ಅನಿಸಿಕೆಯಾಗಿತ್ತು. ವ್ಯಾಪಾರ ವಹಿವಾಟು ಮಾತ್ರವಲ್ಲ ಇಂಟರ್‌ನೆಟ್ ಮಾಹಿತಿ ಒದಗಿಸುವ ದಿಕ್ಕಿನಲ್ಲಿ ಕ್ರಾಂತಿಯೇ ಉಂಟುಮಾಡಿದೆ.

ಅದೇ ರೀತಿಯೇ ಸಂವಹನ ಮಾಧ್ಯಮಗಳಲ್ಲೂ ಕ್ರಾಂತಿಯಾಗುತ್ತಿದೆ. ಸಂವಹನ ಮಾಧ್ಯಮಗಳಲ್ಲಿ ಎರಡು ರೀತಿಯ ತಂತ್ರಜ್ಞಾನವಿದೆಯೆಂದು ಜಾನ್ ನಾಟನ್ (2006) ಹೇಳುತ್ತಾರೆ. ಒಂದು 'ತಳ್ಳು' (Push), ಮತ್ತೊಂದು 'ಎಳೆ' (Pull) ತಂತ್ರಜ್ಞಾನ. ಈಗ ಇರುವ ದೂರದರ್ಶನ ತಂತ್ರಜ್ಞಾನ 'ತಳ್ಳು' ಮಾಧ್ಯಮ, ಅಂದರೆ, ಆಯಾ ಚಾನೆಲ್‌ನವರು ಬಿತ್ತರಿಸುವ (ತಳ್ಳುವ) ಕಾರ್ಯಕ್ರಮಗಳನ್ನಷ್ಟೇ ನಾವು ನೋಡಬೇಕು. ಆದರೆ ಇಂಟರ್‌ನೆಟ್ ಒಂದು 'ಎಳೆ'ಯುವ ಮಾಧ್ಯಮ, ಅಂದರೆ, ಬೇಕಾದನ್ನು ನಾವು 'ಎಳೆದು' ಪಡೆದುಕೊಳ್ಳಬಹುದು; ಆಯ್ಕೆ ನಮ್ಮ ಕೈಯಲ್ಲಿರುತ್ತದೆ.

ಇದು ಮುದ್ರಣ ಮತ್ತು ಸಾಹಿತ್ಯ ಕ್ಷೇತ್ರಕ್ಕೂ ಅನ್ವಯಿಸುತ್ತದೆ. ಈ ಕ್ಷೇತ್ರಗಳಲ್ಲಿನ ಇಂಟರ್‌ನೆಟ್‌ನ ಪರಿಣಾಮ ಹಾಗೂ ಪ್ರಭಾವ ಈಗಷ್ಟೇ ಪ್ರಾರಂಭವಾಗಿದೆ. ಇಂಟರ್‌ನೆಟ್‌ನಲ್ಲಿ ವೃತ್ತ ಪತ್ರಿಕೆಗಳು ಹಾಗೂ ಡಿಜಿಟಲ್ ರೂಪದ ಪುಸ್ತಕಗಳು ಲಭಿಸಲು ಪ್ರಾರಂಭವಾದಾಗ ಮುದ್ರಣರೂಪದ ವೃತ್ತ ಪತ್ರಿಕೋದ್ಯಮ ಹಾಗೂ ಪುಸ್ತಕೋದ್ಯಮವನ್ನು ಮುಚ್ಚಬೇಕಾಗುತ್ತದೆಂದು ಎಲ್ಲರೂ ಊಹಿಸಿದರು. ಆದರೆ ಪರಿಸ್ಥಿತಿ ಹಾಗಾಗಲಿಲ್ಲ. ಇವೆರಡು ಇನ್ನೂ ಸದೃಢವಾಗಿಯೇ ಬೆಳೆಯುತ್ತಿವೆ.

ಪುಸ್ತಕಗಳನ್ನು ಡಿಜಿಟೀಕೃತಗೊಳಿಸಿ. ಅವು ವೆಬ್‌ನಲ್ಲಿ ಸಿಗುವಂತೆ ಮಾಡುವ ಪ್ರಯತ್ನಗಳು ೧೯೭೦ರಿಂದಲೂ ನಡೆಯುತ್ತಿವೆ (ಆಂಡ್ರಿಯಾಸ್ ವಾನ್ ಬಬ್ನಾಫ್, ೨೦೦೫). ೫೦,೦೦೦ಕ್ಕೂ ಹೆಚ್ಚು ಕಾಪಿರೈಟ್ ಇಲ್ಲದ ಪುಸ್ತಕಗಳು ಉಚಿತವಾಗಿ ವೆಬ್‌ನಲ್ಲಿ ಸಿಗುತ್ತವೆ. ಉತ್ತರ ಅಮೆರಿಕಾದ ಕಾರ್ನೆಲ್ ವಿಶ್ವವಿದ್ಯಾನಿಲಯವು ತನ್ನ ಗ್ರಂಥಾಲಯದ ಆನ್‌ಲೈನ್ ಆವೃತ್ತಿಯನ್ನು ವೆಬ್‌ನಲ್ಲಿ ಹೊಂದಿದ್ದು (ವೆಬ್ ವಿಳಾಸ: http://chla.library.cornell.edu/c/chla/browse/a.html) ಅದರಲ್ಲಿ ಹತ್ತೊಂಭತ್ತನೇ ಶತಮಾನದ ಪ್ರಾರಂಭದಿಂದ ಪ್ರಕಟವಾಗಿರುವ ಎಲ್ಲ ವೈಜ್ಞಾನಿಕ ಇಂಗ್ಲಿಶ್ ಪುಸ್ತಕಗಳನ್ನು ಸಮಗ್ರವಾಗಿ ಮೊದಲನೆಯ ಪುಟದಿಂದ ಕೊನೆಯಪುಟದವರೆಗೂ ಡಿಜಿಟಲ್ ರೂಪದಲ್ಲಿ ಹೊಂದಿದೆ. ಅದರಲ್ಲಿ ಹತ್ತೊಂಭತ್ತನೆಯ ಶತಮಾನದ ಅಂತ್ಯದವರೆಗೂ ಕೃಷಿಸಾಹಿತ್ಯದ ೨೧೯ ಕೃತಿಗಳು ಉಚಿತವಾಗಿ ಲಭ್ಯವಿವೆ.

ಇಂಟರ್‌ನೆಟ್ ಜಗತ್ತಿನ ಸಾಧ್ಯತೆಗಳನ್ನು ನಾವು ಇನ್ನೂ ಏನೇನನ್ನೂ ನೋಡಿಲ್ಲ. ಈ ಕ್ಷೇತ್ರಗಳಲ್ಲಿ ಭವಿಷ್ಯದಲ್ಲಿ ನಾವು ಊಹಿಸಲೂ ಸಾಧ್ಯವಾಗದಷ್ಟು ಮಹತ್ತರ ಬದಲಾವಣೆಗಳಾಗಲಿವೆ. ಇವೆಲ್ಲ ಕೃಷಿ ಸಾಹಿತ್ಯಕ್ಕೂ ಅನ್ವಯಿಸುತ್ತದೆ. ರೈತರಿಗೆ ಬೇಕಾದ ಮಾಹಿತಿ ಸಿಗುತ್ತಿಲ್ಲವೆಂದು ರೈತರು ಕೊರಗುವ ಬದಲು ಅವರೇ ಇಂಟರ್‌ನೆಟ್‌ನಿಂದ ಬೇಕಾದ ಮಾಹಿತಿಯನ್ನು ಬೇಕಾದ ಸಮಯದಲ್ಲಿ ಪಡೆಯಬಹುದು.

ಆದರೆ ಭಾರತದಂತಹ ದೇಶದಲ್ಲಿ, ಬಹುಪಾಲು ರೈತರೆಲ್ಲ ಅನಕ್ಷರಸ್ಥರಾಗಿರುವಾಗ ಇಷ್ಟೆಲ್ಲ ಸಾಧ್ಯತೆಗಳು ನೆರವೇರಲು ಇನ್ನೂ ಬಹಳ ಸಮಯ ಬೇಕಾಗಬಹುದು. ಅದೇ ರೀತಿ ತಂತ್ರಜ್ಞಾನವೂ ಸಹ ಸರಳವಾಗುತ್ತಿದೆ. ಇಂದು ಹಳ್ಳಿಹಳ್ಳಿಗೂ ಮೊಬೈಲ್, ಸ್ಯಾಟಿಲೈಟ್ ಡಿಶ್, ಡಿ.ವಿ.ಡಿ. ಪ್ಲೇಯರ್‌ಗಳು, ಇಂಟರ್‌ನೆಟ್ ಕಿಯೋಸ್ಕ್‌ಗಳು ಕಾಲಿಟ್ಟಿವೆ. ಅನಕ್ಷರಸ್ಥರೂ ಬಳಸಬಹುದಾದ, ಧ್ವನಿ ಆಧಾರಿತ, ಸರಳ ಕಂಪ್ಯೂಟರ್‌ಗಳು ಬರಲಿವೆ. ದೂರದರ್ಶನ, ಟೆಲಿಫೋನ್ ಮತ್ತು ಕಂಪ್ಯೂಟರ್‌ಗಳನ್ನು ಸಂಯೋಜಿಸಿ ಒಂದೇ ಸಾಧನವನ್ನಾಗಿಸುವ ಪ್ರಯತ್ನಗಳು ನಡೆಯುತ್ತಿವೆ.

## ೪.೮. ಮುಂದೆ ನಡೆಸಬಹುದಾದ ಅಧ್ಯಯನಗಳು

೧೯೮೦ರಿಂದೀಚೆಗೆ ವಿಜ್ಞಾನ ಕ್ಷೇತ್ರದಲ್ಲಿ ತನ್ಮೂಲಕ ಕೃಷಿ ಕ್ಷೇತ್ರದಲ್ಲೂ ಹಾಗೂ ಕೃಷಿ ಸಾಹಿತ್ಯ ಕ್ಷೇತ್ರದಲ್ಲೂ ಮಹತ್ತರ ಬದಲಾವಣೆಗಳಾಗಿವೆ. ಹಳ್ಳಿಯಲ್ಲಿ ಕನಿಷ್ಠ ಭೂಹಿಡುವಳಿ ಹೊಂದಿರುವ ರೈತನಿಂದ ಲಕ್ಷಾಂತರ ಎಕರೆ ಪ್ರದೇಶವನ್ನು ಹೊಂದಿರುವ ಬಹುರಾಷ್ಟ್ರೀಯ ಕಂಪೆನಿಗಳವರೆಗೆ ಎಲ್ಲರೂ ಕೃಷಿಯಲ್ಲಿ ಆಸಕ್ತರಾಗಿದ್ದಾರೆ. ಸಾವಿರಾರು ವರ್ಷಗಳ ವಿಕಾಸದ ಸಂಸ್ಕೃತಿಯ ದ್ಯೋತಕವಾಗಿರುವ ಕೃಷಿ ಇಂದು ಬದುಕಿನ ಒಂದು ವಿಧಾನವಾಗಷ್ಟೇ ಉಳಿದಿಲ್ಲ, ಹಣಗಳಿಸುವ ಮಾರ್ಗವೂ ಆಗಿದೆ. ಕೃಷಿಯನ್ನು ಕೈಗಾರಿಕೆಯಂತೆ ಪರಿಗಣಿಸಲಾಗುತ್ತಿದೆ. ಆಧುನಿಕ ಕೃಷಿಯ ಹೆಸರಲ್ಲಿ ನಡೆದ ಪ್ರಕೃತಿಯ ಸಂಪನ್ಮೂಲಗಳ ದುರ್ಬಳಕೆ, ಪರಿಸರ ಮಾಲಿನ್ಯ, ಕೃಷಿ ಜೈವಿಕ ವೈವಿಧ್ಯದ ವಿನಾಶಗಳ ಬಗೆಗೆ ರೈತರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ಹಲವಾರು ಸಂಘಸಂಸ್ಥೆಗಳು ನಡೆಸುತ್ತಿವೆ. ಈ ಹಿನ್ನೆಲೆಯಲ್ಲಿ ಕೃಷಿ ಕ್ಷೇತ್ರದಲ್ಲಿ ಭವಿಷ್ಯದಲ್ಲಿ ನಡೆಸಬಹುದಾದ ಅಧ್ಯಯನಗಳು ಈ ಮುಂದಿನಂತಿವೆ:

೧. **ಕೃಷಿ ಗಾದೆಗಳ ಅಧ್ಯಯನ ಮತ್ತು ದಾಖಲಾತಿ:** ಕೃಷಿ ಗಾದೆಗಳು ಬರೇ ಆಡುಮಾತುಗಳಷ್ಟೇ ಆಗಿರದೆ ಕೃಷಿ ಜ್ಞಾನದ ಸೆಲೆಯಾಗಿವೆ. ಗಾದೆಗಳ ಅಧ್ಯಯನ ಮತ್ತು ಸಂಗ್ರಹ ನಡೆದಿದ್ದರೂ ಸಹ ಕೃಷಿ ಗಾದೆಗಳನ್ನು ಬೇರೊಂದು ಆಲೋಚನೆಯ ದೃಷ್ಟಿಯಲ್ಲಿ, ಅವುಗಳಲ್ಲಿನ ಜ್ಞಾನದ ಸತ್ಯಾಸತ್ಯತೆಗಳ ಬಗೆಗೆ ಹೆಚ್ಚಿನ ಅಧ್ಯಯನ ಮತ್ತು ವಿಶ್ಲೇಷಣೆ ನಡೆಸಬಹುದಾಗಿದೆ.

೨. **ಕನ್ನಡದಲ್ಲಿ ಕೃಷಿ ಜೀವತಂತ್ರಜ್ಞಾನ ಸಾಹಿತ್ಯ:** ಕೃಷಿ ಜೀವತಂತ್ರಜ್ಞಾನದ ಬಗೆಗೆ ಕನ್ನಡದಲ್ಲಿ ಬೆರಳೆಣಿಕೆಯಷ್ಟು ಕೃತಿಗಳನ್ನು ಹೊರತುಪಡಿಸಿ ಹೆಚ್ಚಿನ ಸಾಹಿತ್ಯ ಪ್ರಕಟವಾಗಿಲ್ಲ. ಈ ವಿಷಯಗಳ ಬಗೆಗೆ ಹೆಚ್ಚಿನ ವಿವರ ಪಡೆಯುವ ಬಯಕೆಯನ್ನು ಹಲವಾರು ರೈತರು ಸಮೀಕ್ಷೆಯ ಸಮಯದಲ್ಲಿ ವ್ಯಕ್ತಪಡಿಸಿದ್ದರು. ಈ ವಿಷಯಗಳ ಬಗೆಗೆ ಬರೆಯುವಂತಹ ಲೇಖಕರ ಕೊರತೆಯೂ ಇರಬಹುದು. ಭವಿಷ್ಯದಲ್ಲಿ ಅತ್ಯಂತ ಪ್ರಬಲ ಹಾಗೂ ಪರಿಣಾಮಕಾರಿ ಕೃಷಿ ತಂತ್ರಜ್ಞಾನವಾಗಲಿರುವ ಜೀವತಂತ್ರಜ್ಞಾನದ ಪರಿಕಲ್ಪನೆ ಹಾಗೂ ತಂತ್ರಗಳ ಬಗೆಗಿನ ಮಾಹಿತಿಯನ್ನು ರೈತರಿಗೆ ಅರ್ಥಪೂರ್ಣವಾಗಿ ಸಂವಹಿಸುವ ಬಗೆಗಿನ ಅಧ್ಯಯನ ನಡೆಸಬಹುದಾಗಿದೆ.

೩. **ಕೃಷಿವಿಜ್ಞಾನ ಪ್ರಕಟಣೆಗಳಲ್ಲಿನ ಬರಹಗಳ ಗುಣಮಟ್ಟ:** ಪ್ರಕಟವಾಗುವ ಬಹಳಷ್ಟು ಮಾಹಿತಿ ಹಳತಾಗಿದ್ದು ಲೇಖಕರಿಗೆ ಅವುಗಳನ್ನು ಉತ್ತಮಗೊಳಿಸಿರುವ ಅಥವಾ ನವೀನ ತಾಂತ್ರಿಕತೆಗಳ ಬಗೆಗೆ ಅರಿವೇ ಇರುವುದಿಲ್ಲ. ತಮಗೆ ತಿಳಿದಿರುವ ಅಥವಾ ತಾವು

ವಿದ್ಯಾರ್ಥಿಗಳಾಗಿದ್ದಾಗ ಓದಿದ ವಿಷಯಗಳನ್ನೇ ಬರೆದು ಪ್ರಕಟಿಸುತ್ತಿರುತ್ತಾರೆ. ಇಂಥ ಬರಹಗಳ ಬಗೆಗೆ ಪ್ರತ್ಯೇಕ ಅಧ್ಯಯನ ನಡೆಸಿದಲ್ಲಿ ರೈತರಿಗೆ ಸಿಗುತ್ತಿರುವ ಮಾಹಿತಿ ಎಷ್ಟು ಉಪಯುಕ್ತ ಅಥವಾ ನಿರುಪಯುಕ್ತ ಎಂಬುದು ತಿಳಿಯುತ್ತದೆ.

೪. **ಕೃಷಿಕರು ಮತ್ತು ಇಂಟರ್‌ನೆಟ್:** ಭವಿಷ್ಯದ ಇಂಟರ್‌ನೆಟ್ ಅನಕ್ಷರಸ್ಥ ರೈತನೂ ಉಪಯೋಗಿಸಬಹುದಾದಷ್ಟು ಸರಳವಾಗಬಹುದೆ? ರೈತರೂ ಬಳಸಬಹುದಾದಲ್ಲಿ ಇಂಟರ್‌ನೆಟ್‌ನ ರೂಪುರೇಷೆಗಳು ಹೇಗಿರಬೇಕು ಹಾಗೂ ಧ್ವನಿ ಮತ್ತು ದೃಶ್ಯಗಳ ಮೂಲಕ ಇಂಟರ್‌ನೆಟ್‌ನಲ್ಲಿ ರೈತರಿಗೆ ಮಾಹಿತಿ ಒದಗಿಸುವುದರ ಬಗೆಗೆ ಅಧ್ಯಯನ ನಡೆಸಬಹುದಾಗಿದೆ.

# ೫. ಸಾರಾಂಶ

ಕನ್ನಡದಲ್ಲಿ ಕೃಷಿವಿಜ್ಞಾನದ ಸಾಹಿತ್ಯದ ಉಗಮ ಹಾಗೂ ಬೆಳವಣಿಗೆ ೨೦ನೇ ಶತಮಾನದಲ್ಲಿ ಮಾತ್ರ ಗುರುತರವಾಗಿ ಬೆಳೆದುಬಂದಿದೆ. ಈ ಸಂಶೋಧನೆಯನ್ನು ಈ ಮುಂದಿನ ಉದ್ದೇಶಗಳೊಂದಿಗೆ ಕೈಗೊಳ್ಳಲಾಗಿತ್ತು:

ಅ. ಕನ್ನಡದಲ್ಲಿ ಕೃಷಿ ವಿಜ್ಞಾನ ಸಾಹಿತ್ಯದ ಪ್ರಾರಂಭ ಹಾಗೂ ಬೆಳೆದು ಬಂದ ಹಾದಿಯನ್ನು ೧೯ನೇ ಶತಮಾನದ ಅಂತ್ಯದಿಂದ ವಿವಿಧ ಹಂತಗಳಲ್ಲಿ ಗುರುತಿಸುವುದು.

ಆ. ೨೧ನೇ ಶತಮಾನದಲ್ಲಿ ಕನ್ನಡ ಕೃಷಿ ವಿಜ್ಞಾನ ಸಾಹಿತ್ಯ ಪಡೆದುಕೊಳ್ಳುತ್ತಿರುವ ರೂಪು, ನಿಲುವು ಹಾಗೂ ಮುನ್ನಡೆಯುತ್ತಿರುವ ದಿಕ್ಕಿನ ಅಧ್ಯಯನ.

ಇ. ಕರ್ನಾಟಕದ ಕೃಷಿಕರ ಬದುಕಿನ ಮೇಲೆ ಕನ್ನಡ ಕೃಷಿ ವಿಜ್ಞಾನ ಸಾಹಿತ್ಯದ ಪ್ರಭಾವದ ಅಧ್ಯಯನ.

ಸಾಹಿತ್ಯ ಮತ್ತು ಸಮಾಜ-ಸಂಸ್ಕೃತಿಗಳ ನಡುವಿನ ಸಂಬಂಧ ಸಂಕೀರ್ಣವಾದುದು. ಚರಿತ್ರೆಯೊಳಗೆ ನಡೆಯುವ ಅನೇಕ ಸಾಂಸ್ಕೃತಿಕ ಚಲನೆಗಳಿಗೆ ಸ್ಪಂದಿಸುತ್ತ ಅವನ್ನು ವಿಶಿಷ್ಟ ರೀತಿಯಲ್ಲಿ ಕಾಣಿಸುವುದರಲ್ಲಿ ಸಾಹಿತ್ಯದ ಮಹತ್ವವಿದೆ. ಈ ಕಾಣಿಸುವಿಕೆಯು ಸಾಹಿತ್ಯಕ್ಕಿರುವ ಸಾಧ್ಯತೆಗಳಲ್ಲಿ ಬಹಳ ಮುಖ್ಯವಾದುದು. ಮನುಷ್ಯನ ಎಲ್ಲ ಅನುಭವ ಹಾಗೂ ಚಟುವಟಿಕೆಗಳಿಗೆ ಒಂದು ಚರಿತ್ರೆ ಇದ್ದೇ ಇರುತ್ತದೆ. ಹಾಗೆಯೇ ಸಾಹಿತ್ಯಕ್ಕೂ ಒಂದು ಚರಿತ್ರೆ ಇರುತ್ತದೆ. ಸಾಹಿತ್ಯಚರಿತ್ರೆಗೆ ಮುಖ್ಯ ಆಧಾರ ಒಂದು ಭಾಷೆಯಲ್ಲಿರುವ ಗ್ರಂಥಸಮುದಾಯ. ಇಂಥ ಒಂದು ಗ್ರಂಥ ಸಮುದಾಯದ ಚರಿತ್ರೆಯ ನಿರೂಪಣೆಯೇ ಸಾಹಿತ್ಯ ಚರಿತ್ರೆ. ಇದು ಶುದ್ಧಸಾಹಿತ್ಯಕ್ಕೆ ಅನ್ವಯಿಸುವಂತೆ ಶಾಸ್ತ್ರ ಅಥವಾ ವಿಜ್ಞಾನ ಸಾಹಿತ್ಯಕ್ಕೂ ಅನ್ವಯಿಸುತ್ತದೆ.

ಸಾಹಿತ್ಯ ಎಂದರೆ ವಿಶಾಲವಾದ ಅರ್ಥದಲ್ಲಿ ಒಂದು ಭಾಷೆಯಲ್ಲಿರುವ ಗ್ರಂಥಗಳ ಸಮೂಹ. ವಿಶಿಷ್ಟ ಅರ್ಥದಲ್ಲಿ ಭಾಷಾಮಾಧ್ಯಮದ ಮೂಲಕ ಸೃಷ್ಟಿಯಾಗುವ ಕಲಾಕೃತಿ. ಪ್ರತಿಯೊಂದು ಕೃತಿಯೂ ಒಂದು ಗೊತ್ತಾದ ಕಾಲದಲ್ಲಿ, ಗೊತ್ತಾದ ಜಾಗದಲ್ಲಿ ಲೇಖಕನ

ಪರಿಸರ ಪ್ರಜ್ಞೆಗಳಿಗೆ ಅನುಗುಣವಾಗಿ ಸಿದ್ಧಗೊಂಡಿರುತ್ತದೆ. ಒಂದು ಭಾಷೆಯ ಸಾಹಿತ್ಯವನ್ನು ಶುದ್ಧಸಾಹಿತ್ಯ ಕೃತಿಗಳು ಮತ್ತು ಶಾಸ್ತ್ರ ಸಾಹಿತ್ಯ ಕೃತಿಗಳೆಂದು ಎರಡು ಭಾಗ ಮಾಡಬಹುದು. ಶುದ್ಧಸಾಹಿತ್ಯ, ಮಾತಿನ ಕಲೆ. ಶಾಸ್ತ್ರಸಾಹಿತ್ಯ ವೈಜ್ಞಾನಿಕ ನಿರೂಪಣೆ. ಒಂದರ ಗುರಿ ಆನಂದಾನುಭೂತಿ; ಇನ್ನೊಂದರ ಉದ್ದೇಶ ಜ್ಞಾನಪ್ರಸಾರ. ಸಾಹಿತ್ಯಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆಯಷ್ಟೇ ವೈಜ್ಞಾನಿಕ ಪರಂಪರೆಯೂ ಮುಖ್ಯವಾದದ್ದು. ಈ ಪರಂಪರೆಯ ವಿವಿಧ ಮುಖಗಳನ್ನು ಜನಸಾಮಾನ್ಯರಿಗೂ ಅಧಿಕೃತವಾಗಿ ತಿಳಿಯಪಡಿಸುವುದು ಇತರೆ ಪರಂಪರೆಗಳಷ್ಟೇ ಅವಶ್ಯಕವಾದದ್ದು.

ಕೃಷಿಯನ್ನು ಮತ್ತು ಸಂಸ್ಕೃತಿಯನ್ನು ಬೇರೆಬೇರೆಯಾಗಿ ನೋಡುವುದು ಸಾಧ್ಯವೇ ಇಲ್ಲ. ಎಲ್ಲ ಸಂಸ್ಕೃತಿ ಮತ್ತು ನಾಗರಿಕತೆಗಳ ಮೂಲ ಸೆಲೆಯೇ ಕೃಷಿ. ಕೃಷಿಗಾಗಿ ಮಾನವ ಒಂದೆಡೆ ನೆಲಯೂರಿದುದರಿಂದಾಗಿ ನಂತರದ ಆರ್ಥಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಯ ಮೇಲೂ ಮಹತ್ತರ ಪರಿಣಾಮಗಳು ಬೀರತೊಡಗಿದವು. ಹಾಗಾಗಿ ಕೃಷಿ ಸಾಹಿತ್ಯ ಚರಿತ್ರೆಯ ಅಧ್ಯಯನಕ್ಕೆ ಪೂರಕವಾಗಿ ಕೃಷಿ ಚರಿತ್ರೆಯ ಅಧ್ಯಯನವೂ ಅವಶ್ಯಕವಾದುದು. ಕೃಷಿಗೆ ಸುಮಾರು ೯೦೦೦-೧೦೦೦೦ ವರ್ಷಗಳ ಚರಿತ್ರೆಯಿದೆ. ಆದರೆ ಕನ್ನಡದ ಕೃಷಿ ಸಾಹಿತ್ಯಕ್ಕೆ ಒಂದು ಶತಮಾನದ ಚರಿತ್ರೆಯಷ್ಟೇ ಇದೆ.

ಕೃಷಿ ಸಾಹಿತ್ಯವನ್ನು ಶಾಸ್ತ್ರ ಅಥವಾ ವೈಜ್ಞಾನಿಕ ಸಾಹಿತ್ಯವೆಂದು ಪರಿಗಣಿಸುವುದಾದಲ್ಲಿ, ಕನ್ನಡದ ವೈಜ್ಞಾನಿಕ ಸಾಹಿತ್ಯದ ಚರಿತ್ರೆಯೂ ದೀರ್ಘವಾಗಿಲ್ಲ. ೧೯೧೭ರಿಂದೀಚೆಗಷ್ಟೇ ಕನ್ನಡದಲ್ಲಿ ಆಧುನಿಕ ವೈಜ್ಞಾನಿಕ ಸಾಹಿತ್ಯವನ್ನು ಕಾಣಬಹುದು. ಕರ್ನಾಟಕದ ಬಹುಮುಖ ವೈಜ್ಞಾನಿಕ ವಿಚಾರಶೀಲತೆಗೆ ಪ್ರಾಚೀನ ಇತಿಹಾಸವಿದ್ದರೂ ಅದು ವಿಜ್ಞಾನ ಸಾಹಿತ್ಯ ರೂಪದಲ್ಲಿ ಬರದಿರಲು ಹಲವಾರು ಕಾರಣಗಳಿವೆ. ಬ್ರಿಟಿಷರ ಆಳ್ವಿಕೆಯಲ್ಲಿದ್ದ ನಮಗೆ ಪಾಶ್ಚಾತ್ಯ ಶಿಕ್ಷಣ ಪದ್ಧತಿಯನ್ನು ಭಾರತಕ್ಕೆ ತಂದ ಬ್ರಿಟಿಷರು ವೈಜ್ಞಾನಿಕ ಶಿಕ್ಷಣವನ್ನು ಒದಗಿಸುವ ಬಗ್ಗೆ ಆಸಕ್ತಿ ತೋರಲಿಲ್ಲ. ಅವರು ನೀಡಿದ ಶಿಕ್ಷಣದ ಉದ್ದೇಶ ತಮಗೆ ಬೇಕಾದ ಗುಮಾಸ್ತರನ್ನೂ, ಆಡಳಿತಗಾರರನ್ನೂ ತಯಾರು ಮಾಡುವುದಷ್ಟೇ ಆಗಿತ್ತು. ಆದರೆ ನಮ್ಮ ದೇಶದ ನೈಸರ್ಗಿಕ ಸಂಪತ್ತಿನ ಪೂರ್ಣ ಪ್ರಯೋಜನ ಪಡೆಯುವುದಕ್ಕಾಗಿ ಆಧುನಿಕ ವಿಧಾನಗಳನ್ನು ಬಳಸಬೇಕಾಗಿ ಬಂದು, ಅದಕ್ಕೆ ಅವಶ್ಯವೆನಿಸುವ ತಂತ್ರಜ್ಞರನ್ನೂ ಇಲ್ಲಿಯೇ ತಯಾರುಮಾಡಬೇಕಾಗಿ ಬಂದುದರಿಂದ ಅಲ್ಪ ಪ್ರಮಾಣದಲ್ಲಿಯಾದರೂ ವೈಜ್ಞಾನಿಕ ಶಿಕ್ಷಣವನ್ನು ಪ್ರಾರಂಭಿಸಿದರು. ಹೀಗಾಗಿ ನಮ್ಮ ಜನತೆಗೆ ಆಧುನಿಕ ವಿಜ್ಞಾನದ ಸಂಪರ್ಕ ಬಹಳ ನಿಧಾನವಾಗಿ ಮತ್ತು ಬಹು ಕಡಿಮೆ ಪ್ರಮಾಣದಲ್ಲಿ ಒದಗಿ ಬಂತು. ಹಾಗಾಗಿ ಇತ್ತೀಚಿನವರೆಗೂ ಜನಪ್ರಿಯ ವಿಜ್ಞಾನ ಸಾಹಿತ್ಯಕ್ಕೆ ಜನತೆಯಿಂದ ಬೇಡಿಕೆ ಬರುವ ಸಂಭವ ತೀರಾ ಕಡಿಮೆಯಾಗಿತ್ತು.

೧೯೧೬ರಲ್ಲಿ ಸ್ಥಾಪಿತವಾದ ಮೈಸೂರು ವಿಶ್ವವಿದ್ಯಾನಿಲಯದ ಸೆಂಟ್ರಲ್ ಕಾಲೇಜು ಇಡೀ ಮೈಸೂರು ರಾಜ್ಯದ ಏಕೈಕ ವಿಜ್ಞಾನದ ಕಾಲೇಜಾಗಿತ್ತು. ವಿಜ್ಞಾನದ ಮಾತಿರಲಿ, ಯಾವುದಕ್ಕೇ ಆಗಲಿ, ವಿದ್ಯಾವಂತರೆನಿಸಿಕೊಂಡವರು ಕನ್ನಡವನ್ನು ಬಳಸಿದರೆ ಅವಮಾನವೆಂದು ಜನ ಭಾವಿಸಿದ್ದ ಕಾಲವದು. ಅಂತಹ ಸನ್ನಿವೇಶದಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಭೌತವಿಜ್ಞಾನ ಪ್ರಾಧ್ಯಾಪಕರಾಗಿದ್ದ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಮತ್ತು ಮೈಸೂರು ಸರ್ಕಾರದ ಪವನಶಾಸ್ತ್ರ ವೀಕ್ಷಣಾಲಯದ ಮುಖ್ಯಸ್ಥರಾಗಿದ್ದ ನಂಗಪುರಂ ವೆಂಕಟೇಶ ಅಯ್ಯಂಗಾರ್‌ರವರು ವಿಜ್ಞಾನವನ್ನು ಕನ್ನಡ ಭಾಷೆಯ ಮೂಲಕ ಜನತೆಯಲ್ಲಿ ಹರಡುವ ಅವಶ್ಯಕತೆಯನ್ನು ಮನಗಂಡು 'ಕರ್ಣಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ೧೯೧೭ರಲ್ಲಿ 'ವಿಜ್ಞಾನ' ಎಂಬ ಒಂದು ಮಾಸಪತ್ರಿಕೆಯನ್ನು ಹೊರಡಿಸಿದರು. ಆದರೆ ವಿಜ್ಞಾನಕ್ಕೇ ಮೀಸಲಾದ ಪತ್ರಿಕೆಯೊಂದು ಅಭಿವೃದ್ಧಿ ಹೊಂದಲು ಕಾಲವಿನ್ನೂ ಪಕ್ವವಾಗಿರಲಿಲ್ಲವೋ ಏನೋ ಜನತೆಯಿಂದ ಅದಕ್ಕೆ ಆಸರೆ ದೊರೆಯಲಿಲ್ಲ ಹಾಗೂ ಹನ್ನೆರಡು ಸಂಚಿಕೆಗಳ ಒಂದು ಸಂಪುಟ ಮುಗಿಸಿ ಪತ್ರಿಕೆಯು ನಿಂತುಹೋಯಿತು.

ಇಂದು ನಾವು 'ಜಾನಪದ' ಎಂದು ಪರಿಕಲ್ಪಿಸುವ ಸಂಗತಿಗಳೆಲ್ಲವೂ ಕೃಷಿ ಸಂಸ್ಕೃತಿಯ ಸಾಮುದಾಯಿಕ ಸಮಾಜವೊಂದರ ಕ್ರಿಯಾಚರಣೆಗಳಾಗಿವೆ. ಬದುಕಿನ ಹಲವಾರು ಅಂಶಗಳು ಜನಪದದಲ್ಲಿ ಹಾಸುಹೊಕ್ಕಾಗಿರುವಂತೆ ಕೃಷಿಯ ಬಗೆಗಿನ ಅನುಭವ ಹಾಗೂ ಪಾರಂಪರಿಕ ಜ್ಞಾನ ತಲೆಮಾರಿನಿಂದ ತಲೆಮಾರಿಗೆ ದೊರಕುತ್ತಿದ್ದ ಭೂಮಿಯ ಹಾಗೆ ಪಿತ್ರಾರ್ಜಿತವಾಗಿಯೇ ದೊರಕುತ್ತಿತ್ತು. ಶತಶತಮಾನಗಳ ಸಿದ್ಧ ಸಾಂಪ್ರದಾಯಿಕ ಕೃಷಿ ವಿಧಾನಗಳನ್ನು ಅನುಸರಿಸುತ್ತಿದ್ದ ರೈತರಿಗೆ ಬಾಹ್ಯ ಜ್ಞಾನ ಪರಿಕರದ ಅವಶ್ಯಕತೆ ಇರಲಿಲ್ಲ. ಮೌಖಿಕ ಜ್ಞಾನ ಪರಂಪರೆಯ ಅರಿವಷ್ಟೇ ಇದ್ದ ಹಾಗೂ ಕೃಷಿಯೇ ಬದುಕಾಗಿದ್ದ ಬಹುಪಾಲು ಅನಕ್ಷರಸ್ಥರಾಗಿದ್ದ ಅವರಿಗೆ ಶಿಷ್ಟ ಲಿಖಿತ ಸಾಹಿತ್ಯರೂಪದಲ್ಲಿ ಕೃಷಿಜ್ಞಾನ ಲಭಿಸಬಹುದು ಎಂಬ ಕಲ್ಪನೆಯೂ ಇರಲಿಕ್ಕಿಲ್ಲ.

ಜನಪದ ಸಾಹಿತ್ಯದ ಒಂದು ಪ್ರಮುಖವಾದ ಅಂಗ ಗಾದೆ. ಗಾದೆಗಳಲ್ಲಿ ಅವುಗಳ ಸಾಹಿತ್ಯಕ ಅಥವಾ ಸ್ವಾರಸ್ಯಕರ ಅಂಶಗಳನ್ನು ತಿಳಿದುಕೊಳ್ಳುವುದು ಒಂದು ಹಂತದ ಕೆಲಸವಾದರೆ, ಗಾದೆಗಳು ಪ್ರಸಾರದಲ್ಲಿರುವ ಪರಿಸರದ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವುದು ಮತ್ತೊಂದು ಪ್ರಮುಖವಾದ ಕೆಲಸವಾಗುತ್ತದೆ. ಗಾದೆಯೊಂದನ್ನು ಯಾವುದೇ ಒಬ್ಬ ವ್ಯಕ್ತಿ ಒಂದು ನಿರ್ದಿಷ್ಟ ಕಾಲದಲ್ಲಿ ಸೃಷ್ಟಿಸಿದ್ದಾನೆ ಎಂದು ಹೇಳುವುದು ಸಾಧ್ಯವಿಲ್ಲ. ಗಾದೆ ಒಂದು ಸಾಮೂಹಿಕ ಸೃಷ್ಟಿ. ಸಾಂದರ್ಭಿಕವಾಗಿ ಹುಟ್ಟಿಕೊಳ್ಳುವ ಗಾದೆ ಕ್ರಮೇಣ ಸಮುದಾಯದ ಸ್ವತ್ತಾಗಿ ಪರಂಪರಾಗತವಾಗಿ ಬೆಳೆಯುತ್ತ ಹೋಗುವ ಒಂದು

ಕ್ರಿಯೆ. ಕೃಷಿ ಜಾನಪದದ ಅತ್ಯುತ್ತಮ ಉದಾಹರಣೆ ಕೃಷಿ ಗಾದೆಗಳು. ಅವು ತಲೆತಲಾಂತರಗಳ ಅನುಭವದ ಮೂಸೆಯಿಂದ ಮೂಡಿಬಂದ ಉಕ್ತಿಗಳಷ್ಟೇ ಅಲ್ಲ, ಕೃಷಿಯ ಸಾಂಪ್ರದಾಯಿಕ ಜ್ಞಾನವನ್ನು ಪಸರಿಸುವ ಮೌಖಿಕ ಮಾಧ್ಯಮವೂ ಆಗಿವೆ.

ಕೃಷಿಯ ಲಿಖಿತ ಸಾಹಿತ್ಯ ಬರುವುದಕ್ಕೂ ಮೊದಲು ಕೃಷಿ ಮಾಹಿತಿಯ ಸಂವಹನಕ್ಕಾಗಿ ಕೃಷಿ ಇಲಾಖೆಯ ಅಧಿಕಾರಿಗಳು ಹಳ್ಳಿಗಳಿಗೆ ಭೇಟಿನೀಡಿ, ಸಭೆಗಳನ್ನು ನಡೆಸಿ ಹೊಸ ಕೃಷಿ ವಿಧಾನಗಳನ್ನು ಅನುಸರಿಸುವಂತೆ ಹಳ್ಳಿಗರನ್ನು ಓಲೈಸುತ್ತಿದ್ದರು ಅಥವಾ ಹತ್ತಿರದ ಸರ್ಕಾರಿ ಕೃಷಿಕ್ಷೇತ್ರಗಳಿಗೆ ಭೇಟಿ ನೀಡುವಂತೆ ಆಹ್ವಾನಿಸುತ್ತಿದ್ದರು. ರೈತ ಅನಕ್ಷರಸ್ಥನಾಗಿದ್ದುದರಿಂದ ಆತನಿಗೆ ಅಧಿಕಾರಿಗಳು ಹೇಳುತ್ತಿದ್ದುದರಲ್ಲಿ ಅಥವಾ ತಾನು ತನ್ನ ಹೊಲದಲ್ಲಿ ಅಥವಾ ಇತರರ ಹೊಲಗಳಲ್ಲಿ ಕಣ್ಣಾರೆ ಕಾಣುತ್ತಿದ್ದುದರಲ್ಲಿ ನಂಬಿಕೆ ಇರುತ್ತಿತ್ತು.

ಕೃಷಿವಿಜ್ಞಾನ ಸಾಹಿತ್ಯದ ಉಗಮ ಮತ್ತು ವಿಕಾಸದ ಅಧ್ಯಯನಕ್ಕಾಗಿ ಕಾಲವನ್ನು ಮೂರು ಹಂತಗಳಾಗಿ ವಿಭಜಿಸಿಕೊಳ್ಳಲಾಗಿದೆ. ಈ ಕಾಲಘಟ್ಟಗಳಲ್ಲಿ ಕೃಷಿಯ ಚಾರಿತ್ರಿಕ, ರಾಜಕೀಯ ಹಾಗೂ ವೈಜ್ಞಾನಿಕ ಕ್ಷೇತ್ರಗಳಲ್ಲಿ ಅತ್ಯಂತ ಮಹತ್ತರ ಬದಲಾವಣೆಗಳಾಗಿವೆ. ಈ ಮೂರು ಹಂತಗಳಾವುವೆಂದರೆ:

೧. ಮೊದಲನೆಯ ಹಂತ– ೧೯ನೆಯ ಶತಮಾನದ ಅಂತ್ಯದಿಂದ ೧೯೪೭ರವರೆಗೆ

೨. ಎರಡನೆಯ ಹಂತ– ೧೯೪೮ರಿಂದ ೧೯೮೦ರವರೆಗೆ

೩. ಮೂರನೆಯ ಹಂತ– ೧೯೮೧ರಿಂದ ಇಂದಿನವರೆಗೂ

೧೯ನೆಯ ಶತಮಾನದ ಅಂತ್ಯದಿಂದ ೧೯೪೭ರವರೆಗಿನ ಮೊದಲನೆಯ ಹಂತದಲ್ಲಿ ಕೃಷಿ ಕ್ಷೇತ್ರ ಮಹತ್ತರ ಬದಲಾವಣೆಗಳನ್ನು ಕಂಡಿತು. ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಆಸಕ್ತಿಯಿಂದಾಗಿ ಪ್ರತ್ಯೇಕ ಕೃಷಿ ಇಲಾಖೆ ಸ್ಥಾಪಿತವಾಯಿತು. ಅವರ ಆಸಕ್ತಿಗೆ ಪೂರಕವಾಗಿ ಅವರೇ ನೇಮಿಸಿದ ಕೆನಡಾದ ಡಾ.ಲೆಸ್ಲಿ ಕೋಲ್‌ಮನ್‌ರವರು ಕರ್ನಾಟಕದಲ್ಲಿ ಮೊಟ್ಟಮೊದಲ ಕೃಷಿ ಶಾಲೆ, ಅನಂತರ ಕೃಷಿ ಡಿಪ್ಲೊಮೊ ಶಿಕ್ಷಣ ಪ್ರಾರಂಭಿಸಿದರು. ಅನಂತರ ಕೃಷಿ ಕಾಲೇಜು ಹಾಗೂ ಕೃಷಿ ವಿಶ್ವವಿದ್ಯಾನಿಲಯಗಳು ಪ್ರಾರಂಭವಾದುವು.

೧೯ನೆಯ ಶತಮಾನದ ಅಂತ್ಯದಲ್ಲಿಯೇ ಕೆಲವು ಕೃಷಿ ಸಾಹಿತ್ಯ ಕೃತಿಗಳು ಪ್ರಕಟವಾಗಿವೆ. ಮಂಗಳೂರಿನ ಬ್ಯಾಸೆಲ್ ಮಿಶನ್ ಬುಕ್ ಮತ್ತು ಟ್ರ್ಯಾಕ್ಟ್ ಡೆಪಾಸಿಟರಿಯವರು ಗಣಪಯ್ಯ ಚಂದಾವರರ **ಗೋ ವೃಷಭಾದಿಗಳ ಸಂರಕ್ಷಣ ವೈದ್ಯಾದಿಗಳ ಕ್ರಮವು** ಎಂಬ ಕೃತಿಯನ್ನು ೧೮೭೭ರಲ್ಲೇ ಪ್ರಕಟಿಸಿದ್ದರೂ ಅದು ಜಾನುವಾರುಗಳ ರೋಗ ಚಿಕಿತ್ಸೆಯ ಬಗೆಗಿನ ಕೃತಿಯಾಗಿರುವುದರಿಂದ ಸುಮಾರು ೧೮೭೯ರಲ್ಲಿ ರಚಿತವಾದ ಶ್ರೀ ನಾಗಭೂಷಣ

ಘನಮಠ ಶಿವಯೋಗಿಗಳ **ಕೃಷಿಜ್ಞಾನ ಪ್ರದೀಪಿಕೆ**ಯನ್ನು ಕನ್ನಡದ ಮೊಟ್ಟಮೊದಲ ಕೃಷಿ ಸಾಹಿತ್ಯವೆಂದು ಗುರುತಿಸಲಾಗಿದೆ. ಬೇಸಾಯವು ಬದುಕಿನ ಒಂದು ರೀತಿ ಮಾತ್ರವಲ್ಲ ಅದು ಆಧ್ಯಾತ್ಮ ಬದುಕಿನ ಒಂದು ಭಾಗವೆಂದು ಅದರ ಲೇಖಕರು ಪರಿಗಣಿಸುತ್ತಾರೆ. 'ಈ ಭೂಮಿಯು ಕಲ್ಪವೃಕ್ಷಕ್ಕೂ ಕಾಮಧೇನುವಿಗೂ ಚಿಂತಾಮಣಿಗೂ ಪರುಷದ ಕಣಿಗೂ ಸಮಾನವಾಗಿದೆ. ಇಂಥ ಭೂಮಿ ಇದ್ದು ಮನುಷ್ಯರುಗಳು ಕಾಯಶಕ್ತಿಯಿಂದಲೂ, ಬುದ್ಧಿಶಕ್ತಿಯಿಂದಲೂ, ದ್ರವ್ಯಶಕ್ತಿಯಿಂದಲೂ ಮೆಹನತುಮಾಡಿ ಶ್ರಮಪಟ್ಟು, ಸಕಲ ಸಂಪತ್ತನ್ನು ದೊರಕಿಸಿಕೊಳ್ಳಬೇಕು. ಮೈಗಳ್ಳರಾಗಿ ದರಿದ್ರರಾಗಬಾರದು, ಮೈಗಳ್ಳತನವು ದಾರಿದ್ರ್ಯಕ್ಕೆ ಮುಖ್ಯ ಕಾರಣವಾಗಿದೆ' ಎಂದು ಒಂದನೆಯ ಪ್ರಕರಣದಲ್ಲೇ ಹೇಳಿದ್ದಾರೆ. ವೈಜ್ಞಾನಿಕ ವಿಶ್ಲೇಷಣೆಯಿಂದಲ್ಲದಿದ್ದರೂ ಅನುಭಾವ ಮತ್ತು ಅನುಭವದ ಸಾರಾಮೃತದಿಂದ ಈ ಕೃತಿ ರಚಿತವಾಗಿದೆ ಹಾಗೂ ಅದರಲ್ಲಿ ನೀರಾವರಿ ಬೇಸಾಯ, ಕುಷ್ಕಿ ಅಥವಾ ಒಣ ಬೇಸಾಯ ಮುಂತಾದ ವಿಷಯಗಳ ಬಗ್ಗೆ ಸುದೀರ್ಘವಾಗಿ ಚರ್ಚಿಸಲಾಗಿದೆ.

ಈ ಗ್ರಂಥದ ಉತ್ತರಾರ್ಧದಲ್ಲಿ ಪಾರಮಾರ್ಥ ಕೃಷಿಯ ಬಗ್ಗೆ ತಿಳಿಸಿರುವುದು ಈ ಕೃತಿಯ ವಿಶೇಷವಾಗಿದೆ. ಪಾರಮಾರ್ಥ ಕೃಷಿಕನು ತನ್ನ ಕೃಷಿಯಲ್ಲಿ ಪಂಚ ಪ್ರಕರಣಗಳಾದಂತಹ ನಿಜನಿರ್ಮಲತ್ವ, ಸತ್ಯ ಸದಾಚಾರ, ಸಹಜ ಸುಜ್ಞಾನ, ಶಿವೈಕ್ಯ ಸದ್ಭಕ್ತಿ ಮತ್ತು ನಿಜಲಿಂಗೈಕ್ಯಗಳ ಸಾರ ಸಮ್ಮಿಶ್ರಣದಿಂದ ಸದ್ಯೋನ್ಮುಕ್ತಿಯಂ ಪಡೆಯಬಹುದೆನ್ನುತ್ತಾರೆ ಲೇಖಕರಾದ ಶ್ರೀ ನಾಗಭೂಷಣ ಘನಮಠ ಶಿವಯೋಗಿಗಳು.

ಮೈಸೂರು ವ್ಯವಸಾಯದ ಇಲಾಖೆಯ ಡೈರೆಕ್ಟರ್ ಆಗಿದ್ದ ಕೆನಡಾದ ಡಾ.ಕೋಲ್‌ಮನ್‌ರವರು ೧೯೧೫ರಲ್ಲಿ ಮೈಸೂರು ವ್ಯವಸಾಯದ ಇಲಾಖೆಯಿಂದ ಮೈಸೂರು ವ್ಯವಸಾಯದ ಕ್ಯಾಲೆಂಡರ್ ಅಥವಾ ವಾರ್ಷಿಕ ಪಂಚಾಂಗದ ಪ್ರಕಟಣೆಯನ್ನು ಪ್ರಾರಂಬಿಸಿದರು. ಆಗ ಅದರ ಬೆಲೆ ೧ ಆಣೆ ಇತ್ತು. ಅದು ಪಂಚಾಂಗ ಮತ್ತು ವಾರ್ಷಿಕ ಪುಸ್ತಕವಲ್ಲದೆ ರೈತರ ವ್ಯವಸಾಯ ಕೈಪಿಡಿಯೂ ಆಗಿತ್ತು. ಅದರಲ್ಲಿ ವ್ಯವಸಾಯಕ್ಕೆ ಸಂಬಂಧಪಟ್ಟ ಸಂಶೋಧನೆಗಳ ಫಲಿತಗಳನ್ನು ಜನಪ್ರಿಯವಾಗುವಂತೆ ತಿಳಿಸುವ ಅನೇಕ ಲೇಖನಗಳಿದ್ದವು.

ಅದೇ ಡಾ.ಕೋಲ್‌ಮನ್‌ರವರು ೧೯೧೮ರಲ್ಲಿ 'ಮೈಸೂರು ವ್ಯವಸಾಯ ಶೋಧಕ ಸಂಘ'ವನ್ನು ಪ್ರಾರಂಭಿಸಿದರು. ವ್ಯವಸಾಯವನ್ನು ಉತ್ತಮಗೊಳಿಸಿ ತನ್ಮೂಲಕ ರೈತನ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸುವ ಉದ್ದೇಶದಿಂದ ಪ್ರಾರಂಭವಾದ ಸಂಘವು ತನ್ನ ಹಲವಾರು ಕಾರ್ಯಕ್ರಮಗಳ ಜೊತೆಗೆ ವ್ಯವಸಾಯವನ್ನು ಕುರಿತ ಲೇಖನಗಳುಳ್ಳ ಒಂದು ಕನ್ನಡ ಪತ್ರಿಕೆಯನ್ನೂ ಒಂದು ಇಂಗ್ಲಿಷ್ ಪತ್ರಿಕೆಯನ್ನೂ ಪ್ರಕಟಿಸುವ ಉದ್ದೇಶದಿಂದ 'ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ' ಎಂಬ ತ್ರೈಮಾಸಿಕ ಪತ್ರಿಕೆಯ

ಪ್ರಕಟಣೆಯನ್ನು ಪ್ರಾರಂಭಿಸಿತು. ಇದು ಕನ್ನಡದ ಮೊಟ್ಟಮೊದಲ ಕೃಷಿ ಪತ್ರಿಕೆ. ಈ ಪತ್ರಿಕೆಯು ೫ನೆಯ ಸಂಪುಟದಿಂದ ಮಾಸಪತ್ರಿಕೆಯಾಗಿ ಪರಿವರ್ತಿತಗೊಂಡಿತು. ಈ ಪತ್ರಿಕೆಯು, 'ಶಾಸ್ತ್ರವನ್ನೋದಿದ ಪಂಡಿತರು ಮಾತ್ರವೇ ಪತ್ರಿಕೆಗೆ ಲೇಖನಗಳನ್ನು ಬರೆಯಬಲ್ಲರೆಂದೂ ಇತರರಿಗೆ ಸಾಧ್ಯವಿಲ್ಲವೆಂದೂ ತಿಳಿಯಬಾರದು. ವ್ಯವಸಾಯ ವೃತ್ತಿಯನ್ನು ಕೈಕೊಂಡಿರುವವರೆಲ್ಲರೂ ಬರೆಯಬಹುದು. ಸಾಮಾನ್ಯ ರೈತರೂ ಕೂಡ ತಮ್ಮ ಅನುಭವಗಳನ್ನು ಪರಸ್ಪರವಾಗಿ ಹೇಳಿ ಕೇಳಿ ತಿಳಿದುಕೊಳ್ಳುವುದು ಏಳಿಗೆಗೆ ದಾರಿಯಾಗುವುದು. ಯಾವ ವಿಷಯವನ್ನೂ ಅಲ್ಪವೆಂದು ಅಸಡ್ಡೆ ಮಾಡಬೇಡಿ' ಎಂದು ಹೇಳಿ ಎಂಟು ದಶಕಗಳ ಹಿಂದೆಯೇ ರೈತರಿಗೆ ತಮ್ಮ ಅನುಭವಗಳನ್ನು ಹಂಚಿಕೊಳ್ಳಲು ಉತ್ತೇಜಿಸಿತು.

ಐವತ್ತರ ದಶಕದಲ್ಲಿ 'ಮೈಸೂರು ವ್ಯವಸಾಯ ಶೋಧಕರ ಸಂಘವು' ಪಂಜಾಬ್ ರಾವ್ ದೇಶಮುಖ್‌ರವರು ಸ್ಥಾಪಿಸಿದ 'ಭಾರತ ಕೃಷಿಕ ಸಮಾಜ'ದೊಂದಿಗೆ ವಿಲೀನಗೊಂಡು 'ಮೈಸೂರು ಕೃಷಿಕ ಸಮಾಜ'ವಾಯಿತು. ಅನಂತರ ಅದು 'ಕರ್ನಾಟಕ ಪ್ರದೇಶ ಕೃಷಿಕ ಸಮಾಜ'ವೆಂದು ಬದಲಾಯಿತು ಹಾಗೂ 'ಮೈಸೂರು ವ್ಯವಸಾಯ ಶೋಧಕರ ಸಂಘದ ಪತ್ರಿಕೆ'ಯು 'ಕರ್ನಾಟಕ ವ್ಯವಸಾಯ ಪತ್ರಿಕೆ'ಯೆಂದು ಬದಲಾಗಿ ಮಾಸಿಕ ಪತ್ರಿಕೆಯ ರೂಪದಲ್ಲಿ ಇಂದಿಗೂ ಪ್ರಕಟವಾಗುತ್ತಿದೆ.

೧೯೪೭ರಿಂದ ೧೯೭೦ರವರೆಗಿನ ಎರಡನೆಯ ಹಂತ ಭಾರತದ ಸ್ವಾತಂತ್ರ್ಯೋತ್ತರ ಹಂತ. ಭಾರತಕ್ಕೆ ಸ್ವಾತಂತ್ರ್ಯ ದೊರಕಿದಾಗ ಅದರ ಆಹಾರ ಪರಿಸ್ಥಿತಿ ಉತ್ತಮವಾಗಿರಲಿಲ್ಲ. ಆಹಾರದ ಉತ್ಪಾದನೆಯನ್ನು ಹೆಚ್ಚಿಸಲೇ ಬೇಕಾದುದರಿಂದ ಸಾಂಪ್ರದಾಯಿಕ ಕೃಷಿ ಮಾಡುತ್ತಿದ್ದ ರೈತ 'ಆಧುನಿಕ ಹಾಗೂ ವೈಜ್ಞಾನಿಕ ಕೃಷಿ'ಯನ್ನು ಅನುಸರಿಸಬೇಕಾಯಿತು. ಈ ಬೆಳವಣಿಗೆಗಳೊಂದಿಗೆ ಹೊಸ ರೀತಿಯ ಕೃಷಿ ಸಾಹಿತ್ಯದ ಅಭಿವ್ಯಕ್ತಿ ಅನಿವಾರ್ಯವಾಯಿತು. ಕೃಷಿ ಇಲಾಖೆ, ಕೃಷಿ ವಿಶ್ವವಿದ್ಯಾನಿಲಯಗಳು ಹಾಗೂ ಇತರ ವಿಶ್ವವಿದ್ಯಾಲಯಗಳು, ವಯಸ್ಕರ ಶಿಕ್ಷಣ ಇಲಾಖೆ ಮುಂತಾದುವು ರೈತರ ಅರಿವು ಹೆಚ್ಚಿಸುವ ಸಲುವಾಗಿ ಕೃಷಿ ವಿಜ್ಞಾನ ಸಾಹಿತ್ಯ ಪ್ರಕಟಣೆಯಲ್ಲಿ ತೊಡಗಿದುವು.

ಹಸಿರು ಕ್ರಾಂತಿಯ ಪ್ರಾರಂಭವು ಕೃಷಿ ಸಂವಹನೆಗೆ ಹೆಚ್ಚು ಒತ್ತು ಕೊಟ್ಟಿತು. ಸಂವಹನೆಯ ವಿಧಾನ ಮತ್ತು ಧ್ಯೇಯೋದ್ದೇಶಗಳು ಆಧುನಿಕ ಕೃಷಿಯ ಆದ್ಯತೆಗಳನುಸಾರ ಬದಲಾಗುತ್ತಾ ಹೋಯಿತು. ಕೃಷಿ ವಿಸ್ತರಣ ತತ್ವಗಳ ತಳಹದಿಯ ಮೇಲೆಯೇ ಕೃಷಿ ಸಾಹಿತ್ಯ ರಚನೆ ಮತ್ತು ಕೃಷಿ ಪತ್ರಿಕೋದ್ಯಮ ಬೆಳೆಯುತ್ತಾ ಹೋಯಿತು. ಅಂದಿನ ಯಾಂತ್ರಿಕ ಬೇಸಾಯದ ತಳಹದಿಯ ಮೇಲೆ ಭಾರತದ ಬೇಸಾಯ ಪದ್ಧತಿಯನ್ನು

ಬದಲಿಸಬೇಕಾದಲ್ಲಿ ಬೇಸಾಯಗಾರ ಮತ್ತು ಜನ ಸಾಮಾನ್ಯರಲ್ಲಿ ಆ ಬಗ್ಗೆ ತಿಳಿವಳಿಕೆ ಬೆಳೆಸುವುದು ಬಹಳ ಮುಖ್ಯವಾಗಿತ್ತು. ಆಧುನಿಕ ಬೇಸಾಯದ ವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರು ಪೇಟೆ ಪಟ್ಟಣಗಳ ಹಾಗೂ ಹಳ್ಳಿಗಾಡುಗಳ ರೈತರಿಗೆ ವಿವರಿಸಿ ಹೇಳುವುದು ಅತ್ಯವಶ್ಯಕವಾಯಿತು. ಕಳೆದ ಶತಮಾನದ ಐದನೇ ದಶಕದ ಈ ಸಂದಿಗ್ಧ ಹಂತದಲ್ಲಿ ಕೃಷಿ ಸಂವಹನೆ ಒಂದು ಸಾಂಸ್ಥಿಕ ರೂಪ ತಳೆಯಿತು.

ಅದರಂತೆ ಅರವತ್ತರ ದಶಕದ ಕೊನೆಯಿಂದ ಪ್ರಕಟವಾದ ಸಾಹಿತ್ಯದಲ್ಲಿ ಕೃಷಿವಿಜ್ಞಾನ ಹೊಸರೂಪ ಪಡೆಯತೊಡಗಿದ್ದನ್ನು ಕಾಣಬಹುದು. ಈ ಕೃತಿಗಳಲ್ಲಿ ಸಾಂಪ್ರದಾಯಿಕ ಕೃಷಿಯಿಂದ ಆಧುನಿಕ, 'ವೈಜ್ಞಾನಿಕ' ಕೃಷಿಯಾಗಿ ರೂಪಾಂತರವಾಗುವ ಕೃಷಿ ಸಂಕ್ರಮಣಾವಸ್ಥೆಯನ್ನು ಸ್ಫುಟವಾಗಿ ಕಾಣಬಹುದು. ರೈತರು ಹಿಂದುಳಿಯಲು ಅವರು ರಾಸಾಯನಿಕ ಗೊಬ್ಬರ, ಸುಧಾರಿಸಿದ ಬೀಜ ಮತ್ತು ಸಸ್ಯಸಂರಕ್ಷಣೆಯ ಬಗ್ಗೆ ಹೆಚ್ಚು ಒತ್ತು ನೀಡದಿರುವುದೇ ಕಾರಣವೆಂದು ಹೇಳಲಾಯಿತು.

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಂಗವು ರೈತರಿಗಾಗಿಯೇ ಪ್ರಕಟಿಸಿದ ಮೊಟ್ಟಮೊದಲ ಬೃಹದ್ಗ್ರಂಥ **ವ್ಯವಸಾಯ ಕೈಪಿಡಿ** (ಕುವೆಂಪು [ಪ್ರ.ಸಂ.] ೧೯೭೨). ೮೮೮ ಪುಟಗಳ ಈ ಗ್ರಂಥಕ್ಕೆ ಪ್ರಧಾನ ಸಂಪಾದಕರಾಗಿದ್ದ ಕುವೆಂಪುರವರು ಸಹ ತಮ್ಮ ಮುನ್ನುಡಿಯಲ್ಲಿ ಅಧಿಕ ಕೃಷಿ ಉತ್ಪಾದನೆಗೆ ಆಧುನಿಕ ಪದ್ಧತಿ ಮತ್ತು ಅಧಿಕ ಇಳುವರಿ ಕೊಡಬಲ್ಲ ತಳಿಗಳ ಬಳಕೆ ಮುಖ್ಯ, ರೈತರಿಗೆ ಈ ಮುಖ್ಯಾಂಶಗಳ ಅರಿವಿರದಿದ್ದರೆ ಇದು ಸಾಧ್ಯವಿಲ್ಲವೆಂದು ಹೇಳುತ್ತ , 'ತೀವ್ರಗತಿಯಲ್ಲಿ ಹೆಚ್ಚುತ್ತಿರುವ ರಾಜ್ಯದ ಜನತೆಗೆ ಅಗತ್ಯವಾದ ಆಹಾರವನ್ನು ಹೆಚ್ಚು ಹೆಚ್ಚಾಗಿ ಬೆಳೆಸುವುದು ಅತ್ಯಾವಶ್ಯಕ. ವ್ಯವಸಾಯ ಯೋಗ್ಯ ಭೂ ವಿಸ್ತೀರ್ಣಕ್ಕೆ ಮಿತಿಯಿದೆ. ಆದ್ದರಿಂದ ಇರುವ ಭೂ ಪ್ರದೇಶದಲ್ಲೇ ಹೆಚ್ಚು ಉತ್ಪತ್ತಿ ಪಡೆಯಬೇಕು. ಇದಕ್ಕೆ ಆಧುನಿಕ ಪದ್ಧತಿ ಮತ್ತು ಅಧಿಕ ಇಳುವರಿ ಕೊಡಬಲ್ಲ ತಳಿಗಳ ಬಳಕೆ ಮುಖ್ಯ. ರೈತರಿಗೆ ಈ ಮುಖ್ಯಾಂಶಗಳ ಅರಿವಿರದಿದ್ದರೆ ಇದು ಸಾಧ್ಯವಿಲ್ಲ'ವೆಂದು ಹೇಳಿದ್ದಾರೆ.

ಈ ರೀತಿಯ ಕೃಷಿಗೆ ವಿಜ್ಞಾನ ಕೊಡುವ ಕೊಡುಗೆ ಯಾವ ರೀತಿಯಲ್ಲಿ ಇರಬೇಕೆಂಬುದನ್ನು ಡಾ. ಆರ್. ದ್ವಾರಕೀನಾಥ್‌ರವರು **ಆಧುನಿಕ ಬೇಸಾಯ ಪ್ರಶ್ನೆ–ಪರಿಹಾರ (ಭಾಗ–೧)**ರ (ಶೇಷಾದ್ರಿ ಅಯ್ಯರ್.ಅ. ಹಾಗೂ ಇತರರು, ೧೯೭೩), ಮುನ್ನುಡಿಯಲ್ಲಿ, 'ನಮ್ಮ ಬೇಸಾಯದಲ್ಲಿ ಇದು ಒಂದು ಪರ್ವ ಕಾಲ. ಸಾಂಪ್ರದಾಯಕ ಬೇಸಾಯವು ಸ್ವಲ್ಪ ಸ್ವಲ್ಪವಾಗಿ ಬದಲಾವಣೆ ಹೊಂದಿ ವಾಣಿಜ್ಯ ಬೇಸಾಯವಾಗಿ ರೂಪುಗೊಳ್ಳುತ್ತಿದೆ. ಹೀಗೆ ವ್ಯವಸಾಯ, ರೂಪಾಂತರವನ್ನು ಹೊಂದುವಾಗ ಅನೇಕ ಹೊಸ ವಿಚಾರಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಇವುಗಳಲ್ಲಿ ಇತ್ತೀಚೆಗೆ ದೊರೆಯುತ್ತಿರುವ

ತಾಂತ್ರಿಕ ಜ್ಞಾನವು ಒಂದು ಮುಖ್ಯ ಅಂಶ'. ಕೃಷಿ ಸಂಶೋಧನಾ ಕ್ಷೇತ್ರಗಳಲ್ಲಿ ನಡೆಯುತ್ತಿರುವ ಪರೀಕ್ಷೆಗಳ ದೆಸೆಯಿಂದ ಅನೇಕ ಹೊಸ ವಿಚಾರಗಳು ಹೊರಬೀಳುತ್ತಿರುತ್ತವೆ. ಈ ವಿಚಾರಗಳು ಸರಳವೂ, ಸುಲಭವೂ ಆದ ರೀತಿಯಲ್ಲಿ ನಮ್ಮ ರೈತರಿಗೆ ದೊರಕಬೇಕಾಗಿದೆ' ಎಂದು ಹೇಳಿದ್ದಾರೆ.

ಕೃಷಿಯ ಹೊಸ ವಿಚಾರಗಳನ್ನು ರೈತರಿಗೆ ತಲುಪಿಸುವುದು ಹೆಚ್ಚು ಸೂಕ್ತವಾಗಿ ಹಾಗೂ ಸುಲಭವಾಗಿ ಕಂಡಿದ್ದರಿಂದಲೋ ಏನೋ ಇದೇ ಸಮಯದಲ್ಲಿ ಮೈಸೂರಿನ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಹಲವಾರು ಕಿರುಹೊತ್ತಿಗೆಗಳನ್ನು ಪ್ರಕಟಿಸಿತು. ವಯಸ್ಕರ ಶಿಕ್ಷಣ ಗ್ರಾಮೀಣ ಜನರನ್ನು ಉದ್ದೇಶಿಸಿಯೇ ಇದ್ದುದರಿಂದ ಹಾಗೂ ಗ್ರಾಮೀಣ ಜನರೆಲ್ಲರೂ ಬಹುಪಾಲು ರೈತರೇ ಆಗಿರುವುದರಿಂದ ಈ ವಯಸ್ಕರ ಶಿಕ್ಷಣ ಸಾಹಿತ್ಯದಲ್ಲೂ ಕೃಷಿ ವಿಚಾರಗಳನ್ನು ಪ್ರಕಟಿಸಲಾಗುತ್ತಿತ್ತು.

ಕೃಷಿ ಕ್ಷೇತ್ರದ ಬೆಳವಣಿಗೆಯಲ್ಲಿ, ತನ್ಮೂಲಕ ಕೃಷಿವಿಜ್ಞಾನ ಸಾಹಿತ್ಯದ ವಿಕಾಸದಲ್ಲಿ ೧೯೮೧ರಿಂದ ಇಂದಿನವರೆಗಿನ ಮೂರನೆಯ ಹಂತವು ಅತ್ಯಂತ ಸಂದಿಗ್ಧವಾದುದು. ಕೃಷಿ ಇಂದು ಬದುಕಿನ ಒಂದು ಬದುಕಿನ ವಿಧಾನವಾಗಷ್ಟೇ ಉಳಿದಿಲ್ಲ. ಎಲ್ಲ ಕ್ಷೇತ್ರಗಳ ವಾಣಿಜ್ಯೀಕರಣವಾಗಿರುವಂತೆ ಕೃಷಿ ಕ್ಷೇತ್ರದ ವಾಣಿಜ್ಯೀಕರಣವೂ ಆಗಿದೆ. ಜಾಗತೀಕರಣದಿಂದ ನಾವು ಯಾವುದನ್ನು ಸಂಸ್ಕೃತಿ ಎಂದು ಭಾವಿಸಿದ್ದೀವೆಯೋ ಅದು ವಿನಾಶದ ಅಂಚಿನಲ್ಲಿದೆ. ಶತಶತಮಾನಗಳಿಂದ ನಿರಂತರವಾಗಿ ಸಾಗಿದ್ದ ಸಂಸ್ಕೃತಿಯ ಗತಿ ಹಾಗೂ ದಿಕ್ಕು ಶರವೇಗದ ವಿಜ್ಞಾನ ಹಾಗೂ ತಂತ್ರಜ್ಞಾನದ ಅಭಿವೃದ್ಧಿಯಿಂದಾಗಿ ತುಂಡರಿಸಿದೆ. ಅಂದು ಪ್ರಕೃತಿಯ ವಿಕೋಪಗಳನ್ನಷ್ಟೇ ಎದುರಿಸಬೇಕಾಗಿದ್ದ ರೈತ ಇಂದು ಪರಿಸರ ಮಾಲಿನ್ಯ, ಬಹುರಾಷ್ಟ್ರೀಯ ಸಂಸ್ಥೆಗಳ ಮೇಲಿನ ಅವಲಂಬತೆ, ಪೇಟೆಂಟ್ ಮತ್ತು ಬೌದ್ಧಿಕ ಆಸ್ತಿ ಹಕ್ಕು, ರೈತ ವಿರೋಧಿ ಕೃಷಿ ನೀತಿಗಳು, ದಿನದಿನಕ್ಕೆ ಕಾಣಿಸಿಕೊಳ್ಳುತ್ತಿರುವ ಹೊಸ ಹೊಸ ರೋಗ ಮತ್ತು ಪೀಡೆಗಳು ಮುಂತಾದ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಹಸಿರು ಕ್ರಾಂತಿಯಿಂದ ಇಂದು ಪರಿಸರ ಮಾಲಿನ್ಯ, ಅಂತರ್ಜಲ ನಿಕ್ಷೇಪ ಖಾಲಿಯಾಗಿರುವುದು, ನೀರು ಮತ್ತು ಗಾಳಿಯ ಮಲಿನತೆ, ಭೂಮಿ ಬರಡಾಗಿರುವುದು ಮುಂತಾದ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಹಾಗಾಗಿ ಕೃಷಿ ವಿಜ್ಞಾನ ಸಾಹಿತ್ಯ ಹೊಸ ಹಾಗೂ ವಿಶಿಷ್ಟ ರೂಪು ಪಡೆಯುತ್ತಿದೆ; ರೈತನ ಅರಿವನ್ನು ಮತ್ತೊಂದು ದಿಕ್ಕಿನಲ್ಲಿ ಹೆಚ್ಚಿಸುವ ಪ್ರಯತ್ನ ಈ ಸಾಹಿತ್ಯ ನಡೆಸುತ್ತಿದೆ.

ಆಧುನಿಕ ಕೃಷಿ ಅಥವಾ ಹಸಿರು ಕ್ರಾಂತಿಯ ಅಳವಡಿಕೆ ಹಾಗೂ ನಂತರದ ಜಾಗತೀಕರಣ ಮತ್ತು ಉದಾರೀಕರಣ ನೀತಿಗಳಿಂದಾಗಿ ಭಾರತೀಯ ರೈತರ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಪರಿಸ್ಥಿತಿಗಳಲ್ಲಿ ಮಹತ್ತರ ಪರಿಣಾಮಗಳುಂಟಾದುವು.

ಅನಿರ್ಬಂಧಿತ ಕೀಟನಾಶಕ ಹಾಗೂ ರಸಗೊಬ್ಬರಗಳ ಬಳಕೆಯಿಂದ ಮಣ್ಣು, ನೀರು ಹಾಗೂ ಗಾಳಿಯು ಕಲುಷಿತಗೊಂಡು ಮನುಷ್ಯರ ಮತ್ತು ಪ್ರಾಣಿಪಕ್ಷಿಗಳ ಆರೋಗ್ಯದ ಮೇಲೆ ಪರಿಣಾಮ ಬೀರತೊಡಗಿತು. ೧೯೦೦ರಿಂದ ೧೯೫೦ರವರೆಗೆ ಶೇ. ೦.೩ರಷ್ಟಿದ್ದ ನಮ್ಮ ವಾರ್ಷಿಕ ಕೃಷಿ ಉತ್ಪಾದನೆ ೧೯೬೦-೭೦ರ ಅವಧಿಯಲ್ಲಿ ಅಧಿಕಗೊಂಡು ಶೇ. ೩.೩ರಷ್ಟಾಯಿತು. ಆದರೆ ೧೯೯೦-೯೮ರ ವೇಳೆಗೆ ಶೇ. ೧.೮ರಷ್ಟಿದ್ದ ಜನಸಂಖ್ಯಾ ಬೆಳವಣಿಗೆಗೆ ಹೋಲಿಸಿದಲ್ಲಿ ಕೃಷಿ ಉತ್ಪಾದನೆ ಶೇ. ೧.೪ಕ್ಕೆ ಇಳಿಯಿತು. ಸಾಕಷ್ಟು ಅಧಿಕ ಇಳುವರಿ ತಳಿಗಳು, ರಸಗೊಬ್ಬರ, ಪೀಡೆ ನಾಶಕ, ನೀರಾವರಿ ಸೌಲಭ್ಯ ಹಾಗೂ ಸಾಲಸೌಲಭ್ಯಗಳ ಲಭ್ಯತೆಯಿದ್ದರೂ ಈ ಆಧುನಿಕ ಕೃಷಿ ಸುಸ್ಥಿರವಲ್ಲವೆಂಬುದನ್ನು ತೋರಿಸುತ್ತದೆ. ಹೆಚ್ಚಿದ ಉತ್ಪಾದನೆಯಿಂದಾಗಿ ರಫ್ತು ಮಾಡುವಂತಹ ಸ್ಥಿತಿಯಿಂದ ಈಗ ಮತ್ತೆ ಗೋಧಿಯಂತಹ ಆಹಾರ ಧಾನ್ಯವನ್ನು ಆಮದು ಮಾಡಿಕೊಳ್ಳಬೇಕಾದ ಪರಿಸ್ಥಿತಿ ಬಂದೊದಗಿದೆ.

ಕೃಷಿ ಕ್ಷೇತ್ರದ ರೂಪಾಂತರದಂತೆ ಕನ್ನಡ ಕೃಷಿವಿಜ್ಞಾನ ಸಾಹಿತ್ಯದ ರೂಪಾಂತರವೂ ನಡೆಯತೊಡಗಿತು. ಈ ಸಾಹಿತ್ಯ ರೂಪಾಂತರದ ಅವಲೋಕನೆಗೆ ಕೃಷಿ ಕ್ಷೇತ್ರದ ರೂಪಾಂತರದ ಅಧ್ಯಯನವೂ ಅಗತ್ಯವಾಗಿದೆ.

ಭಾರತೀಯ ಕೃಷಿಯು ಮೊದಲಿಗೆ **ಕೌಟುಂಬಿಕ ಕೃಷಿ**ಯಾಗಿತ್ತು, ಅಂದರೆ ಅದು ಬದುಕಿನ ಒಂದು ವಿಧಾನವಾಗಿತ್ತು ಹಾಗೂ ಜೀವನಾಧಾರದ ಕಸುಬಾಗಿತ್ತೇ ಹೊರತು ಅದರಲ್ಲಿ ಯಾವುದೇ ವಾಣಿಜ್ಯತೆಯ ಅಂಶಗಳಿರಲಿಲ್ಲ. ಆಗಿನ ಹಳ್ಳಿಗಳಲ್ಲಿ ಹಣಕ್ಕೆ ಆಸ್ಪದವೇ ಇರಲಿಲ್ಲ. ಗ್ರಾಮಗಳಲ್ಲಿನ ಎಲ್ಲ ವ್ಯವಹಾರಗಳೂ 'ವಸ್ತು ವಿನಿಮಯ' ರೂಪದಲ್ಲಿ ನಡೆಯುತ್ತಿದ್ದವು. ಅದು ಸಂಪೂರ್ಣ ಸ್ವಾವಲಂಬನೆಯ ಉದ್ಯೋಗವಾಗಿತ್ತು. ಅದಕ್ಕಾಗಿ ಹಿಂದಿನ ಬೆಳೆಯಿಂದ ಬಿತ್ತನೆ ಬೀಜ, ಸಸ್ಯ ಮತ್ತು ಪ್ರಾಣಿ ತ್ಯಾಜ್ಯಗಳಿಂದ ಗೊಬ್ಬರ ಹಾಗೂ ಅವಿಭಕ್ತ ಕುಟುಂಬದ ಸದಸ್ಯರಿಂದ ಶ್ರಮ ಬರುತ್ತಿತ್ತು. ಸ್ವಾತಂತ್ರ್ಯಾನಂತರ ತೀವ್ರ ಆಹಾರದ ಅಭಾವವನ್ನು ಎದುರಿಸಲು ಭಾರತೀಯ ರೈತ **ಹೆಚ್ಚುವರಿ ಕೃಷಿ**ಯನ್ನು ಅನುಸರಿಸುವುದು ತಾರ್ಕಿಕ ಅವಶ್ಯಕತೆಯಾಗಿತ್ತು. ಕೃಷಿಯ ಸುವರ್ಣಯುಗ ೧೯೬೦ರ ದಶಕದಲ್ಲಿ ಹಸಿರುಕ್ರಾಂತಿಯೊಂದಿಗೆ ಪ್ರಾರಂಭವಾಯಿತೆನ್ನಬಹುದು. ಇದರೊಂದಿಗೆ, ಭಾರತೀಯ ರೈತ ತನ್ನ ಸ್ಥಳೀಯ ಪದ್ಧತಿಯೊಂದಿಗೆ ಆಧುನಿಕ ತಂತ್ರಜ್ಞಾನವನ್ನು ಸೇರಿಸಿ ಬೆಳೆ ಇಳುವರಿಯನ್ನು ದುಪ್ಪಟ್ಟು ಮಾಡಿ ದೇಶವನ್ನು ಆಹಾರ ಸ್ವಾವಲಂಬನೆಯ ಹಂತಕ್ಕೆ ತಂದು ಚರಿತ್ರೆಯನ್ನೇ ನಿರ್ಮಾಣ ಮಾಡಿದ. ಆದರೆ ಈ ಪ್ರಕ್ರಿಯೆಯಲ್ಲಿ, ಆತ ಕೆಲವು ಖರೀದಿಸಿದ ಪರಿಕರಗಳ ಮೇಲೆ ಅವಲಂಬಿತವಾಗಬೇಕಾಯಿತು. ಈ ಹಂತದಲ್ಲಿ ಕೃಷಿ ವ್ಯವಸ್ಥೆ ಕ್ರಮೇಣ ತನ್ನ ಕೆಲವು ಅತ್ಯುತ್ತಮ ಸಾಂಪ್ರದಾಯಿಕ ಪದ್ಧತಿಗಳನ್ನು

ತೊರೆಯಲಾರಂಭಿಸಿತೆಮಂದು ಇಲ್ಲಿ ಗಮನಿಸಬೇಕಾದ ಅಂಶ. ಅಂದಿನಿಂದಲೇ ಅವನ ಜೀವನಾಧಾರದ ಕಸುಬಾಗಿದ್ದ ಕೃಷಿ **ಮಾರುಕಟ್ಟೆ ಕೃಷಿ**ಯಾಯಿತು. ಎಲ್ಲ ರೈತಾಪಿ ಕುಟುಂಬಗಳಿಗೂ, ಇಂದು ಹಣದ ಆದಾಯದ ಅವಶ್ಯಕತೆಯಿದೆ. ಹಾಗಾಗಿ, ಬಹುಪಾಲು ಸಣ್ಣ ರೈತರು ಸ್ಥಳೀಯ ವಾರದ ಸಂತೆಗಳಿಗೆ ಬೆಳೆದರೆ, ಹೈ-ಟೆಕ್ ರೈತರು ರಫ್ತು ಮಾರುಕಟ್ಟೆಗಾಗಿ ಬೆಳೆಯುತ್ತಾರೆಂಬ ಸಾಮಾನ್ಯ ಭಾವನೆಯಿದೆ. ಈಗ ಹಣ ಗ್ರಾಮೀಣ ಬದುಕನ್ನು ಸಂಪೂರ್ಣವಾಗಿ ಆಕ್ರಮಿಸಿದೆ. ಕೆಲದಶಕಗಳ ಹಿಂದೆ ಗ್ರಾಮೀಣ ಬದುಕು ಬಹಳ ಸರಳವಾಗಿತ್ತು ಹಾಗೂ ಕೃಷಿಯ ಮತ್ತು ಕೌಟುಂಬಿಕ ಅವಶ್ಯಕತೆಗಳು ಕೆಲಮೂಲಭೂತ ಅವಶ್ಯಕತೆಗಳನ್ನೊಳಗೊಂಡಂತೆ ತೀರಾ ಸೀಮಿತವಾಗಿದ್ದವು. ಬಹುಪಾಲು ಈ ಅವಶ್ಯಕತೆಗಳನ್ನು ಸ್ಥಳೀಯವಾಗಿಯೇ ನೀಗಿಸಿಕೊಳ್ಳಲಾಗುತ್ತಿತ್ತು. ಸಾಂಪ್ರದಾಯಿಕವಾಗಿ, ಈ ಸೇವೆಗಳಿಗೆ ಸಂದಾಯವನ್ನು ಕೃಷಿ ಉತ್ಪನ್ನಗಳ ರೂಪದಲ್ಲಿಯೇ ಕುಯಿಲಿನ ಸಮಯದಲ್ಲಿ ಪಾವತಿಸಲಾಗುತ್ತಿತ್ತು. ಈಗ ಇದೆಲ್ಲಾ ಬದಲಾಗಿದೆ. ಕೃಷಿ ಕುಟುಂಬಗಳ ಅವಶ್ಯಕತೆಗಳು ಹೆಚ್ಚುತ್ತಿರುವಂತೆ, ನಗರ ಬದುಕಿನ ಶೈಲಿಯನ್ನು ಅನುಕರಿಸುವುದರಿಂದಾಗಿ ಕೃಷಿ ಅವರ್ಶಯಕತೆಗಳನ್ನೂ ಸಹ ಖರೀದಿಸಿದ ಪರಿಕರಗಳಿಂದಾಗಿ ಪೂರೈಸಿಕೊಳ್ಳಬೇಕಾದ ಸ್ಥಿತಿ ಬಂದಿದೆ. ಅದರ ಜೊತೆಗೆ ಗ್ರಾಮೀಣ ಬದುಕಿನಲ್ಲಿದ್ದ 'ವಸ್ತುವಿನಿಮಯ' ರೂಪದ ಸಂದಾಯ ಪದ್ಧತಿ ಸಂಪೂರ್ಣ ಕಣ್ಮರೆಯಾಗಿ ಅದರ ಸ್ಥಾನವನ್ನು ಹಣದ ವ್ಯವಹಾರ ಆಕ್ರಮಿಸಿದೆ. ಹಾಗಾಗಿ, ಇಂದು ಯಾವುದೇ ರೈತ ಸಾಕಷ್ಟು ಹಣದ ಆದಾಯವಿಲ್ಲದೆ ಬದುಕಲಾರ. ಅದಕ್ಕಾಗಿ ಮಾರುಕಟ್ಟೆಗಾಗಿ ಏನನ್ನಾದರೂ ಬೆಳೆಯಲೇಬೇಕಾಗಿರುವುದು ಇಂದು ಎಲ್ಲ ರೈತರಿಗೆ ಅನಿವಾರ್ಯವಾಗಿದೆ. ಜಾಗತೀಕರಣವು ಇಂದು ರೈತರನ್ನು ರೈತೋದ್ಯಮಿಗಳನ್ನಾಗಿ ಮಾಡುತ್ತಿದೆ ಹಾಗೂ ಅವರಲ್ಲಿ ವಿಪುಲವಾಗಿದ್ದ ಕೃಷಿಕ ಬದುಕಿನ ಸಾಂಸ್ಕೃತಿಕ ಬಂಡವಾಳವನ್ನು ಕಣ್ಮರೆಯಾಗಿಸುತ್ತಿದೆ.

ಕನ್ನಡ ಪುಸ್ತಕ ಪ್ರಾಧಿಕಾರದಂತಹ ಸರ್ಕಾರಿ ಮತ್ತು ಅರೆಸರ್ಕಾರಿ ಹಾಗೂ ಸರ್ಕಾರೇತರ ಸಂಸ್ಥೆಗಳೂ ಕೃಷಿಸಾಹಿತ್ಯ ಪ್ರಕಟಣೆಗೆ ಮುಂದಾಗುತ್ತಿವೆ. ಆಧುನಿಕ ಬೇಸಾಯದ ಹೊಡೆತಕ್ಕೆ ಸಿಲುಕಿ ಗ್ರಾಮಗಳಲ್ಲಿ ಕೃಷಿ ಸಂಸ್ಕೃತಿ ನಾಶವಾಗುತ್ತಿರುವ ಸಂದರ್ಭದಲ್ಲಿ, ನೆಲಮೂಲ ಜ್ಞಾನದಿಂದ ಜಾಗತೀಕರಣದ ಅಪಾಯವನ್ನು ಎದುರಿಸಲು ಸಾಧ್ಯ ಎಂಬುದು ಈ ಕೆಲವು ಸಂಸ್ಥೆಗಳ ನಂಬಿಕೆ.

ಹಸಿರು ಕ್ರಾಂತಿಗೆ ಹಾದಿ ಮಾಡಿಕೊಟ್ಟ ಆಧುನಿಕ ಕೃಷಿ ಹಲವಾರು ಸಾಮಾಜಿಕ, ಆರ್ಥಿಕ ಹಾಗೂ ಪರಿಸರ ಸಮಸ್ಯೆಗಳನ್ನು ಹುಟ್ಟುಹಾಕಿತು. ಇರುವ ಜಾಗದಲ್ಲಿ ಹೆಚ್ಚು ಹೆಚ್ಚು ಬೆಳೆಯಬೇಕಾಯಿತು. ಭೂಮಿ ತನ್ನ ಸ್ವಾಭಾವಿಕ ಫಲವತ್ತತೆ ಕಳೆದುಕೊಳ್ಳತೊಡಗಿತು. ಫಲವತ್ತತೆ ಹೆಚ್ಚಿಸಲು ರಾಸಾಯನ ಗೊಬ್ಬರಗಳನ್ನು ಬಳಸಬೇಕಾಯಿತು. ಹೊಸ ಹೊಸ

ಅಧಿಕ ಇಳುವರಿ ತಳಿಗಳ ಅವಿಷ್ಕಾರ ಮಾಡಬೇಕಾಯಿತು. ಹಾಗೇ ಬೆಳೆಗಳನ್ನು ಕಾಡುವ ರೋಗಗಳು, ಕೀಟಗಳೂ ಸಹ ಹೆಚ್ಚಾಗತೊಡಗಿದವು. ಅವುಗಳನ್ನು ನಿಯಂತ್ರಿಸಲು ಕೀಟನಾಶಕ, ರೋಗನಾಶಕಗಳನ್ನು ಕಂಡುಹಿಡಿಯಲಾಯಿತು. ಅವುಗಳನ್ನು ಸತತವಾಗಿ ಉಪಯೋಗಿಸಿದಂತೆ ಅವುಗಳನ್ನೂ ಸಹಿಸಿಕೊಳ್ಳುವಂತಹ ಹೊಸ ಹೊಸ ಕೀಟಗಳು, ರೋಗಗಳು ಹುಟ್ಟಿಕೊಳ್ಳತೊಡಗಿದವು. ಹಾಗೇ ಇನ್ನೂ ಹೆಚ್ಚು ಹೆಚ್ಚು ಶಕ್ತಿಯುತ ರಾಸಾಯನಿಕಗಳನ್ನು ಬಳಸಬೇಕಾಗಿ ಬಂತು. ಇದರಿಂದಾಗಿ ಪರಿಸರದ ಜೀವರಾಶಿಗಳ ಸಮತೋಲನವೇ ಹಾಳಾಗುತ್ತಿದೆ. ರಾಸಾಯನಗಳನ್ನು ಉಪಯೋಗಿಸಿ ಬೆಳೆಸಿದ ಆಹಾರಗಳು ಮನುಷ್ಯನಲ್ಲಿ ಹಲವಾರು ರೋಗಗಳನ್ನುಂಟು ಮಾಡುತ್ತವೆ. ಪರಿಸರವೇ ವಿಷಪೂರಿತವಾಗುತ್ತಿದೆ. ಹೊಸ ತಳಿಗಳನ್ನು ಉಪಯೋಗಿಸಿ ಬೇಸಾಯ ಮಾಡಬೇಕಾದಲ್ಲಿ ರಸಗೊಬ್ಬರ, ರಾಸಾಯನಗಳನ್ನು ಉಪಯೋಗಿಸಲೇಬೇಕಾದ ಅನಿವಾರ್ಯ ಪರಿಸ್ಥಿತಿ ಬಂದೊದಗಿದೆ.

ಕೃಷಿ ಕ್ಷೇತ್ರದ ಈ ಬದಲಾವಣೆಗಳಿಂದ ಹೊಸ ವಿಚಾರ, ಚಿಂತನೆಗಳು ಕೃಷಿ ಸಾಹಿತ್ಯ ಕ್ಷೇತ್ರದಲ್ಲಿ ಮೂಡಿಬರತೊಡಗಿದವು.

ಕೃಷಿಯಲ್ಲಿ ಮನುಷ್ಯ ಪ್ರಕೃತಿಯೊಂದಿಗೆ ಸಹಕರಿಸಬೇಕೇ ಹೊರತು ಅದನ್ನು 'ಜಯಿಸಿ' ಇನ್ನೂ 'ಅಭಿವೃದ್ಧಿ'ಪಡಿಸುವುದರ ಮೂಲಕವಲ್ಲ ಎನ್ನುವ ಜಪಾನಿನ ವಿಜ್ಞಾನಿಯಾದ ಮಸಾನೊಬು ಫುಕುವೊಕರ ಸಹಜ ಕೃಷಿಯ ಬಗೆಗೆ ಕನ್ನಡದಲ್ಲಿ 1988ರಲ್ಲಿ ಪ್ರಕಟವಾಯಿತು. ಫುಕುವೊಕಾರ **'ದ ಒನ್ ಸ್ಟ್ರಾ ರೆವೊಲ್ಯೂಶನ್'** ಕೃತಿಯನ್ನು ಸಂತೋಷ್ ಕೌಲಗಿ ಕನ್ನಡಕ್ಕೆ ಅನುವಾದಿಸಿ **'ಒಂದು ಹುಲ್ಲಿನ ಕ್ರಾಂತಿ'**ಯ ಹೆಸರಿನಲ್ಲಿ ಪ್ರಕಟಿಸಿದರು. ಪೂರ್ಣ ಚಂದ್ರ ತೇಜಸ್ವಿಯವರು **'ಸಹಜ ಕೃಷಿ ಪರಿಚಯ'**ದಲ್ಲಿ ಫುಕುವೊಕಾರ ತತ್ವಗಳನ್ನು ಕನ್ನಡಕ್ಕೆ ತಂದರು.

ಇಂದು ಕರ್ನಾಟಕದ ಬಹುಪಾಲು ಎಲ್ಲ ರೈತರಿಗೂ ಸಾವಯವ ಕೃಷಿಯ ಬಗ್ಗೆ ಹೆಚ್ಚೆಚ್ಚು ಅರಿವು ಮೂಡುತ್ತಿದೆ. ಇಂದು ವಿಶ್ವವಿದ್ಯಾನಿಲಯಗಳು, ಸರ್ಕಾರದ ಇಲಾಖೆಗಳು, ಹಲವಾರು ಸ್ವಯಂ ಸೇವಾ ಸಂಸ್ಥೆಗಳು ಸಾವಯವ ಕೃಷಿಯನ್ನು ಅನುಸರಿಸುವಂತೆ ಹೇಳುತ್ತಿವೆ. ಈ ರೀತಿಯ 'ಬದಲಿ' ಕೃಷಿ ಪದ್ಧತಿಗಳು ಮತ್ತು ವಿಧಾನಗಳ ಬಗೆಗೆ ಪ್ರಕಟವಾಗುತ್ತಿರುವ ಕೃಷಿ ಸಾಹಿತ್ಯ ಪರಿಸರ ಸ್ನೇಹಿ ಮತ್ತು ಸುಸ್ಥಿರ ವಿಧಾನಗಳನ್ನು ಅನುಸರಿಸಲು ಉತ್ತೇಜಿಸುತ್ತವೆ; ರೈತರ ಅನಿಸಿಕೆ ಮತ್ತು ಅನುಭವಗಳನ್ನು ಪ್ರಕಟಿಸುತ್ತವೆ ಮತ್ತು ಕೃಷಿಯ ಬಗೆಗೆ 'ಹೋಲಿಸ್ಟಿಕ್ ಅಪ್ರೋಚ್' ಹೊಂದಿರುತ್ತವೆ. ಶಿವನಂಜಯ್ಯ ಬಾಳೆಕಾಯಿ, ನಾರಾಯಣ ರೆಡ್ಡಿ ಮತ್ತು ಭರಮಪ್ಪ ಗೌಡರಂತಹ ರೈತರು ಸಹ ಕೃಷಿಯಲ್ಲಿ ತಾವು ಅನುಸರಿಸುತ್ತಿರುವ ಸುಸ್ಥಿರ ವಿಧಾನಗಳನ್ನು ತಮ್ಮ ಬರವಣಿಗೆಯ ಮೂಲಕ ಹರಡುವಲ್ಲಿ ಹೆಚ್ಚು ಸಕ್ರಿಯರಾಗಿದ್ದಾರೆ.

ಜೀವತಂತ್ರಜ್ಞಾನ ಇಂದು ಬದುಕಿನ ಪ್ರತಿ ರಂಗದಲ್ಲೂ ಹಾಸುಹೊಕ್ಕಾಗುತ್ತಿದೆ. ಕೃಷಿ, ಪಶುವೈದ್ಯಕೀಯ ಮತ್ತು ವೈದ್ಯಕೀಯ ಕ್ಷೇತ್ರಗಳಲ್ಲಿ ಇದರ ಪಾತ್ರ ಮಹತ್ತರವಾದುದು. ಹಸಿರುಕ್ರಾಂತಿಯಿಂದಾದ ಇಳುವರಿಯ ಲಾಭಗಳು ಕ್ಷಣಿಕವಾಗಿದ್ದು ಅದರಿಂದ ಹಲವಾರು ಪರಿಸರ, ಸಾಂಸ್ಕೃತಿಕ, ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳುಂಟಾದುವು. 1980ರ ದಶಕದಿಂದೀಚೆಗೆ ಜೀವತಂತ್ರಜ್ಞಾನ ಕ್ಷೇತ್ರದಲ್ಲಿ ಉಂಟಾಗಿರುವ ಮಹತ್ತರ ಅಭಿವೃದ್ಧಿಗಳಿಂದಾಗಿ ಇಂದು ಹೆಚ್ಚುತ್ತಿರುವ ಜನಸಂಖ್ಯೆಗೆ ಆಹಾರ ಒದಗಿಸಲು, ಲಭ್ಯವಿರುವ ಸಂಪನ್ಮೂಲಗಳಿಂದಲೇ ಹೆಚ್ಚುಹೆಚ್ಚು ಉತ್ಪಾದಿಸಲು ಜೀವತಂತ್ರಜ್ಞಾನದಿಂದಲೇ ಸಾಧ್ಯ ಎನ್ನುವ ಮಾತೂ ಕೇಳಿಬರುತ್ತಿದೆ. ಕುಲಾಂತರಿ ಸಸ್ಯಗಳನ್ನು ಹಾಗೂ 'ಟರ್ಮಿನೇಟರ್' ತಂತ್ರಜ್ಞಾನವನ್ನು ಪರಿಚಯಿಸುವ ಲೇಖನ 'ಸುಧಾ' ವಾರಪತ್ರಿಕೆಯಲ್ಲಿ ಮೊದಲಿಗೆ ನಾಗೇಶ್ ಹೆಗಡೆ ಬರೆದರು. ಬಿ.ಟಿ. ಹತ್ತಿಯನ್ನು ಪರಿಚಯಿಸಿದ ನಂತರ ಕರ್ನಾಟಕ ರೈತ ಸಂಘ ರೈತರಲ್ಲಿ ಅದರ ಅಪಾಯಗಳ ಬಗೆಗೆ ರೈತರಲ್ಲಿ ಅರಿವು ಮೂಡಿಸಲು ಸಾಕಷ್ಟು ಕರಪತ್ರಗಳನ್ನು ತಂದಿತು. ಅಲ್ಲದೆ ಜೀವತಂತ್ರಜ್ಞಾನ ಕೆಲವೇ ವಿದೇಶೀ ಕಂಪೆನಿಗಳ ನಿಯಂತ್ರಣದಲ್ಲಿದ್ದು ರೈತರು ಪ್ರತಿ ಬೆಳೆಯ ಬಿತ್ತನೆಯನ್ನು ಆ ವಿದೇಶೀ ಕಂಪೆನಿಗಳಿಂದ ಹಾಗೂ ಅವರು ಹೇಳಿದ ಬೆಲೆಯಲ್ಲೇ ಕೊಂಡುತರಬೇಕಾಗುತ್ತದೆಂದು 1990ರಿಂದೀಚೆಗೆ ಕರ್ನಾಟಕ ರಾಜ್ಯ ರೈತ ಸಂಘದ ಪ್ರೊ.ನಂಜುಂಡಸ್ವಾಮಿಯವರು ಹೊಸ ಕೃಷಿ ನೀತಿಯ ಮೇಲೆ ಹಾಗೂ ಕಾರ್ಗಿಲ್ ಮತ್ತು ನಂತರದ ಮಾನ್ಸಾಂಟೋ ಕಂಪೆನಿಗಳ ಮೇಲೆ ದಾಳಿ ನಡೆಸಿದರು, ಹೊಲಗಳಲ್ಲಿ ಬೆಳೆದು ನಿಂತಿದ್ದ ಬಿ.ಟಿ. ಹತ್ತಿಯನ್ನು ಸುಟ್ಟುಹಾಕಿದರು.

ಇಷ್ಟೆಲ್ಲಾ ಆದರೂ ಜೀವತಂತ್ರಜ್ಞಾನವನ್ನು, ಅದರ ತಾಂತ್ರಿಕತೆಯನ್ನು ರೈತರಿಗೆ ಪರಿಚಯಿಸುವ ಅಲ್ಲೊಂದು ಇಲ್ಲೊಂದು ಲೇಖನಗಳು ಪತ್ರಿಕೆಯಲ್ಲಿ ಪ್ರಕಟವಾಗಿವೆಯೇ ಹೊರತು ವಿಜ್ಞಾನ ಸಾಹಿತ್ಯ ಕೃತಿ ಕನ್ನಡದಲ್ಲಿ ಪ್ರಕಟವಾಗಿಲ್ಲ. ಈ ದಿಸೆಯಲ್ಲಿ ಕೃಷಿ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗವು **ಜೀವತಂತ್ರಜ್ಞಾನ ಅರ್ಥವಿವರಣಾ ಕೋಶ (ಇಂಗ್ಲಿಷ್–ಕನ್ನಡ)**ವೊಂದನ್ನು ಪ್ರಕಟಿಸಿದೆ.

ಕೋಲ್ಮನ್‌ರವರು ೧೯೧೮ರಲ್ಲಿ ಪ್ರಾರಂಭಿಸಿ ಮೈಸೂರು ವ್ಯವಸಾಯ ಶೋಧಕ ಸಂಘವು ಹೊರತಂದ **'ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ'** ಕನ್ನಡದ ಮೊಟ್ಟ ಮೊದಲ ಕೃಷಿ ನಿಯತಕಾಲಿಕ. ಮೈಸೂರು ವ್ಯವಸಾಯ ಶೋಧಕ ಸಂಘವು ೧೯೫೪ರಲ್ಲಿ ಕರ್ನಾಟಕ ಪ್ರದೇಶ ಕೃಷಿಕ ಸಮಾಜದೊಂದಿಗೆ ವಿಲೀನವಾಗಿ **ಕರ್ನಾಟಕ ವ್ಯವಸಾಯ ಪತ್ರಿಕೆ**ಯಾಗಿ ನಿರಂತರವಾಗಿ ಪ್ರಕಟವಾಗುತ್ತಿದೆ.

ಇತರ ರಾಷ್ಟ್ರಗಳಿಗೆ ಹೋಲಿಸಿದಲ್ಲಿ ಭಾರತದಲ್ಲಿ ಕೃಷಿ ಪತ್ರಿಕೋದ್ಯಮ ಒಂದು ಬೃಹತ್ ಉದ್ಯಮವಾಗಿ ನೆಲೆಯೂರಿದೆ. ಇಂದು ಕನ್ನಡದಲ್ಲಿ ೧೭ರಿಂದ ೨೫ ಕೃಷಿ

ಪತ್ರಿಕೆಗಳಿವೆ. ನಾಯಿಕೊಡೆಗಳಂತೆ ಕೃಷಿ ಪತ್ರಿಕೆಗಳು ಹುಟ್ಟಿಕೊಳ್ಳುತ್ತವೆ ಹಾಗೂ ಕೆಲಸಮಯದ ನಂತರ ಹಾಗೆಯೇ ಕಣ್ಮರೆಯಾಗುತ್ತವೆ. ಪ್ರಕಟವಾಗುತ್ತಿರುವ ಕೃಷಿ ಪತ್ರಿಕೆಗಳಲ್ಲಿ ೬ ಮಾತ್ರ ೫೦೦೦ಕ್ಕಿಂತ ಹೆಚ್ಚಿನ ಪ್ರತಿಗಳನ್ನು, ೬ ಪತ್ರಿಕೆಗಳು ೨೦೦೦-೫೦೦೦ ಪ್ರತಿಗಳನ್ನು ಹಾಗೂ ಇನ್ನುಳಿದವು ೨೦೦೦ಕ್ಕಿಂತ ಕಡಿಮೆ ಪ್ರತಿಗಳನ್ನು ಮುದ್ರಿಸುತ್ತವೆ. ಕೃಷಿ ವಿಶ್ವವಿದ್ಯಾನಿಲಯಗಳು, ಸರ್ಕಾರಿ ಮತ್ತು ಅರೆ ಸರ್ಕಾರಿ ಸಂಸ್ಥೆಗಳು, ಹಲವಾರು ಖಾಸಗಿ ಸಂಸ್ಥೆಗಳು, ಸ್ವಯಂಸೇವಾ ಸಂಸ್ಥೆಗಳು ಕೃಷಿ ಪತ್ರಿಕೆಗಳನ್ನು ಪ್ರಕಟಿಸುತ್ತಿವೆ.

ಆಧುನಿಕ ಕೃಷಿಯಲ್ಲಿ ಪೂರಕ ಉದ್ದಿಮೆಗಳು ಬಹಳಷ್ಟು ಅವಶ್ಯಕವಿರುವುದರಿಂದಾಗಿ ಜಾಹೀರಾತಿನಿಂದ ಸಿಗುವ ಆದಾಯವೂ ಸಹ ಗಣನೀಯವಾಗಿರುವುದರಿಂದ 'ವ್ಯಾಪಾರೀ' ಕೃಷಿ ಪತ್ರಿಕೆಗಳು ಪ್ರಕಟವಾಗುತ್ತಿವೆ. ಅವುಗಳ ಉದ್ದೇಶ ರೈತರಿಗೆ ಯಾವುದೇ ಮಾಹಿತಿ ಅಥವಾ ತಿಳಿವಳಿಕೆ ನೀಡುವುದಲ್ಲ, ಬದಲಿಗೆ ಜಾಹೀರಾತುಗಳನ್ನು ಪ್ರಕಟಿಸಿ ಹಣ ಸಂಪಾದಿಸಿಕೊಳ್ಳುವುದೇ ಆಗಿದೆ. ಕನ್ನಡ ಬಾರದವರೂ ಸಹ ಕನ್ನಡ ಕೃಷಿ ಪತ್ರಿಕೆಗಳ ಸಂಪಾದಕರಾಗಿದ್ದಾರೆ ಹಾಗೂ ನೆರೆಹೊರೆಯ ರಾಜ್ಯಗಳಿಂದಲೂ ಸಹ ಕನ್ನಡ ಕೃಷಿ ಪತ್ರಿಕೆಗಳು ಪ್ರಕಟವಾಗುತ್ತಿವೆ.

ಕನ್ನಡ ಕೃಷಿ ಪತ್ರಿಕೆಗಳನ್ನು ಅವಲೋಕಿಸಿದಲ್ಲಿ, ಬಹುಪಾಲು ಕೃಷಿ ಪತ್ರಿಕೆಗಳು ರೈತರಿಗೆ ಅವಶ್ಯಕವಿರುವ ಮಾಹಿತಿಯನ್ನು ಒದಗಿಸದಿರುವುದು, ಹೊಲಗದ್ದೆಗಳಲ್ಲಿ ಪರೀಕ್ಷಿಸದ ವಿಧಾನಗಳನ್ನು ಪ್ರಚುರಪಡಿಸುವುದು, ಬಹುಪಾಲು ಲೇಖನಗಳು ಯಾವುದೋ ಇಂಗ್ಲಿಶ್ ಲೇಖನದ ಅನುವಾದಗಳಾಗಿರುವುದು ಹಾಗೂ ವಿಶ್ವವಿದ್ಯಾನಿಲಯದ ಅಧ್ಯಾಪಕರು ಮತ್ತು ವಿಜ್ಞಾನಿಗಳು ಒಂದೆರಡು ಲೇಖನಗಳು ಪ್ರಕಟವಾದಲ್ಲಿ ತಮ್ಮ ಪದೋನ್ನತಿಯಲ್ಲಿ ಅಂಕಗಳು ಸಿಗುತ್ತವೆನ್ನುವ ಕಾರಣಕ್ಕೆ ಹಳೆಯ ಸರಕನ್ನೇ ರೂಪ ಬದಲಿಸಿ ಒಂದೇ ಲೇಖನಕ್ಕೆ ನಾಲ್ಕೈದು ಜನರ ಹೆಸರನ್ನು ಸೇರಿಸಿ ಪ್ರಕಟಿಸಿರುವುದು ಕಂಡುಬರುತ್ತದೆ. ಅವುಗಳಲ್ಲಿ ರೈತರ ಅನುಭವ ಕಥನಗಳಿಗೆ ಅವುಗಳಲ್ಲಿ ಸ್ಥಾನವೇ ಇರುವುದಿಲ್ಲ ಹಾಗೂ ಬಹುಪಾಲು ಲೇಖಕರಿಗೆ ರೈತರ ಅಥವಾ ಗ್ರಾಮೀಣ ಬದುಕಿನ ಅನುಭವವೇ ಇರುವುದಿಲ್ಲ. ತಾವು ತಿಳಿದಿರುವುದು ಹಾಗೂ ಬರೆದಿರುವುದೇ ಅಂತಿಮ ಸತ್ಯವೆಂಬ ಮನೋಭಾವ ಆ ಲೇಖನಗಳಲ್ಲಿ ವ್ಯಕ್ತವಾಗುತ್ತದೆ. ಕೃಷಿ ವಿಶ್ವವಿದ್ಯಾನಿಲಯಗಳು ಪ್ರಕಟಿಸುವ ಕೃಷಿ ಪತ್ರಿಕೆಗಳು ನಿಯತಕಾಲಿಕೆಗಳಾದರೂ ನಿಯತವಾಗಿ ಪ್ರಕಟವಾಗುವುದಿಲ್ಲ ಹಾಗೂ ಬಹುಪಾಲು ರೈತರಿಗೆ ಅವು ಪ್ರಕಟವಾಗುವ ವಿಷಯವೇ ತಿಳಿದಿರುವುದಿಲ್ಲ ಮತ್ತು ಅವು ತೀರಾ ಕಡಿಮೆ ಸಂಖ್ಯೆಯಲ್ಲಿ ಪ್ರಕಟವಾಗುವುದರಿಂದ ಉದ್ದೇಶಿಸಿದವರನ್ನೆಂದೂ ಅವು ತಲುಪುವುದಿಲ್ಲ.

**ಅಡಿಕೆ ಪತ್ರಿಕೆ**ಯಂತಹ ಕೆಲ ಪತ್ರಿಕೆಗಳು ಈ ರೀತಿಯ ಸಮಸ್ಯೆಗಳ ಪರಿಹಾರಕ್ಕೆ ಪ್ರಯತ್ನಿಸಿವೆ. ಕೃಷಿಕರೇ ಲೇಖಕರಾದಲ್ಲಿ ತಮಗೆ ತಿಳಿದಿರುವುದನ್ನು ಅತ್ಯಂತ ಸಮರ್ಪಕವಾಗಿ

ಸಂವಹಿಸಬಹುದೆಂಬ ಉದ್ದೇಶದಿಂದ ಪುತ್ತೂರಿನ 'ಫಾರ್ಮರ್ಸ್ ಫಸ್ಟ್' ಎಂಬ ಟ್ರಸ್ಟ್ 'ಕೃಷಿಕರ ಕೈಗೆ ಲೇಖನಿ' ಎಂಬ ಕೃಷಿ ಮತ್ತು ಗ್ರಾಮೀಣ ಪತ್ರಿಕೋದ್ಯಮ ಶಿಬಿರಗಳನ್ನು ನಡೆಸಿದೆ. ಈಗ ಕೃಷಿ ಪತ್ರಿಕೋದ್ಯಮ ತರಬೇತಿ ನೀಡುವ ಸಂಸ್ಥೆಗಳೂ ಹುಟ್ಟಿಕೊಂಡಿವೆ.

೧೯೪೦ರಿಂದಲೇ ಕನ್ನಡದ ದಿನಪತ್ರಿಕೆಗಳು ರೈತರಿಗಾಗಿ ಲೇಖನಗಳನ್ನು ಪ್ರಕಟಿಸಲು ಪ್ರಾರಂಭಿಸಿದವು. 'ತಾಯಿನಾಡು' ದಿನಪತ್ರಿಕೆ ೧೯೫೪ರಿಂದ ವಾರಕ್ಕೆ ಎರಡು ಸಾರಿ 'ರೈತರ ವೃತ್ತಾಂತಗಳ' ಬಗ್ಗೆ ಪ್ರಕಟಿಸಲು ಪ್ರಾರಂಭಿಸಿತು. ಜನವರಿ ೧೯೫೫, ಸಂಚಿಕೆ ೧, ಸಂಪುಟ ೩೧ರ ವ್ಯವಸಾಯ ಶೋಧಕರ ಸಂಘದ ಪತ್ರಿಕೆಯಲ್ಲಿ 'ತಾಯಿನಾಡು' ಪತ್ರಿಕೆಯ ವ್ಯವಸ್ಥಾಪಕರು ಜಾಹಿರಾತೊಂದನ್ನು ನೀಡಿ, 'ಕಳೆದ ಒಂದೆರಡು ತಿಂಗಳಿಂದ ಈ ರೈತರ ವಿಭಾಗವನ್ನು ತೆರೆದಿದ್ದೇವೆ. ಸಂಸ್ಥಾನದ ನಾನಾಕಡೆಗಳಿಂದ ನಮಗೆ ಪ್ರಶಂಸೆಯ ಪತ್ರಗಳು ಬರುತ್ತಿವೆ. ಅದರಿಂದ ರೈತರಲ್ಲಿ ಹೊಸ ಉತ್ಸಾಹವೂ, ಹುರುಪೂ ಮೂಡಿದೆ. ನಮ್ಮ ಮೈಸೂರು ರೈತರು ಹೆಚ್ಚಿನ ಪ್ರೋತ್ಸಾಹ ನೀಡುವುದಾದರೆ, ಆ ವಿಭಾಗವನ್ನು ವಿಸ್ತರಿಸಿ ಇನ್ನೂ ಹೊಸ ವಿಷಯಗಳನ್ನು ಬರೆದು ರೈತರ ಮುಂದಿಡುತ್ತೇವೆ' ಎಂದಿದ್ದರು.

ಕನ್ನಡ ವೃತ್ತ ಪತ್ರಿಕೆಗಳಲ್ಲಿ ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯವು ಒದಗಿಸುವ ಮಾಹಿತಿಯನ್ನು ಪ್ರಕಟಿಸುವ ಕಾರ್ಯವು ೧೯೭೦ರಿಂದ ನಡೆಸಲಾಗುತ್ತಿದೆ. ಪತ್ರಿಕೆಗಳಲ್ಲಿ ಕೃಷಿ ವಿಶ್ವವಿದ್ಯಾನಿಲಯಗಳು ಪ್ರಕಟಿಸುವ ಪ್ರಶ್ನೋತ್ತರ ಅಂಕಣಗಳು (ಉದಾ: 'ಪ್ರಜಾವಾಣಿ'– ಬೇಸಾಯ ಬೆನ್ನೆಲುಬು) ಪ್ರಕಟವಾಗುತ್ತಿವೆ.

ಕನ್ನಡದ ಬಹುಪಾಲು ಎಲ್ಲ ದಿನಪತ್ರಿಕೆಗಳು ಕೃಷಿ ವಿಷಯಗಳ ಅಂಕಣಗಳನ್ನು ಪ್ರಕಟಿಸಲು ಪ್ರಾರಂಭಿಸಿ ಕ್ರಮೇಣ ವಾರದ ಒಂದು ನಿರ್ದಿಷ್ಟ ದಿನ ಪ್ರತ್ಯೇಕ ಪುರವಣಿಯನ್ನೇ ತರಲು ಪ್ರಾರಂಭಿಸಿವೆ. ಕೃಷಿವಿಜ್ಞಾನ ಪುಸ್ತಕಗಳಾದರೆ ಸೀಮಿತ ಜನರನ್ನು ಮಾತ್ರ ತಲುಪುತ್ತವೆ. ಆದರೆ ದಿನಪತ್ರಿಕೆಗಳು ಇಂದು ಹಳ್ಳಿಹಳ್ಳಿಗೂ ತಲುಪುತ್ತವೆ.

ದಿನ ಪತ್ರಿಕೆಗಳ ಈ ಕೃಷಿ ಅಂಕಣ/ಪುರವಣಿಗಳಲ್ಲಿ ಆಧುನಿಕ ಮತ್ತು ಸುಧಾರಿತ ಕೃಷಿ ವಿಧಾನಗಳನ್ನು ಪರಿಚಯಿಸುವುದರ ಜೊತೆಗೆ ರೈತರ ಅನುಭವಗಳ ಮಂಡನೆಗೆ, ಸಾಂಪ್ರದಾಯಿಕ ಕೃಷಿ ಜ್ಞಾನದ ಪುನರುಜ್ಜೀವನದ ಬಗೆಗೆ ಹಾಗೂ ರೈತರೇ ತಮ್ಮ ಹೊಲಗದ್ದೆಗಳಲ್ಲಿ ನಡೆಸುವ ಅನ್ವೇಷಣೆಗಳ ಬಗೆಗೆ ಹೆಚ್ಚು ಒತ್ತು ಕೊಡಲಾಗುತ್ತಿದೆ. ಇದೆಲ್ಲದರ ಜೊತೆಗೆ ರೈತರಿಗೆ ಹೆಚ್ಚು ಅವಶ್ಯಕವಿರುವ ಮಾರುಕಟ್ಟೆಯ ಬಗೆಗೂ ತಿಳಿವಳಿಕೆಯನ್ನು ಈ ಪುರವಣಿಗಳು ನೀಡುತ್ತಿವೆ.

ಕನ್ನಡದ ಎಲ್ಲ ದಿನಪತ್ರಿಕೆಗಳು ವಾರಕ್ಕೊಮ್ಮೆ ಪ್ರತ್ಯೇಕ ಕೃಷಿ ಪುರವಣಿ/ಅಂಕಣಗಳನ್ನೇ ಪ್ರಕಟಿಸುತ್ತಿವೆ. ಕೃಷಿ ವಿಜ್ಞಾನ ಪುಸ್ತಕಗಳು ಸೀಮಿತ ಜನರನ್ನು ಮಾತ್ರ ತಲುಪುತ್ತವೆ.

ಆದರೆ ದಿನಪತ್ರಿಕೆಗಳು ಇಂದು ಹಳ್ಳಿಹಳ್ಳಿಗೂ ತಲುಪುತ್ತದೆ. ಕೃಷಿವಿಜ್ಞಾನದ ಕನ್ನಡ ಪತ್ರಿಕೆ/ಪುರವಣಿ/ಅಂಕಣಗಳಲ್ಲಿ ಪ್ರಕಟವಾಗುವ ಕೃಷಿವಿಜ್ಞಾನ ಲೇಖನ, ಮಾಹಿತಿಗಳ ಬಗೆಗೆ ರೈತರಿಗೆ ಅರಿವಿದೆಯೆ? ಪತ್ರಿಕೆಗಳಲ್ಲಿ ಪ್ರಕಟವಾಗುವ ಕೃಷಿ ಲೇಖನ, ಮಾಹಿತಿಗಳು ರೈತರ ಮೇಲೆ ಎಷ್ಟು ಪ್ರಭಾವ ಬೀರುತ್ತವೆ, ಅವುಗಳಿಂದ ರೈತರ ಬೇಸಾಯದ ಬದುಕಿಗೆ ಏನಾದರೂ ಲಾಭವುಂಟಾಗಿದೆಯೇ, ಆ ಪತ್ರಿಕೆ, ಪುರವಣಿಗಳಿಂದ ರೈತರು ಬಯಸುವುದಾದರೂ ಏನೆಂಬುದರ ಬಗೆಗೆ ಅಧ್ಯಯನ ನಡೆಸಲಾಯಿತು. ಅದಕ್ಕಾಗಿ ಪ್ರತ್ಯೇಕ ಪ್ರಶ್ನಾವಳಿಯೊಂದನ್ನು ಸಿದ್ಧಪಡಿಸಿಕೊಂಡು ಅದನ್ನು ಪೂರ್ವಪರೀಕ್ಷೆ-ಗೊಳಪಡಿಸಲಾಯಿತು. ಪೂರ್ವಪರೀಕ್ಷೆಯ ನಂತರ ಕೆಲವೊಂದು ದೋಷಗಳನ್ನು ಸರಿಪಡಿಸಿ ಅಂತಿಯ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಮಾಹಿತಿಯನ್ನು ಸಂಗ್ರಹಿಸಲಾಯಿತು. ಖುದ್ದಾಗಿ ಭೇಟಿಮಾಡಿ ಅವರಿಂದ ಮಾಹಿತಿ ಸಂಗ್ರಹಿಸಲು ಭೌಗೋಳಿಕ, ಸಾಂಸ್ಕೃತಿಕ, ಸಾಕ್ಷರತೆಯ ಹಾಗೂ ಕೃಷಿ ಪರಿಸರದ ದೃಷ್ಟಿಯಿಂದ ಬಹುಪಾಲು ಮಳೆಯಾಶ್ರಿತ ಬೇಸಾಯದ, ಸಾಕ್ಷರತೆ ಕಡಿಮೆ ಇರುವಕೋಲಾರ ಜಿಲ್ಲೆಯ ಕೋಲಾರ ತಾಲ್ಲೂಕಿನ ಕೊಂಡರಾಜನಹಳ್ಳಿ, ಮದ್ದೇರಿ, ಕೋಡಿಹಳ್ಳಿ ಹಾಗೂ ಅಣ್ಣೇರಿ ಗ್ರಾಮಗಳ ಪ್ರದೇಶ ಹಾಗೂ ಶಿವಮೊಗ್ಗ ಜಿಲ್ಲೆಯ, ಸಾಕ್ಷರತೆ ಹೆಚ್ಚಿರುವ ಹಾಗೂ ಕೋಲಾರದಿಂದ ಸಾಂಸ್ಕೃತಿಕವಾಗಿ ವಿಭಿನ್ನವಾಗಿರುವ ಮಲೆನಾಡಿನ ತೀರ್ಥಹಳ್ಳಿ ತಾಲ್ಲೂಕಿನ ವಾಟಗಾರು, ತನಿಕಲ್, ಗುಬ್ಬಿಗ ಕಡೇಗದ್ದೆ, ಬೇಳೂರು ಮತ್ತು ಆರಗ ಗ್ರಾಮಗಳ ಎರಡು ಪ್ರತ್ಯೇಕ ಪ್ರದೇಶಗಳನ್ನು ಆರಿಸಿಕೊಳ್ಳಲಾಯಿತು.

ಈ ಸಮೀಕ್ಷೆಯ ಒಟ್ಟಾರೆ ಸಾರಾಂಶ ಈ ಮುಂದಿನಂತಿದೆ:

೧. ಹೆಚ್ಚಿಗೆ ಅನಕ್ಷರಸ್ಥರಿರುವ ಕೋಲಾರ ಜಿಲ್ಲೆಯ ಗ್ರಾಮಗಳಲ್ಲಿ ಕೆಲ ರೈತರಿಗೆ ಆ ರೀತಿಯ ಕೃಷಿ ಪುರವಣಿ/ಅಂಕಣಗಳಿರುವುದು ತಿಳಿದಿರಲಿಲ್ಲ.

೨. ದಿನ ಪತ್ರಿಕೆ ಓದುವ ಹಲವಾರು ರೈತರು ಕೃಷಿ ಪುರವಣಿ/ಅಂಕಣಗಳನ್ನು ಗಮನಿಸಿದ್ದರೂ ಅವುಗಳನ್ನು ಓದುತ್ತಿರಲಿಲ್ಲ.

೩. ಕೃಷಿ ಪುರವಣಿ/ಅಂಕಣಗಳನ್ನು ಓದುವ ಕೆಲ ರೈತರು ಅವುಗಳನ್ನು ಅನುಸರಿಸುವುದು ಅಸಾಧ್ಯವೆಂಬ ಭಾವನೆ ಹೊಂದಿದ್ದರು.

೪. ಇನ್ನು ಕೆಲ ರೈತರು ಕೃಷಿ ಪುರವಣಿ/ಅಂಕಣಗಳಲ್ಲಿನ ಮಾಹಿತಿ ತಮ್ಮ ಪ್ರದೇಶಗಳಿಗೆ ಅನ್ವಯಿಸುವುದಿಲ್ಲವೆಂಬ ಭಾವನೆ ಹೊಂದಿದ್ದರು.

೫. ಒಟ್ಟಾರೆಯಾಗಿ ಕೋಲಾರ ಜಿಲ್ಲೆಯ ರೈತರ ಮೇಲೆ ದಿನಪತ್ರಿಕೆಗಳ ಕೃಷಿ ಪುರವಣಿ/ಅಂಕಣಗಳು ಯಾವುದೆ ರೀತಿಯ ಪ್ರಭಾವ ಬೀರಿಲ್ಲ ಹಾಗೂ ಪ್ರಕಟವಾಗುವ ಹಲವಾರು ಮಾಸಿಕ ಹಾಗೂ ಇತರ ಕೃಷಿ ಪತ್ರಿಕೆಗಳ ಮಾಹಿತಿ ಇರಲಿಲ್ಲ.

೬. ತೀರ್ಥಹಳ್ಳಿ ತಾಲ್ಲೂಕಿನ ರೈತರಲ್ಲಿ ಬಹಳಷ್ಟು ಜನ ಕೃಷಿ ಪುರವಣಿ/ಅಂಕಣಗಳನ್ನು ಓದುತ್ತಿದ್ದರು.

೭. ಕೆಲ ರೈತರು ಕೃಷಿ ಪುರವಣಿ/ಅಂಕಣಗಳಲ್ಲಿನ ಮಾಹಿತಿ ತಮ್ಮ ಪ್ರದೇಶಗಳಿಗೆ ಅನ್ವಯಿಸುವುದಿಲ್ಲವೆಂಬ ಭಾವನೆ ಹೊಂದಿದ್ದರು.

೮. ಕೃಷಿ ಪುರವಣಿ/ಅಂಕಣಗಳಲ್ಲಿನ ಮಾಹಿತಿ ಸಾಲದು ಎಂಬ ಅಭಿಪ್ರಾಯ ಹೊಂದಿದ್ದರು.

೯. ಬಹಳಷ್ಟು ಜನ ಓದಿದರೂ ಅವುಗಳಲ್ಲಿನ ಸಲಹೆಗಳನ್ನು ಅನುಸರಿಸುತ್ತಿದ್ದವರು ಕಡಿಮೆ ರೈತರು.

೧೦. ಕೆಲ ರೈತರು ಹಲವಾರು ಕೃಷಿ ಪತ್ರಿಕೆಗಳ ಬಗ್ಗೆ ತಿಳಿದುಕೊಂಡಿದ್ದರು ಹಾಗೂ ಕೆಲವರು ಅವುಗಳಿಗೆ ಚಂದಾದಾರರೂ ಆಗಿದ್ದರು.

೧೧. ಕೆಲವರಿಗೆ ಇಂಟರ್‌ನೆಟ್ ಮೂಲಕ ಕೃಷಿ ಮಾಹಿತಿ ಪಡೆಯಬಹುದೆಂಬುದೂ ತಿಳಿದಿತ್ತು.

೧೨. ಪ್ರಕಟವಾಗುವ ಕೃಷಿ ಅಂಕಣ, ಪುರವಣಿಗಳಲ್ಲಿ ರೈತರ ಅನುಭವದ ಲೇಖನಗಳ ಕೊರತೆ ಕಾಡುತ್ತಿತ್ತು.

೧೩. ಕೃಷಿ ಪತ್ರಿಕೆಗಳಲ್ಲಿ ವಿವಿಧ ಕಂಪೆನಿಗಳ, ಬೇಡದ ಜಾಹೀರಾತುಗಳೇ ಹೆಚ್ಚಾಗಿರುತ್ತವೆ. ಇವು ರೈತರನ್ನು ದಾರಿ ತಪ್ಪಿಸಬಹುದೆಂಬ ಆತಂಕ ಕೆಲವರು ಹೊಂದಿದ್ದರು.

೧೪. ಕೃಷಿ ವಿಶ್ವವಿದ್ಯಾನಿಲಯಗಳು ಪ್ರಕಟಿಸುವ ಪತ್ರಿಕೆಗಳ ಬಗೆಗೆ ಬಹಳಷ್ಟು ರೈತರಿಗೆ ತಿಳಿದೇ ಇರಲಿಲ್ಲ.

೧೫. ಕೆಲವು ರೈತರು ಆಧುನಿಕ ಕೃಷಿ ವಿಚಾರಗಳಾದ ಬಿ.ಟಿ. ತಂತ್ರಜ್ಞಾನ, ಊತಕ ಸಾಕಣೆ (ಟಿಶ್ಯೂ ಕಲ್ಚರ್) ಬಗ್ಗೆ ಮಾಹಿತಿ ಬಯಸುತ್ತಿದ್ದರು.

೧೬. ಅದಕ್ಕೆ ವ್ಯತಿರಿಕ್ತವಾಗಿ ಕೆಲವು ರೈತರು ಸಹಜ ಕೃಷಿ, ಸಾವಯವ ಕೃಷಿಯಂತಹ ಪರಿಸರ ಸ್ನೇಹಿ ಕೃಷಿ ವಿಧಾನಗಳ ಬಗ್ಗೆ ಹೆಚ್ಚು ಮಾಹಿತಿ ಬಯಸುತ್ತಿದ್ದರು.

ಇಂದು ಎಲ್ಲ ಕೃಷಿ ಇಲಾಖೆಗಳು, ವಿಶ್ವವಿದ್ಯಾನಿಲಯಗಳು ಹಾಗೂ ಸಂಬಂಧಿಸಿದ ಇತರ ಇಲಾಖೆಗಳು ಇಂಟರ್‌ನೆಟ್ ವೆಬ್‌ಸೈಟ್‌ಗಳನ್ನು ಹೊಂದಿವೆ. ಅದರ ಮೂಲಕ ರೈತರಿಗೆ ಎಲ್ಲ ಮಾಹಿತಿ ಒದಗಿಸಲು ಪ್ರಯತ್ನಿಸುತ್ತಿವೆ. ಇನ್ನು ಕೆಲವೇ ವರ್ಷಗಳಲ್ಲಿ ಹಳ್ಳಿಹಳ್ಳಿಯಲ್ಲಿಯೂ ಇಂಟರ್‌ನೆಟ್ ಲಭ್ಯವಾಗಬಹುದು. ಆಗ ಪುಸ್ತಕ, ಪತ್ರಿಕೆ

ಮುಂತಾದುವನ್ನು ಯಾರೂ ಓದುವುದಿಲ್ಲವೆಂಬ ಆತಂಕ ಕೆಲವರಲ್ಲಿದೆ. ಇಂಗ್ಲಿಷಿನಲ್ಲಿ ಈಗಾಗಲೇ ಬಹಳಷ್ಟು ಪುಸ್ತಕಗಳು ಇಂಟರ್‌ನೆಟ್‌ನಲ್ಲಿ ಉಚಿತವಾಗಿ ಲಭಿಸುತ್ತವೆ. ಕೃಷಿ ಸಾಹಿತ್ಯವನ್ನೊಳಗೊಂಡಂತೆ ಎಲ್ಲ ಕನ್ನಡ ಸಾಹಿತ್ಯವೂ ಡಿಜಿಟಲ್ ಸಾಹಿತ್ಯವಾಗಿಬಿಡುತ್ತದೆಯೆ?

ಮಾಧ್ಯಮಗಳಲ್ಲಿ ಎರಡು ರೀತಿಯ ತಂತ್ರಜ್ಞಾನವಿದೆ. ಒಂದು 'ತಳ್ಳು', ಮತ್ತೊಂದು 'ಎಳೆ' ತಂತ್ರಜ್ಞಾನ. ಈಗ ಇರುವ ದೂರದರ್ಶನ ತಂತ್ರಜ್ಞಾನ 'ತಳ್ಳು' ಮಾಧ್ಯಮ, ಅಂದರೆ, ಆಯಾ ಚಾನೆಲ್‌ನವರು ಬಿತ್ತರಿಸುವ (ತಳ್ಳುವ) ಕಾರ್ಯಕ್ರಮಗಳನ್ನಷ್ಟೇ ನಾವು ನೋಡಬೇಕು. ಆದರೆ ಇಂಟರ್‌ನೆಟ್ ಒಂದು 'ಎಳೆ'ಯುವ ಮಾಧ್ಯಮ, ಅಂದರೆ, ಬೇಕಾದನ್ನು ನಾವು 'ಎಳೆದು' ಪಡೆದುಕೊಳ್ಳಬಹುದು; ಆಯ್ಕೆ ನಮ್ಮ ಕೈಯಲ್ಲಿರುತ್ತದೆ.

ಪುಸ್ತಕಗಳನ್ನು ಡಿಜಿಟೀಕೃತಗೊಳಿಸಿ. ಅವು ವೆಬ್‌ನಲ್ಲಿ ಸಿಗುವಂತೆ ಮಾಡುವ ಪ್ರಯತ್ನಗಳು ೧೯೭೦ರಿಂದಲೂ ನಡೆಯುತ್ತಿವೆ. ಉತ್ತರ ಅಮೆರಿಕಾದ ಕಾರ್ನೆಲ್ ವಿಶ್ವವಿದ್ಯಾನಿಲಯವು ತನ್ನ ಗ್ರಂಥಾಲಯದ ಆನ್‌ಲೈನ್ ಆವೃತ್ತಿಯನ್ನು ವೆಬ್‌ನಲ್ಲಿ ಹೊಂದಿದ್ದು ಅದರಲ್ಲಿ ಹತ್ತೊಂಭತ್ತನೇ ಶತಮಾನದ ಪ್ರಾರಂಭದಿಂದ ಪ್ರಕಟವಾಗಿರುವ ಎಲ್ಲ ವೈಜ್ಞಾನಿಕ ಇಂಗ್ಲಿಶ್ ಪುಸ್ತಕಗಳನ್ನು ಸಮಗ್ರವಾಗಿ ಮೊದಲನೆಯ ಪುಟದಿಂದ ಕೊನೆಯಪುಟದವರೆಗೂ ಡಿಜಿಟಲ್ ರೂಪದಲ್ಲಿ ಹೊಂದಿದೆ. ಅದರಲ್ಲಿ ಹತ್ತೊಂಭತ್ತನೆಯ ಶತಮಾನದ ಅಂತ್ಯದವರೆಗೂ ಪ್ರಕಟವಾಗಿರುವ ಕೃಷಿಸಾಹಿತ್ಯದ ಕೃತಿಗಳನ್ನು ಪುಕ್ಕಟೆಯಾಗಿ ಡೌನ್‌ಲೋಡ್ ಮಾಡಿ ಓದಬಹುದು.

ಇಂಟರ್‌ನೆಟ್ ಜಗತ್ತಿನ ಸಾಧ್ಯತೆಗಳನ್ನು ನಾವು ಇನ್ನೂ ಏನೇನನ್ನೂ ನೋಡಿಲ್ಲ. ಈ ಕ್ಷೇತ್ರಗಳಲ್ಲಿ ಭವಿಷ್ಯದಲ್ಲಿ ನಾವು ಊಹಿಸಲೂ ಸಾಧ್ಯವಾಗದಷ್ಟು ಮಹತ್ತರ ಬದಲಾವಣೆಗಳಾಗಲಿವೆ. ಇವೆಲ್ಲ ಕೃಷಿ ಸಾಹಿತ್ಯಕ್ಕೂ ಅನ್ವಯಿಸುತ್ತದೆ. ರೈತರಿಗೆ ಬೇಕಾದ ಮಾಹಿತಿ ಸಿಗುತ್ತಿಲ್ಲವೆಂದು ರೈತರು ಕೊರಗುವ ಬದಲು ಅವರೇ ಇಂಟರ್‌ನೆಟ್‌ನಿಂದ ಬೇಕಾದ ಮಾಹಿತಿಯನ್ನು ಬೇಕಾದ ಸಮಯದಲ್ಲಿ ಪಡೆಯಬಹುದು. ಆದರೆ ಭಾರತದಂತಹ ದೇಶದಲ್ಲಿ, ಬಹುಪಾಲು ರೈತರೆಲ್ಲ ಅನಕ್ಷರಸ್ಥರಾಗಿರುವಾಗ ಇಷ್ಟೆಲ್ಲ ಸಾಧ್ಯತೆಗಳು ನೆರವೇರಲು ಇನ್ನೂ ಬಹಳ ಸಮಯ ಬೇಕಾಗಬಹುದು. ಅದೇ ರೀತಿ ತಂತ್ರಜ್ಞಾನವೂ ಸಹ ಸರಳವಾಗುತ್ತಿದೆ. ಇಂದು ಹಳ್ಳಿಹಳ್ಳಿಗೂ ಮೊಬೈಲ್, ಸ್ಯಾಟೆಲೈಟ್ ಡಿಶ್, ಡಿ.ವಿ.ಡಿ. ಪ್ಲೇಯರ್‌ಗಳು, ಇಂಟರ್‌ನೆಟ್ ಕಿಯೋಸ್ಕ್‌ಗಳು ಕಾಲಿಟ್ಟಿವೆ. ಅನಕ್ಷರಸ್ಥರೂ ಬಳಸಬಹುದಾದ, ಧ್ವನಿ ಆಧಾರಿತ, ಸರಳ ಕಂಪ್ಯೂಟರ್‌ಗಳು ಬರಲಿವೆ. ದೂರದರ್ಶನ, ಟೆಲಿಫೋನ್ ಮತ್ತು ಕಂಪ್ಯೂಟರ್‌ಗಳನ್ನು ಸಂಯೋಜಿಸಿ ಒಂದೇ ಸಾಧನವನ್ನಾಗಿಸುವ ಪ್ರಯತ್ನಗಳು ನಡೆಯುತ್ತಿವೆ.

# ೬. ಪರಾಮರ್ಶನ ಗ್ರಂಥಗಳು

ಆನಂದತೀರ್ಥ ಪ್ಯಾಟಿ, ೨೦೦೬, ಜಾಗತೀಕರಣದ ಸವಾಲಿಗೆ 'ದೇಸ' ಜವಾಬು, **ಪ್ರಜಾವಾಣಿ** (೧೭-೫-೨೦೦೬), ಬೆಂಗಳೂರು.

ಇದಿನಬ್ಬ, ಬಿ.ಎಂ. (ಪ್ರ.ಸಂ.), ೨೦೦೪, **ಕೃಷಿ ವಿಜ್ಞಾನ ಪಾರಿಭಾಷಿಕ ಪದಕೋಶ**, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.

ಈಶ್ವರಪ್ಪ, ಎಂ.ಜಿ. (೧೯೯೮), **ಚಿತ್ರದುರ್ಗ ಜಿಲ್ಲೆಯ ಸಸ್ಯ ಜಾನಪದ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕಪನೀಪತಿಭಟ್ಟ, ಎಚ್.ಸಿ., ೧೯೬೪, **ನೀರಾವರಿ**, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಕಟಿಗಿಹಳ್ಳಿಮಠ, ಎಸ್.ಎಸ್., ೧೯೫೬ (ಮೂರನೆಯ ಮುದ್ರಣ ೧೯೭೦), **ಕೀಟಕ ಪಿಡುಗುಗಳ ಸಮೀಕ್ಷಣೆ**, ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಕಟಗಿಹಳ್ಳಿಮಠ, ಎಸ್., ಎಸ್., ೨೦೦೧, **ಅನುಭವಸಿದ್ಧ ಕೃಷಿ ಕೈಪಿಡಿ (ಭಾಗ-೧)-ಕೃಷಿಗೆ ಸಂಬಂಧಿಸಿದ ಮೂಲ ವಿಷಯಗಳು**, ಮೆ.ಫಲದ ಆಗ್ರೋ ರೀಸರ್ಚ್ ಫೌಂಡೇಷನ್ಸ್ ಪ್ರೈ. ಲಿ., ಬೆಂಗಳೂರು.

ಕಲ್ಲಾಪುರ, ಎಸ್.ಕೆ., ೧೯೭೦, **ಕಸದಿಂದ ರಸೋತ್ಪತ್ತಿ**, ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಬಾಲೆಯ ಗಿಡಗಳ ತ್ಯಾಜ್ಯ ವಸ್ತುಗಳಿಂದ ಹಲವಾರು ಉತ್ಪನ್ನಗಳ ತಯಾರಿಕೆಯ ಬಗೆಗೆ.

ಕಲ್ಲಾಪುರ, ಎಸ್.ಕೆ., ೧೯೮೩, **ಬಿದಿರು ಮತ್ತು ಬೆತ್ತ**, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಕಲ್ಯಾಣಿಮಠ, ಎ.ಸಿ., ೧೯೬೮, **ಅಧಿಕ ಉತ್ಪಾದನೆಗಾಗಿ ಮಿಶ್ರತಳಿ ಬೆಳೆಗಳು**, ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಕಿತ್ತೂರ್, ಜಿ.ಡಿ., ೧೯೭೩, **ಸಂಕರಣ ಜೋಳ**, ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ಕುವೆಂಪು (ಪ್ರಧಾನ ಸಂಪಾದಕರು), ೧೯೭೨, **ವ್ಯವಸಾಯ ಕೈಪಿಡಿ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಕೂರಪಾಡು ಗುಂಡಪ್ಪ, ೧೯೫೬, **ವ್ಯವಸಾಯದ ಮಣ್ಣುಗಳು– ಅವುಗಳಿಂದ ಸಂಪೂರ್ಣ ಫಲವನ್ನು ಹೊಂದುವ ಬಗೆ**, ಸೀನಿಯರ್ ಎ.ಡಿ. ಆಫ್ ಅಗ್ರಿಕಲ್ಚರ್, ಕೋಲಾರ., ಸರ್.ಕೆ.ಪಿ.ಪುಟ್ಟಣ್ಣಚೆಟ್ಟರ ಪುದುವಟ್ಟಿನ ಪ್ರಕಟನಮಾಲೆ, ಮೈಸೂರು ವಿಶ್ವವಿದ್ಯಾನಿಲಯ.

ಕೃಷ್ಣಪ್ಪ ಗೌಡ, ೧೯೬೭, **ಕ್ಯಾವೆಂಡಿಶ್ ಬಾಳೆ**, ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ಕೃಷ್ಣಮೂರ್ತಿ, ಕೆ. ಮತ್ತು ಪೂಣಚ್ಚ, ಬಿ.ಎ., ೨೦೦೬, ಕರ್ನಾಟಕದಲ್ಲಿನ ಕೃಷಿ ಅಭಿವೃದ್ಧಿಯ ಇತಿಹಾಸ, **ಕೃಷಿ ಮತ್ತು ತೋಟಗಾರಿಕೆ ಇಲಾಖೆ ಸಚಿವಾಲಯದ ವಾರ್ಷಿಕ ವರದಿ 2005–06**, ಕರ್ನಾಟಕ ಸರ್ಕಾರ, ಬೆಂಗಳೂರು.

ಕೃಷ್ಣಶಾಸ್ತ್ರಿ,ಎಂ., ೧೯೪೪ (ದ್ವಿ.ಮು. ೧೯೫೯), **ಪಶುಪಾಲನೆ**, ಸರ್.ಕೆ.ಪಿ.ಪುಟ್ಟಣ್ಣಚೆಟ್ಟರ ಪುದುವಟ್ಟಿನ ಪ್ರಕಟನಮಾಲೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಕೊಡ್ಲಿ, ಎಂ.ಸಿ., ೧೯೬೮, **ನಮ್ಮ ರೈತರೇಕೆ ಹಿಂದುಳಿದಿದ್ದಾರೆ**, ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಗುರುಮೂರ್ತಿ, ಬಿ.ವೈ., ೧೯೭೨, **ಕಸಿ ಮತ್ತು ಗೂಟಿ**, ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ಗೊದ್ದು ವೀರೇಶ್, ೧೯೭೧, **ಆಧುನಿಕ ವ್ಯವಸಾಯ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಗೋವಿಂದರಾಜನ್, ಎಸ್.ವಿ., ೧೯೪೯–೧೯೫೦, 'ಸಾವಯವ ಗೊಬ್ಬರಗಳು', **ಮೈಸೂರು ವ್ಯವಸಾಯದ ಪಂಚಾಂಗ**, ವಿರೋಧಿ ಸಂವತ್ಸರ, ಬೆಂಗಳೂರು.

ಚನ್ನೇಶ್, ಟಿ.ಎಸ್., ಮತ್ತು ಶರಣಬಸವೇಶ್ವರ ಅಂಗಡಿ, ೧೯೯೯, **ಪೇಟೆಂಟ್ ವರವೋ ಶಾಪವೋ?**, ನವಕರ್ನಾಟಕ ಪ್ರಕಾಶನ ಬೆಂಗಳೂರು.

ಚನ್ನೇಶ್, ಟಿ.ಎಸ್., ೧೯೯೮, ವಿಜ್ಞಾನ ಮತ್ತು ಸಾಹಿತ್ಯ, **ಅನ್ವೇಷಣೆ**, ಸಂ.೧೪, ಬೆಂಗಳೂರು.

ಚನ್ನೇಶ್, ಟಿ.ಎಸ್., ೨೦೦೪, ರೈತ ಮತ್ತು ಪುಸ್ತಕ, **ಪುಸ್ತಕ ಮಾಹಿತಿ**, ಸಂಪುಟ ೧೧, ಸಂಚಿಕೆ ೧೦-೧೧, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಿಕ್ಕಣ್ಣಯ್ಯ, ಪಿ.ಎಸ್. ಮತ್ತು ರಾವ್, ಎಂ.ಎಸ್.ಎಸ್., ೧೯೭೬, **ಆರ್ಥಿಕ ಸಸ್ಯಶಾಸ್ತ್ರ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಚಿದಾನಂದ ಮೂರ್ತಿ,ಎಂ., ೧೯೬೭, **ಸಂಶೋಧನೆ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಚಿನ್ನಸ್ವಾಮಿರೆಡ್ಡಿ, ಎಂ., ೧೯೬೬, **ಉಪಯುಕ್ತ ಸೂಕ್ಷ್ಮಜೀವಿಗಳು**, (ಅಧ್ಯಾಯ: ವ್ಯವಸಾಯ ಮತ್ತು ಸೂಕ್ಷ್ಮಜೀವಿಗಳು), ಪ್ರಚಾರ ಪುಸ್ತಕಮಾಲೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಚಿನ್ನಸ್ವಾಮಿರೆಡ್ಡಿ, ಎಂ., ೧೯೬೭, **ಸಸ್ಯ ಸಂರಕ್ಷಣೆ**, ಪ್ರಚಾರ ಪುಸ್ತಕಮಾಲೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಚೌಧುರಿ, ಎಸ್.ಎನ್., ಅನು: ತಂತ್ರಿ, ಕೆ.ಎನ್. ಮತ್ತು ಲೀಲಾ ಎಸ್. ರಾವ್, ೧೯೬೮, **ರೇಶ್ಮೆ ಹುಳು ಮತ್ತು ಅದರ ಸಾಕಣೆ**, ಗೀತಾ ಬುಕ್ ಹೌಸ್, ಮೈಸೂರು.

ಚೌಧುರಿ, ಬಿ., ಅನು: ಜಿ.ಬಿ.ವಿ. ನಾಯ್ಡು, ೧೯೭೨, **ತರಕಾರಿಗಳು**, ನ್ಯಾಷನಲ್ ಬುಕ್ ಟ್ರಸ್ಟ್, ಹೊಸದೆಹಲಿ.

ಜೋಷಿ, ಎ.ವಿ., ದಿವಾಕರ, ಕಾತರಕಿ, ಬಿ.ಆರ್., ೧೯೮೫, **ಸಾಗುವಳಿ ಉಪಕರಣಗಳು**, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ತಟ್ಟಿ, ಎಸ್.ಎಂ., ೧೯೬೫, **ನಮ್ಮ ಗೃಹ ತೋಟ ಮತ್ತು ಉದ್ಯಾನಗಳು**, (ಪುಷ್ಪ ಪ್ರಬಂಧಗಳು), ಪ್ರ: ಎಸ್. ಎಂ. ತಟ್ಟಿ, ಲಕ್ಷ್ಮೇಶ್ವರ (ಪುಲಿಗೆರೆ), ಧಾರವಾಡ.

ದ್ವಾರಕೀನಾಥ್, ಆರ್., ಅನು: ಜಿ. ಬಾಲಕೃಷ್ಣ 2006, ವಿಶ್ವ ವಾಣಿಜ್ಯ ಸಂಸ್ಥೆ– ಸಂಕಟದ ಸುಳಿಯಲ್ಲಿ ಭಾರತೀಯ ರೈತ, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ದೆಲ್ವಿ, ಎಂ.ಎಚ್., ವಿಷಕಂಠಯ್ಯ, ಎಂ., ಅನು: ಶೇಷಾದ್ರಿ ಅಯ್ಯರ್, ಅ., ೧೯೭೪, **ತರಕಾರಿ ಬೆಳೆಗಳಲ್ಲಿ ಸಸ್ಯ ಸಂರಕ್ಷಣೆ,** ವಿಸ್ತರಣ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ದೇಸಿಗೌಡ, ಎಲ್., ೧೯೪೯ (ದ್ವಿಮು.:೧೯೬೯). **ರೇಷ್ಮೆ ಕೈಗಾರಿಕೆ,** ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು. ನರಸಿಂಹ ಅಯ್ಯಂಗಾರ್, ಮ.ಲ. ಮತ್ತು ಆನಂದರಾಮಯ್ಯ, ಎಂ.ಆರ್., ೧೯೭೬, **ತೋಟಗಾರಿಕೆ** (ಅಲಂಕಾರ ಉದ್ಯಾನ), ಸಂ.೨, ಪ್ರಸಾರಾಂಗ, ಮೈಸೂರು.

ನರಸಿಂಹ ಅಯ್ಯಂಗಾರ್, ಮ.ಲ., ೧೯೬೧, **ಮೈಸೂರಿನ ವ್ಯವಸಾಯ,** ಸರ್.ಕೆ.ಪಿ.ಪುಟ್ಟಣ್ಣಚೆಟ್ಟರ ಪುದುವಟ್ಟಿನ ಪ್ರಕಟನಮಾಲೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ನರಸಿಂಹ ಅಯ್ಯಂಗಾರ್, ಮ.ಲ., ೧೯೬೬, **ವನಮಾಲಿ,** (ಫಾರಂ ರೇಡಿಯೋ ಆಫಿಸರ್, ವಿಸ್ತಾರ ವಿಭಾಗ, ಕೇಂದ್ರ ಆಹಾರ ಮತ್ತು ಕೃಷಿ ಮಂತ್ರಾಲಯ, ನವದೆಹಲಿ), ಪೀಪಲ್ಸ್ ಬುಕ್ ಹೌಸ್, ಮೈಸೂರು.

ನರಸಿಂಹ ಅಯ್ಯಂಗಾರ್, ಮ.ಲ., ಆನಂದರಾಮಯ್ಯ, ಎಂ.ಆರ್., ೧೯೭೩, **ತೋಟಗಾರಿಕೆ** (ಮೂಲ ತತ್ವಗಳು), ಸಂ.೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ನರಸಿಂಹ ಅಯ್ಯಂಗಾರ್, ಮ.ಲ., ೧೯೭೩, **ನಮ್ಮ ಹಣ್ಣುಗಳು** (ಭಾಗ ೧), ಪ್ರಸಾರಾಂಗ, ಮೈಸೂರು.

ನರಸಿಂಹ ಅಯ್ಯಂಗಾರ್, ಮ.ಲ., ೧೯೭೩, **ನಮ್ಮ ದನಗಳು,** ಪ್ರಸಾರಾಂಗ, ಮೈಸೂರು. ಗೃಹಸರಸ್ವತಿ ಗ್ರಂಥಮಾಲೆ.

ನರಸಿಂಹಮೂರ್ತಿ, ಎಲ್., ೧೯೬೨, **ರೇಷ್ಮೆ,** ಸರ್.ಕೆ.ಪಿ.ಪುಟ್ಟಣ್ಣಚೆಟ್ಟರ ಪುದುವಟ್ಟಿನ ಪ್ರಕಟನಮಾಲೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ನರಹರಿರಾವ್, ಬಿ.ಎಸ್. ಮತ್ತು ಸತ್ಯನಾರಾಯಣರಾವ್, ಬಿ.ಎ., ೧೯೭೧, **ಹಣ್ಣು ಮತ್ತು ತರಕಾರಿಗಳ ಸಂರಕ್ಷಣೆ,** ಪ್ರಸಾರಾಂಗ, ಮೈಸೂರು. ಗೃಹಸರಸ್ವತಿ ಗ್ರಂಥಮಾಲೆ.

ನಾಗಣ್ಣ, ಸಿ., ೧೯೭೨, **ಅಂತರ್ಜಲ,** ಪ್ರಚಾರೋಪನ್ಯಾಸ ಮಾಲೆ. ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

ನಾಯಕ, ಹಾ.ಮಾ. (ಪ್ರಧಾನ ಸಂಪಾದಕರು), ೧೯೭೧, **ವಿಜ್ಞಾನ ಸಾಹಿತ್ಯ ನಿರ್ಮಾಣ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ನಾಯಕ, ಹಾ.ಮಾ. (ಸಂಪಾದಕರು), ೧೯೭೪, **ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ,** ಮೊದಲ ಸಂಪುಟ. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ನಾಯಕ, ಹಾ.ಮಾ. (ಸಂಪಾದಕರು), ೧೯೭೫, **ಶಾಸ್ತ್ರಸಾಹಿತ್ಯ ನಿರ್ಮಾಣ**–ವಿಜ್ಞಾನ–ಮಾನವಿಕ ಬರೆಹಗಾರರ ಶಿಬಿರಗಳ ಕಾರ್ಯಕಲಾಪಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಪದ್ಮಾವತಿ, ಪಿ.ಎಲ್. ಮತ್ತು ರೇವಣಸಿದ್ದಪ್ಪ, ಜಿ., ೧೯೭೬, **ಸಸ್ಯವರ್ಗೀಕರಣಶಾಸ್ತ್ರ** (ಆವೃತಬೀಜ ಸಸ್ಯಗಳು), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಪಾಟೀಲ, ಬಿ.ಆರ್., ೧೯೭೧, **ಹಳ್ಳಿಗರೇಳ್ಗೆ ಸಾಧಿಸುವ ಬಗೆ,** ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪಾಟೀಲ, ಎಸ್.ಹೆಚ್., ಶೇಷಾದ್ರಿ ಅಯ್ಯರ್, ಅ., ಅನು: ಬಿ.ಎನ್. ಜೋಗಿತ್ತಾಯ, ೧೯೭೫, **ಆಧುನಿಕ ಹೈನುಗಾರಿಕೆ,** ವಿಸ್ತರಣ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಪೀಟರ್ ಫಾರ್ಬ್, ಅನು: ಶಿವಪ್ಪ, ಡಿ.ಎಸ್., ೧೯೬೯, **ಜೀವಂತ ಭೂಮಿ,** ಗೀತಾ ಬುಕ್ ಹೌಸ್, ಮೈಸೂರು.

ಪೀಟರ್ ಮಾರ್ಟಿನ್ ರೇ, ಅನು: ನರಸಿಂಹೇಗೌಡ, ಎಚ್.ಕೆ. ಮತ್ತು ಇತರರು, ೧೯೮೫, **ಸಜೀವ ಸಸ್ಯ,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಪುಟ್ಟರುದ್ರಯ್ಯ, ಎಂ. ಮತ್ತು ವೆಂಕಟರಾವ್. ಬಿ.ವಿ., ೧೯೬೯, **ಪ್ರಬುದ್ಧ ಕರ್ನಾಟಕ,** ಚಿನ್ನದ ಸಂಚಿಕೆ– ವಿಜ್ಞಾನ ವಿಭಾಗ–೧, ಅಧ್ಯಾಯ ೯– ಕೃಷಿ ವಿಜ್ಞಾನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಪುಟ್ಟರುದ್ರಯ್ಯ, ಎಂ., (ಅನುವಾದ), ೧೯೭೮, **ಸುಭಿಕ್ಷತೆಗೆ ತೆರೆದ ಬಾಗಿಲು,** ಮೂಲ: ನ್ಯಾಶನಲ್ ಅಗ್ರಿಕಲ್ಚರಲ್ ಕೆಮಿಕಲ್ಸ್ ಅಸೋಸಿಯೇಶನ್, ವಾಷಿಂಗ್ಟನ್. ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಪುಟ್ಟಸ್ವಾಮಿಗೌಡ, ಬಿ.ಎಸ್., ಅ. ಶೇಷಾದ್ರಿ ಅಯ್ಯರ್, ಅ., ೧೯೭೪, **ಆಧುನಿಕ ಬೇಸಾಯದಲ್ಲಿ ಗೊಬ್ಬರಗಳು,** ವಿಸ್ತರಣ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಪಂಡಿತ, ಟಿ.ಎಂ., ೧೯೭೨, **ಭಾರತದಲ್ಲಿ ಭೂ ಅಭಿವೃದ್ಧಿ ಬ್ಯಾಂಕುಗಳು,** ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪಂಡಿತ ಶ್ರೀ ರೇವಣಶಾಸ್ತ್ರಿ, ೧೯೭೦, **ಪಶುವೈದ್ಯ ಸಂಜೀವಿನಿ,** ಭಾಗ ೧, ಬ್ರಹ್ಮಾತೀರ್ಥಾಶ್ರಮ, ದ್ಯಾಮವ್ವನಹಳ್ಳಿ, ಚಿತ್ರದುರ್ಗ ಜಿಲ್ಲೆ.

ಬನ್ನೂರು ನಂ. ಬೋಳೇಗೌಡ, ೧೯೬೬, **ಮೆಂಡೆಲಿಸಂ,** ಸರ್.ಕೆ.ಪಿ.ಪುಟ್ಟಣ್ಣಚೆಟ್ಟರ ಪುದುವಟ್ಟಿನ ಪ್ರಕಟನಮಾಲೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಬಾಲಕೃಷ್ಣ, ಜೆ., ೧೯೮೮, ಕೃಷಿಋಷಿ ಫುಕುವೋಕ, **ಸುಧಾ,** ೪-೧೦ ಸೆಪ್ಟೆಂಬರ್, ಬೆಂಗಳೂರು.

ಬಾಲಕೃಷ್ಣ, ಜೆ., ಹಾಗೂ ಇತರರು, ೧೯೯೯, **ಸಮಗ್ರ ಪೀಡೆ ನಿರ್ವಹಣೆಯಲ್ಲಿ ಕೀಟನಾಶಕಗಳ ಪಾತ್ರ,** ಕರ್ನಾಟಕ ಸರ್ಕಾರ, ಕೃಷಿ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

ಬಾಲಕೃಷ್ಣ, ಜೆ., ೨೦೦೪, **ಜೀವತಂತ್ರಜ್ಞಾನ ಅರ್ಥವಿವರಣಾ ಕೋಶ (ಇಂಗ್ಲಿಶ್-ಕನ್ನಡ),** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಬಾಲುರಾವ್, ಶಾ., ೧೯೭೩, **ಜೇನವ್ವನ ಸಂಸಾರ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ಕನ್ನಡ ಸಾಹಿತ್ಯ ಪರಿಷತ್ತಿನ ತ್ರೈವಾರ್ಷಿಕ ಯೋಜನೆಯ ಪುಸ್ತಕಮಾಲೆ.

ಬಿಷಪ್, ಸಿ.ಇ., ಟೌಸ್ಸೆಂಟ್, ಡಬ್ಲ್ಯೂ. ಡಿ., ಅನು: ವಿ.ಸಿ. ಹಿತ್ತಲಮನಿ ಮತ್ತು ಇತರರು, ೧೯೮೩, **ಕೃಷಿ ಆರ್ಥಿಕ ವಿಶ್ಲೇಷಣೆ ಪ್ರವೇಶಿಕೆ,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಬೆನಿಟೊ ಸ. ವರ್ಗೆರಾ, ಅನು: ಮಹದೇವಪ್ಪ, ಎಂ., ೧೯೮೧, **ಬತ್ತದ ಬೆಳೆ,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಮರುಳುಸಿದ್ಧಯ್ಯ, ಎಚ್.ಎಮ್., ೧೯೯೩, **ಸಂಶೋಧನೆಯ ಎರಡು ಹೆಜ್ಜೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಲ್ಲಿಕಾರ್ಜುನಪ್ಪ, ಎಚ್.ಕೆ., ೧೯೭೩, **ಸಸ್ಯಗಳ ನಿಘಂಟು**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಮಹದೇವಪ್ಪ, ಎಂ. ಮತ್ತು ಟಿ.ಎಂ.ಮಂಜುನಾಥ್, ೧೯೮೫, **ಬತ್ತದ ಬೇಸಾಯ ಸಮಸ್ಯೆ ಹಾಗೂ ಪರಿಹಾರಗಳು**, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಮಹದೇವಪ್ಪ, ಎಂ., ೧೯೮೫, **ಬತ್ತ**, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಮೀರಾರಾವ್, ೧೯೮೬, **ಆಹಾರ ವಿಜ್ಞಾನಕ್ಕೆ ಪ್ರಥಮ ಪರಿಚಯ**, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಮುನಿಯಪ್ಪ, ಜೆ., ೧೯೬೩ (ದ್ವಿ ಮು: ೧೯೬೯), **ಕುರಿ ಸಾಕಣೆ**, ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ಮುರಿಗಪ್ಪ ಶ್ರೇಷ್ಠಿ, ಡಿ.ಎಸ್., ೧೯೫೮ (ದ್ವಿಮು. ೧೯೭೧), **ಜೇನು**, ಪ್ರಚಾರ ಪುಸ್ತಕಮಾಲೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಮೂರ್ತಿ, ಎನ್.ಎನ್., ೧೯೭೬, **ನೀರಾವರಿ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಮೌರ್ಯ, ಎನ್.ಎಲ್., ದೇವದತ್ತಂ, ಡಿ.ಎಸ್.ಕೆ., ಅನು: ಗುರುಸ್ವಾಮಿ, ಟಿ., ಹಿರೇಮಠ, ಎಸ್.ಆರ್. ೧೯೮೭, **ಬೇಸಾಯ ಯಂತ್ರೋಪಕರಣಗಳು**, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಯಮುನಾಬಾಯಿ ಮತ್ತು ರಾಘವೇಂದ್ರರಾವ್, ಎಂ.ಆರ್., ೧೯೭೬, **ದ್ಯುತಿಸಂಶ್ಲೇಷಣೆ**, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು.

ರಣಜಿತ್ ಸಿಂಗ್, ೧೯೭೩, **ಹಣ್ಣುಗಳು**, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ. ಹೊಸದೆಹಲಿ.

ರಹಮತ್ ತರೀಕೆರೆ, ೨೦೦೨, **ಮರದೊಳಗಣ ಕಿಚ್ಚು (ಪ್ರತಿ ಸಂಸ್ಕೃತಿ: ಒಂದು ಸಾಂಸ್ಕೃತಿಕ ಚಿಂತನೆ)**, ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್, ಬೆಂಗಳೂರು.

ರಾಗೌ, ೧೯೬೯, **ಕಿಟ್ಟೆಲ್ ಕೋಶದ ಗಾದೆಗಳು,** ಉಷಾ ಸಾಹಿತ್ಯ ಮಾಲೆ, ಮೈಸೂರು.

ರಾಜಗೋಪಾಲ್, ಡಿ., ೧೯೮೭, **ಗೆದ್ದಲು,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ರಾಜನ್, ಬಿ.ಕೆ.ಸಿ. ಮತ್ತು ಸ್ವಾಮಿರಾವ್, ಎನ್., ೧೯೮೧, **ಭಾರತದಲ್ಲಿ ಸಾಮಾಜಿಕ ಅರಣ್ಯಶಾಸ್ತ್ರ,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ರಾಜಶೇಖರ, ಪಿ.ಕೆ. ಮತ್ತು ನರಸಿಂಹೇಗೌಡ ನಾರಣಾಪುರ, ೧೯೯೧, **ಭೂಮಿ ತೂಕದ ಮಾತು– ಗಾದೆಗಳು,** ಕಿರಣ ಕಿಶೋರ ಪ್ರಕಾಶನ, ರಾಬರ್ಟ್‌ಸನ್ ಪೇಟೆ, ಕೋಲಾರ ಚಿನ್ನದ ಗಣಿ.

ರಾಮಕೃಷ್ಣ, ಜಿ., ೧೯೯೭, **ಭಾರತೀಯ ವಿಜ್ಞಾನದ ಹಾದಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಮರಾವ್ ಎಸ್. ಜ್ಯೋತಿ, ೧೯೯೭, **ದನಗಳ ಪೌಷ್ಟಿಕ ಆಹಾರ ಮತ್ತು ತಳಿ ಅಭಿವೃದ್ಧಿ,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ರಾಮೇಗೌಡ, ೧೯೯೪, **ನಮ್ಮ ಗಾದೆಗಳು,** ಗೀತಾ ಬುಕ್ ಹೌಸ್, ಮೈಸೂರು.

ರಾವ್, ಎಚ್.ಕೆ.ಜಿ., ೧೯೮೭, **ಮಣ್ಣು ವಿಜ್ಞಾನದ ಮೂಲ ತತ್ವಗಳು,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ರಾಮಸ್ವಾಮಿ, ಎಸ್.ಎನ್., ೧೯೬೯, **ಕರ್ನಾಟಕದ ಅರಣ್ಯ ವೃಕ್ಷಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ರಾವ್, ಎಚ್.ಕೆ.ಜಿ., ೧೯೮೭, **ಮಣ್ಣು ವಿಜ್ಞಾನದ ಮೂಲ ತತ್ವಗಳು,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ರುಕ್ಕಮ್ಮ, ಬಿ.ಎಸ್., ೧೯೫೯, **ಕೀಟಗಳ ಒಡನಾಡಿ ಫೇಬರ್,** ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು.

ರೋಗರ್ ವೈ. ಸ್ಟೇನಿಯರ್, ಮೈಕೆಲ್ ಡೌಡೋರೋಫ್, ಎಡ್ವರ್ಡ್ ಎ. ಅಡೆಲ್‌ಬರ್ಗ್, ಅನು:ಓಂಕಾರಯ್ಯ, ಎಚ್. ಮತ್ತು ಶಾಂತಾ, ಎಚ್., ೧೯೮೨, **ಮಾನವ ಕಲ್ಯಾಣಕ್ಕೆ ಸೂಕ್ಷ್ಮಜೀವಿಗಳ ಬಳಕೆ– ಸೂಕ್ಷ್ಮಜೀವಿ ಜಗತ್ತು, ಭಾಗ–೭,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ರಂಗಯ್ಯ, ಡಿ., ೧೯೭೨, **ಪ್ರಾಚೀನ ಸಸ್ಯ ವಿಜ್ಞಾನ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ರಂಗಸ್ವಾಮಿ, ಜಿ., ಅನು: ಮುನಿಸ್ವಾಮಿ, ಡಿ., ನರಸಿಂಹೇಗೌಡ, ಎಚ್.ಕೆ. ಮತ್ತು ಪಿತ್ತಲಮನಿ, ವಿ.ಸಿ., ೧೯೯೧, **ಕೃಷಿ ಸೂಕ್ಷ್ಮಜೀವಿಶಾಸ್ತ್ರ,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಲಕ್ಷ್ಮಣರಾವ್ ಜೆ.ಆರ್., ೧೯೭೦, ಕನ್ನಡದಲ್ಲಿ ವೈಜ್ಞಾನಿಕ ಸಾಹಿತ್ಯ (೧೯೧೫–೭೦), **ಚಿನ್ನದ ಬೆಳಸು,** ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣಮಹೋತ್ಸವದ ಸವಿನೆನಪಿನ ಸಂಪುಟ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು–೧೮.

ಲಕ್ಷ್ಮಣಾಚಾರ್, ಎಂ.ಎಸ್., ೧೯೭೩, **ಸಂಬಾರ ಪದಾರ್ಥಗಳು,** ಪ್ರಸಾರಾಂಗ, ಮೈಸೂರು. ಗೃಹಸರಸ್ವತಿ ಗ್ರಂಥಮಾಲೆ.

ವರದರಾಜನ್, ಎಸ್., ೧೯೫೮, **ವಿಜ್ಞಾನ ಸಂಶೋಧನೆ,** ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ವಾಮದೇವಯ್ಯ, ಬಿ.ಎಂ., ೧೯೭೨, **ಕಾಳಿನ ಉಳಿಕೆ–ರೈತನ ಗಳಿಕೆ,** ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ವಿಜಯೇಂದ್ರಮೂರ್ತಿ, ಎ.ಎಸ್., ೧೯೬೭, **ತೆಂಗು,** ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ವಿಜಯೇಂದ್ರ ಮೂರ್ತಿ, ಎ.ಎಸ್., ೧೯೭೨, **ಬೆಳೆ ತಂದ ಭಾಗ್ಯ,** ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ವೆಂಕಟರಾವ್. ಎ., ಮತ್ತು ಶೇಷ ಅಯ್ಯಂಗಾರ್, ಎಚ್., (ಸಂ), ೧೯೪೦, **ಓಷಧಿಕೋಶಂ,** ಮದ್ರಾಸ್ ಯೂನಿವರ್ಸಿಟಿ ಕರ್ಣಾಟಕ ಗ್ರಂಥಮಾಲಾ, ಸಂಖ್ಯೆ–೭, ಮದ್ರಾಸ್.

ವೆಂಕಟರಾವ್, ಬಿ.ವಿ., ೧೯೭೦, **ಗೊಬ್ಬರಗಳು,** ಗೃಹ ಸರಸ್ವತೀ ಗ್ರಂಥಮಾಲೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ವೆಂಕಟರಾವ್, ಬಿ.ವಿ. ಹಾಗೂ ಇತರರು, ೧೯೭೫, **ಬೇಸಾಯ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ವೆಂಕಟರಾವ್, ಡಿ., ೧೯೭೩, **ಕೃಷಿ ಸಹಕಾರ,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ವೆಂಕಟಸುಬ್ಬಯ್ಯ, ಆರ್.ಬಿ., ೧೯೭೨, **ಹಸುರು ಮೇವಿನ ಕಣಜ,** ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ಶಶಿಧರ್.ಕೆ.ಸಿ., ೨೦೦೦, **ಕೃಷಿಯ ನಿರಂತರತೆಯಲ್ಲಿ ಮಾನವ ಸಂಪನ್ಮೂಲದ ಪಾತ್ರ,** ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಿರುವ ಪಿಎಚ್.ಡಿ ಮಹಾಪ್ರಬಂಧ.

ಶಿವನಂಜಯ್ಯ ಬಾಳೇಕಾಯಿ, ೨೦೦೨, **ಫುಕುವೊಕನ ಹಾದಿಯಲ್ಲಿ,** ನಮ್ಮ ಪ್ರಕಾಶನ, ಬಿಳಿಗೆರೆ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ.

ಶಿವರಾಮ ಕಾರಂತ (ಅನು), ೧೯೮೩, **ಕೀಟನಾಶಕಗಳ ಪಿಡುಗು- ಬೆಳೆಯುತ್ತಿರುವ ಸಮಸ್ಯೆ,** ಅಕ್ಷರ ಪ್ರಕಾಶನ, ಹೆಗ್ಗೋಡು.

ಶಿವರಾಮ ಶೆಟ್ಟಿ, ಬಿ., ೨೦೦೦, **ಸಸ್ಯ ಜಾನಪದ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶಿವಶಂಕರರಾವ್, ಕೆ.ಎನ್., ೧೯೭೨, **ನೀರಾವರಿ ಸಮಸ್ಯೆಗಳು,** ಪ್ರಚಾರೋಪನ್ಯಾಸ ಮಾಲೆ, ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

'ಶ್ರೀ' ಪಡ್ರೆ (ಸಂಪಾದಕ), ೧೯೯೫, **ಕೃಷಿಕರ ಕೈಗೆ ಲೇಖನಿ,** ಫಾರ್ಮರ್ ಫಸ್ಟ್ ಟ್ರಸ್ಟ್ (ರಿ), C/o ಅಡಿಕೆ ಪತ್ರಿಕೆ, ಪುತ್ತೂರು.

ಶ್ರೀ ನಾಗಭೂಷಣ ಘನಮಠ ಶಿವಯೋಗಿ, ೧೯೮೦, **ಕೃಷಿಜ್ಞಾನ ಪ್ರದೀಪಿಕೆ,** ಶ್ರೀ ಘನಮಠೇಶ ಧರ್ಮ ಪ್ರಚಾರಕ ಮಂಡಳಿ, ನರಗುಂದ.

ಶ್ರೀನಿವಾಸಮೂರ್ತಿ, ಎ.ಪಿ., ೧೯೮೬, **ಭಾರತದ ಕೃಷಿ ಅಭಿವೃದ್ಧಿ ಯೋಜನೆ- ಒಂದು ಪಕ್ಷಿನೋಟ,** ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಶ್ರೀರಂಗರಾಜು, ಎಸ್.ಎಲ್., ೧೯೭೩, **ಹೊಸ ಬಿತ್ತನೆ-ಹೆಚ್ಚು ಲಾಭ 'ಪೂರ್ಣರಾಗಿ',** ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ಶೇಷಗಿರಿರಾವ್, ಡಿ., ೧೯೭೧, **ಸಸ್ಯ ಸಂರಕ್ಷಣೆ – ಕೈಪಿಡಿ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಶೇಷಗಿರಿರಾವ್, ಡಿ., ೧೯೭೪, **ಧಾನ್ಯ ದಾಸ್ತಾನು ತತ್ವ ಮತ್ತು ಪದ್ಧತಿಗಳು**, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಶೇಷಗಿರಿರಾವ್, ಡಿ., ೧೯೭೫, **ಕಣಜದ ಪೀಡೆಗಳು ಮತ್ತು ಅವುಗಳ ಹತೋಟಿ**, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಶೇಷಾದ್ರಿ ಅಯ್ಯರ್, ಅ., ಗಣಪತಿ, ಕೆ.ಆರ್., ಹನುಮಪ್ಪ, ಪಿ., ೧೯೭೩, **ಹಲವು ಪ್ರಗತಿಶೀಲ ರೈತರು**, ವಿಸ್ತರಣ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಶೇಷಾದ್ರಿ ಅಯ್ಯರ್, ಅ., ರಾಮಚಂದ್ರ, ಕೆ. ಟಿ., ಛಾಯಾಪತಿ, ಟಿ., ೧೯೭೩, **ಆಧುನಿಕ ಬೇಸಾಯ ಪ್ರಶ್ನೆ–ಪರಿಹಾರ** (ಭಾಗ–೧), ವಿಸ್ತರಣ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಶೇಷಾದ್ರಿ ಅಯ್ಯರ್, ಅ., ರಾಮಚಂದ್ರ, ಕೆ. ಟಿ., ಛಾಯಾಪತಿ, ಟಿ., ೧೯೭೩, **ಆಧುನಿಕ ಬೇಸಾಯ ಪ್ರಶ್ನೆ–ಪರಿಹಾರ** (ಭಾಗ–೨), ವಿಸ್ತರಣ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಶೇಷಾದ್ರಿ ಅಯ್ಯರ್, ಅ., ಖಾನ್, ಎಂ.ಎಂ., ೧೯೭೪, **ನಮ್ಮ ಹಣ್ಣಿನ ಬೆಳೆಗಳು**, ವಿಸ್ತರಣ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಶೇಷಾದ್ರಿ ಅಯ್ಯರ್, ಅ., ಖಾನ್, ಎಂ.ಎಂ., ೧೯೭೪, **ನಮ್ಮ ತರಕಾರಿ ಬೆಳೆಗಳು**, ವಿಸ್ತರಣ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಶೇಷಾದ್ರಿ ಅಯ್ಯರ್, ಅ., ಪಾಟೀಲ, ಎಸ್.ಹೆಚ್., ೧೯೭೪, **ನಮ್ಮ ಮೇವಿನ ಬೆಳೆಗಳು**, ವಿಸ್ತರಣ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಶೇಷಾದ್ರಿ ಅಯ್ಯರ್, ಅ. (ಸಂಪಾದಕರು), ೧೯೭೫, **ಆಧುನಿಕ ಕೋಳಿ ಸಾಕಣೆ**, ವಿಸ್ತರಣ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

ಸ್ವಾಮಿ, ಬಿ.ಜಿ.ಎಲ್., ೧೯೭೬, **ಹಸುರು ಹೊನ್ನು**, ಕಾವ್ಯಾಲಯ ಪ್ರಕಾಶನ, ಮೈಸೂರು.

ಸ್ವಾಮಿ, ಬಿ.ಜಿ.ಎಲ್., ೧೯೭೮, **ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಸಿದ್ಧವನಹಳ್ಳಿ ಕೃಷ್ಣಶರ್ಮ, ೧೯೪೯ (ದ್ವಿ. ಮು: ೧೯೬೯), **ಕಾಮಧೇನು**, ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ಸೀತಾರಾಂ ಯೆಚೂರಿ, ೧೯೯೪, **ಗ್ಯಾಟ್ ೧೯೯೪- ಮೂರನೇ ಜಗತ್ತಿನ ದೇಶಗಳು ಮತ್ತೆ ವಸಾಹತುಗಳಾಗಬೇಕೇ?**, ಕ್ರಿಯಾ ಪ್ರಕಾಶನ, ಬೆಂಗಳೂರು.

ಸುಬ್ಬರಾಯಪ್ಪ, ಬಿ.ವಿ., ೧೯೮೬, **ಕರ್ನಾಟಕದ ವೈಜ್ಞಾನಿಕ ಇತಿಹಾಸ**, ವಿಶ್ವ ಕನ್ನಡ ಸಂ.೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಸುರೇಶ,ಕೆ.ಪಿ. ಮತ್ತು ಶಾಂತಿಮೂಲೆ,ಎಂ.ಟಿ., **ಸಾವಯವ ಕೃಷಿ ಕೈಪಿಡಿ**, ಸಾವಯವ-ಸಾವಯವ ಕೃಷಿಗಾಗಿ ಕೃಷಿಕರ ಸಂಘಟನೆ, ಕುಕ್ಕುಜಡ್ಕ, ಸುಳ್ಯ, ದಕ್ಷಿಣ ಕನ್ನಡ.

ಸೋಮಶೇಖರ್, ಹ., ೨೦೦೪, **ಅರ್ಥ ಸಂದರ್ಭ**, ಪ್ರೊ.ಬಿ.ಕೃಷ್ಣಪ್ಪ ಟ್ರಸ್ಟ್, ಬೆಂಗಳೂರು.

ಹನುಮಂತಪ್ಪ, ಪಿ., ೧೯೭೩, **ಮೆಕ್ಸಿಕನ್ ಗೋಧಿ**, ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.

ಹಲಸೀಕರ, ದಾ.ಅ. ವೈದ್ಯಗುರು., ೧೯೭೦, **ತ್ರಿಭಾಷಾ ವನಸ್ಪತಿ ಕೋಶ** (ಸಂಸ್ಕೃತ-ಕನ್ನಡ-ಮರಾಠಿ), ವೈದ್ಯ ಮಧುಮಾಲತಿಬಾಯಿ ಮಾಧವರಾವ ಲೋಕರೆ, ಹುಬ್ಬಳ್ಳಿ.

ಹಿತ್ತಲಮನಿ, ವೀ.ಚ., ೧೯೪೭, (ದ್ವಿ ಮು: ೧೯೭೧, ತೃ.ಮು:೧೯೭೧), **ಗೊಬ್ಬರ**, ಶರಾವತಿ ಸಾಹಿತ್ಯ, ಮಂಜುನಾಥಪುರ, ಧಾರವಾಡ.

ಹಿತ್ತಲಮನಿ, ವಿ.ಚ., (ಸಂಪಾದಕರು), ೧೯೭೩, **ಮೈಸೂರು ರಾಜ್ಯದಲ್ಲಿ ಕೃಷಿ**,ಕೃಷಿ ಗ್ರಂಥಮಾಲೆ-೧, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು (ಜನ್ಮಭೂಮಿ ಪ್ರೆಸ್ ಟ್ರಸ್ಟ್‌ನ ನೆರವಿನಿಂದ).

ಹೊಸಮನಿ, ಎಂ.ಎಂ., ೧೯೬೫ (ದ್ವಿಮು. ೧೯೭೨), **ಬೆಳವಲ ನಾಡಿನ ಬೆಳೆಗಳು**, ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಹೊಸಮನಿ, ಎಂ.ಎಂ., ೧೯೭೦, **ಭೂ ಸಂರಕ್ಷಣೆ ಮತ್ತು ಒಣ ಬೇಸಾಯ**, ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಹೊಸಮನಿ, ಎಂ.ಎಂ. ಮತ್ತು ಚಂದ್ರಯ್ಯ, ಎಸ್.ಸಿ., ೧೯೯೩, **ಕೃಷಿ ಉಪಕರಣಗಳು**, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

Albert Howard and Gabrielle L.C. Howard, ೧೯೨೭, **The Development of Indian Agriculture,** , Oxford University Press, London.

Aldous Huxley, ೧೯೬೩, **Literature and Science,** Chatto and Windus, London.

Allan, R.G., ೧೯೪೦, **An Outline of Indian Agriculture,** Commisioner of Agriculture, Baroda State, Baroda State Press, India.

**Annotated Bibliography of Popular Science Books in Kannada,** ೨೦೦೫, Karnataka Rajya Vijnana Parishat, Bangalore.

Amaresh Kumar, K., ೨೦೦೦, **'Content Analysis of Agricultural Information in Kannada dailies and to know the reading habit of farmers,** MSc Thesis submitted to University of Agricultural Sciences, Bangalore.

Basham, A.L., ೧೯೮೭, **The Wonder that was India**, Rupa & Co., Delhi.

Bret Wallach, 1996, 'Agricultural Development in British India' in **Losing Asia, Modernization and the Culture of Development,** Johns Hopkins University Press.

Bronowski, J., ೧೯೮೨, **The Ascent of Man,** Futura Publications, London.

Bridget and Raymond Allchin, ೧೯೮೩, **The Rise of Civilization in India and Pakistan,** Cambridge World Archaeology.

Centre for Alternative Agricultural Media Website: www.farmedia.org

Dikshit, G.S., Kuppuswamy, G.R. and Mohan, S.K., ೧೯೯೩, **Tank Irrigation in Karnataka- A Historical Survey,** Gandhi Sahitya Sangha, Bangalore.

**Down To Earth- Survival Primer,** ೨೦೦೧, Centre for Science and Environment, New Delhi.

Gajapathi, G., Srinivasan, V and Nanjaiyan, K., ೧೯೭೭, **An Analysis of the sources and Frequency of Extension Education.,** ೧೩ (೩ & ೪):೩೧.

Fox, R., ೧೯೫೨, **Agricultural and Technical Journalism,** Prentice Hall, New York.

Irfan Habib, ೨೦೦೧, **Prehistory,** Tulika, New Delhi.

Jayaram.K., ೧೯೮೦, **Evaluation of 'Krishi vignana', a quarterly farm journal in Kannada published by the University of Agricultural Sciences, Bangalore',** M.Sc., Thesis.

Joseph, L.P., ೧೯೭೩, **How can I save my crop?,** The Am. Rep., ೨೩, (೨):೯.

Kalyan Ray, ೦೨/೦೯/೨೦೦೬, **Green Revolution comes full circle, Deccan Herald,** Bangalore.

Kamath, M.G., ೧೯೬೯, **Writing for Farm Families,** Allied pub. Pvt. Ltd., Bombay.

Kolla R. Ganapathy, ೧೯೬೮, **Evalution of Extension Publications for Mysore State, India,** A Research Paper submitted in partial fulfillment for the Degree of Master Science in Agricultural Journalism at The University of Wisconsin.

Kothari, Ashish, 1999, **Agro-biodiversity: The Future of India's Agriculture,** Mtn-Forum On-Line Library DocumentArticle for MCAER Book.

Lawrence Busch and William B. Lacy, ೧೯೮೩, **Science, Agriculture and the Politics of Research,** Westview Press, Boulder, Colorado.

Lerner, Daniel, ೧೯೫೮, **The Passing of Traditional Society-Modernizing the Middle East,** Free Press, New York.

Lowdermilk, ೧೯೩೯, **Conquest of Land through seven thousand years,** W.C., USDA Bulletin No.೯೯, U.S. Department of Agriculture, Natural Resources Conservation Services.

Masanobu Fukuoka, ೧೯೭೮, **The One-Straw Revolution- An Introduction to Natural Farming,** Friends Rural Centre, Rasulia, Hoshangabad, M.P.

Mendez and Waisanen, ೧೯೬೪, **Some Correlates of Functional Literacy,** Paper presented at the Ninth Congress of Inter American Society of Psychologists, Miami Beach.

Mishra, R.P., ೧೯೬೮, **Diffusion of Agirulcultural Innovations,** Prasaranga, University of Mysore, Mysore.

Mishra, V.M., ೧೯೬೯, **Mass Media use patterns and Modernization process in the Indian slums**, Ph.D. Thesis., submitted to University of Minnesota, Minnesota.

Nagaraja M.S., ೧೯೮೬, **Influence of 'Krishiloka', a farm journal in Kannada on Farmers knowledge and attitude,** M.Sc. Thesis submitted to University of Agricultural Sciences, Bangalore.

Nanjappa, D., ೧೯೮೨, **Content Analysis of Agricultural Information in Selected Kannada Dailies and Farmers' reading habits, preferences and suggestions,** M.Sc., Thesis submitted to UAS, Bangalore.

Natikar, K.V., ೨೦೦೧, **Attitude and use of farm journals by the subscriber farmers and their profile- a critical analysis,** M.Sc. Thesis submitted to University of Agricultural Sciences, Bangalore.

Nomesh Kumar, N., ೨೦೦೩, **Development of Reading Ease and Human Interest- Kannada Readability Formulae for Farm Publications,** Ph.D., Thesis, University of Agricultural Sciences, Bangalore.

Panini, M.N., ೧೯೯೯, **Trends in Cultural Globalisation: From Agriculture to Agribusiness in Karnataka,** Economic and Political Weekly, July-August.

Prakash,S., **Perceived Effectiveness of Public and Private Farm Magazines in Karnataka,** M.Sc., Thesis, University of Agricultural Sciences, Bangalore.

Prasad, R.M., ೨೦೦೫, How farmer writing is different from writing for farmer?, **www.farmedia.org**

Prawl, W.L. & Somasundaram, T., ೧೯೬೮, **Producing Agricultural Information materials,** Division of Extension, Andhra Agricultural University, Hyderabad, Ext. Bull. No.೩.

Purnachandra Tejasvi, K.P., Farmer: An 'Endangered Species'?, **www.farmedia.org**

Ramanjaneyulu, G.V., ೨೦೦೫, It only doles out subsidies, **Down To Earth,** Feb. ೨೮, ೨೦೦೫, New Delhi.

Ranjan S. Karippai, ೧೯೮೮, Analysis of Reading Comprehension of Agricultural Articles in Daily Newspapers by farmers in Kerala state, Ph.D. Thesis submitted to University of Agricultural Sciences, Bangalore.

Ryan, B, and Gross, N., ೧೯೪೩, **The diffusion of hybrid seed corn in two Iowa communities.,** Rur. Soc., ೮: ೧೫–೨೪.

Sharad Chandra Jain, Rao and Raghavan, ೧೯೬೯, **Indian Agriculture- Its Challenge and Achievement,** Prince of Wales Road, Mysore–೪.

Shivaram Pailoor, 2005, **www.farmedia.org**

Shree Padre, Sudarshana and Robert Tripp, ೨೦೦೩, July, Reforming Farm Journalism: The Experience of ADIKE PATRIKE in India, **AgREN Network Paper No. ೧೨೮**, United Kingdom.

Singh, S.N., and Reddy, S.L., , ೧೯೬೫, *Adoption of Improved Farm Practices as Related to sources of Information,* **Indian J. of Agron.,** vol X, No. ೧. pp ೧೦೦–೧೦೭.

UNESCO, ೧೯೮೨, **Many Voices, One World**, Oxford and IBH publication Co., New Delhi.

Vandana Shiva, ೧೯೯೨, **The Violence of the Green Revolution-Third World Agriculture, Ecology and Politics,** The Other India Press, Mapusa, Goa.

Vasavi, A.R., Agrarian Distress in Bidar- Market, State and Suicides, **Economic and Political Weekly,** August ೭, ೧೯೯೯.

Veeresh, G.K., ೨೦೦೪, **Operational Methodologies And Package of Practices In Organic Farming,** Association for Promotion of Organic Farming, Bangalore-24.

Venkatesh Sharma, V, ೧೯೮೩, **An Analysis of the readability, content and usefullness of 'Krishi Vignana' journal by farmers and extension workers,** M.Sc. Thesis submitted to University of Agricultural Sciences, Bangalore.

Vitala, K.R., ೨೦೦೨, **Content analysis of Selected Kannada Farm Magazines,** M.Sc., Thesis, University of Agricultural Sciences, Bangalore.

Ward, W.B., ೧೯೫೯, **Reporting Agriculture through Newspapers, Magazines, Radio, Television,** pp.೨೬–೨೭, Camstock Publishing Associates, Cornell University press, New York.

William B. Ward, ೧೯೫೨, **Reporting Agriculture through Newspapers, Magazines, Radio, Television,** Comstock Publishing Associates, Ithaca, New York.

Yegna Narayan Aiyer,Y.K., ೧೯೪೯, **Agriculture & Allied Arts in Vedic India,** Bangalore City, India.

ಅನುಬಂಧ ೧:

# ಸಂದರ್ಶನಾ ಪ್ರಶ್ನಾವಳಿ

ಸಂಖ್ಯೆ:______

೧. ಸಾಮಾನ್ಯ ಮಾಹಿತಿ

ಅ) ರೈತರ ಹೆಸರು :

ಆ) ವಯಸ್ಸು :

ಇ) ಗ್ರಾಮ :

ಈ) ತಾಲ್ಲೂಕು :

ಉ) ಗ್ರಾಮದಿಂದ ಹತ್ತಿರದ ಪಟ್ಟಣ/ ನಗರಕ್ಕೆ ಇರುವ ದೂರ : ____ ಕಿ.ಮೀ

ಊ) ಗ್ರಾಮದಿಂದ ಹತ್ತಿರದ ಕೃಷಿ ಡಿಪೊ/ಕೃಷಿ ವಿಶ್ವವಿದ್ಯಾನಿಲಯಕ್ಕಿರುವ ದೂರ : ____ ಕಿ.ಮೀ

೨. ಕುಟುಂಬದ ಗಾತ್ರ

| | ಗಂಡಸರು | ಹೆಂಗಸರು | ಒಟ್ಟು |
|---|---|---|---|
| ವಯಸ್ಕರು | ______ | ______ | ____ |
| ಮಕ್ಕಳು | ______ | ______ | ____ |
| ಒಟ್ಟು | ______ | ______ | ____ |

೩. ಶಿಕ್ಷಣ : ಅನಕ್ಷರಸ್ತರು/ಕಾರ್ಯನಿರ್ವಹಿಸುವಷ್ಟು ಮಾತ್ರ ಶಿಕ್ಷಿತರು/ ಪ್ರಾಥಮಿಕ ಶಾಲೆ/ಮಾಧ್ಯಮಿಕ ಶಾಲೆ/ಎಸ್.ಎಸ್.ಎಲ್.ಸಿ/ ಪಿ.ಯು.ಸಿ./ ಡಿಪ್ಲೊಮೊ/ ಪದವೀಧರರು

೪. ಹಿಡುವಳಿಯ ಗಾತ್ರ (ಹೆಕ್ಟೇರುಗಳಲ್ಲಿ):

| | |
|---|---|
| ಖುಷ್ಕಿ ಭೂಮಿ | |
| ತರಿ ಭೂಮಿ | |
| ತೋಟ | |
| ಒಟ್ಟು | |

೫. ಆದಾಯ:

| ಮೂಲ | ರೂಪಾಯಿಗಳು |
|---|---|
| ಕೃಷಿಯಿಂದ ಆದಾಯ | |
| ತೋಟಗಾರಿಕೆ | |
| ಹೈನುಗಾರಿಕೆ | |
| ವ್ಯಾಪಾರ/ ಸೇವೆ | |
| ಇತರೆ | |
| ಒಟ್ಟು | |

೬ (ಅ). ಹೊಂದಿರುವ ಜಾನುವಾರುಗಳ ಸಂಖ್ಯೆ:

| ಕ್ರ.ಸಂ. | ಜಾನುವಾರು ವಿಧ | ಸಂಖ್ಯೆ | ಮೌಲ್ಯ (ರೂಗಳಲ್ಲಿ) |
|---|---|---|---|
| ೧ | ಎತ್ತು | | |
| ೨ | ಹಸು | | |
| ೩ | ಎಮ್ಮೆ | | |
| ೪ | ಕುರಿ | | |
| ೫ | ಮೇಕೆ | | |
| ೬ | ಕೋಳಿ | | |
| ೭ | ಇತರೆ | | |

೬ (ಆ). ಹೊಂದಿರುವ ಆಸ್ತಿ/ ವಸ್ತುಗಳು:

ತಾವು ಹೊಂದಿರುವ ವಿವಿಧ ವಸ್ತುಗಳನ್ನು ಸೂಚಿಸಿ.

| ಕ್ರ. ಸಂ. | ವಸ್ತುವಿನ ಹೆಸರು | ಮೌಲ್ಯ (ರೂಗಳಲ್ಲಿ) |
|---|---|---|
| ೧ | ರೇಡಿಯೊ | |
| ೨ | ಟೆಲಿವಿಶನ್ | |
| ೩ | ಟೇಪ್‌ರೆಕಾರ್ಡರ್ | |
| ೪ | ಟೆಲಿಫೋನ್ | |
| ೫ | ಮೊಬೈಲ್ | |
| ೬ | ದ್ವಿಚಕ್ರ ವಾಹನ | |
| ೭ | ಕಾರು/ ಇತ್ಯಾದಿ | |
| ೮ | ಬಯೋಗ್ಯಾಸ್ ಘಟಕ | |
| ೯ | ಆರ್.ಸಿ.ಸಿ. ಮನೆ | |
| ೧೦ | ಇತರೆ | |

೭. ಸಾಮಾಜಿಕ ಭಾಗವಹಿಸುವಿಕೆ:

| ಕ್ರ. ಸಂ. ಸಂಸ್ಥೆ | ಸದಸ್ಯರು/ಕಾರ್ಯಕಾರಿ ಮಂಡಳಿ | ಭಾಗವಹಿಸುವಿಕೆ | | |
|---|---|---|---|---|
| | | ನಿಯತವಾಗಿ | ಆಗಾಗ | ಇಲ್ಲವೇ ಇಲ್ಲ |
| ೧ ಗ್ರಾಮ ಪಂಚಾಯಿತಿ | | | | |
| ೨ ಸೇವಾ ಸಹಕಾರ ಸಂಘ | | | | |
| ೩ ಹಾಲು ಉತ್ಪಾದಕರು ಸಹಕಾರ ಸಂಘ | | | | |
| ೪ ಗ್ರಾಮ್ಯ ಅರಣ್ಯ ಸಮಿತಿ | | | | |
| ೫ ರೈತ ಸಂಘ | | | | |
| ೬ ಯುವಕ ಮಂಡಳಿ | | | | |
| ೭ ಇತರೆ | | | | |

೮. ಸಮೂಹ ಮಾಧ್ಯಮಗಳಲ್ಲಿ ಭಾಗವಹಿಸುವಿಕೆ:

ಈ ಮುಂದಿನ ಸಮೂಹ ಮಾಧ್ಯಮಗಳನ್ನು ಎಷ್ಟು ಸಾರಿ ಬಳಸುತ್ತೀರಿ?

| ಕ್ರ. ಸಂ | ವಿವರಗಳು | ದಿನವೂ | ಆಗಾಗ | ಇಲ್ಲವೇ ಇಲ್ಲ |
|---|---|---|---|---|
| ೧ | ದಿನಪತ್ರಿಕೆ/ವಾರ್ತಾಪತ್ರಿಕೆಗಳನ್ನು ಓದುವುದು | | | |
| ೨ | ನಿಯತಕಾಲಿಕೆ/ ಪತ್ರಿಕೆಗಳನ್ನು ಓದುವುದು | | | |
| ೩ | ಗ್ರಾಮೀಣ ರೇಡಿಯೋ ಕಾರ್ಯಕ್ರಮಗಳನ್ನು ಆಲಿಸುವುದು | | | |
| ೪ | ಟೆಲಿವಿಶನ್ ವೀಕ್ಷಣೆ | | | |
| ೫ | ಚಲನಚಿತ್ರಗಳ ವಿಕ್ಷಣೆ | | | |
| ೬ | ಇಂಟರ್‌ನೆಟ್ | | | |
| ೭ | ಇತರೆ | | | |

೯. ಕೃಷಿ ಪತ್ರಿಕೆಗಳನ್ನು ಓದುತ್ತೀರಿಯೆ? ಹೌದು/ ಇಲ್ಲ

ಹೌದಾದಲ್ಲಿ, ನೀವು ಓದುವ ಪತ್ರಿಕೆಗಳು ಯಾವುವು

೧.________________ ಚಂದಾದಾರರಾಗಿ/ ಗ್ರಂಥಾಲಯದಲ್ಲಿ/ ಎರವಲು ಪಡೆದು

೨.________________ ಚಂದಾದಾರರಾಗಿ/ ಗ್ರಂಥಾಲಯದಲ್ಲಿ/ ಎರವಲು ಪಡೆದು

೩. ________________ ಚಂದಾದಾರರಾಗಿ/ ಗ್ರಂಥಾಲಯದಲ್ಲಿ/ ಎರವಲು ಪಡೆದು

೪. ________________ ಚಂದಾದಾರರಾಗಿ/ ಗ್ರಂಥಾಲಯದಲ್ಲಿ/ ಎರವಲು ಪಡೆದು

೫. ________________ ಚಂದಾದಾರರಾಗಿ/ ಗ್ರಂಥಾಲಯದಲ್ಲಿ/ ಎರವಲು ಪಡೆದು

೧೦. ವೃತ್ತ ಪತ್ರಿಕೆಗಳಲ್ಲಿ ಬರುವ ಕೃಷಿ ಅಂಕಣಗಳನ್ನು ಓದುತ್ತೀರಿಯೆ? ಹೌದು/ ಇಲ್ಲ
ಹೌದಾದಲ್ಲಿ, ನೀವು ಓದುವ ಅಂಕಣಗಳು ಯಾವುವು

೧.________________ ಚಂದಾದಾರರಾಗಿ/ ಗ್ರಂಥಾಲಯದಲ್ಲಿ/ ಎರವಲು ಪಡೆದು

೨.________________ ಚಂದಾದಾರರಾಗಿ/ ಗ್ರಂಥಾಲಯದಲ್ಲಿ/ ಎರವಲು ಪಡೆದು

೩. ________________ ಚಂದಾದಾರರಾಗಿ/ ಗ್ರಂಥಾಲಯದಲ್ಲಿ/ ಎರವಲು ಪಡೆದು

೧೧. ವೃತ್ತ ಪತ್ರಿಕೆಗಳಲ್ಲಿ ಬರುವ ಕೃಷಿ ಅಂಕಣಗಳು/ ಕೃಷಿ ಪತ್ರಿಕೆಗಳಲ್ಲಿನ ಅಂಶಗಳು, ವಿಷಯಗಳು

ಅ. ಅವು ಉಪಯುಕ್ತವಾಗಿವೆಯೆ? ಹೌದು/ಇಲ್ಲ

ಆ. ನಿಮಗೆ ಅರ್ಥವಾಗುವ ರೀತಿಯಲ್ಲಿ ವಿವರಿಸಲಾಗಿರುತ್ತದೆಯೆ? ಹೌದು/ಇಲ್ಲ

ಇ. ಭಾಷೆ ಸರಳವಾಗಿರುತ್ತದೆಯೆ? ಹೌದು/ಇಲ್ಲ

ಈ. ನೀವು ಅವುಗಳನ್ನು ಅನುಸರಿಸುತ್ತೀರೆಯೆ? ಹೌದು/ಇಲ್ಲ

ಉ. ಅವುಗಳನ್ನು ಅನುಸರಿಸುವುದು ಸುಲಭವೆ? ಹೌದು/ಇಲ್ಲ

ಊ. ಅವುಗಳನ್ನು ಅನುಸರಿಸುವುದರಿಂದ ಲಾಭವಾಗಬಹುದೆ? ಹೌದು/ಇಲ್ಲ

ಋ. ವಿಷಯಗಳು ಸಮಯೋಚಿತವಾಗಿರುತ್ತದೆಯೆ? ಹೌದು/ಇಲ್ಲ

ಎ. ಆ ಬರಹಗಳಲ್ಲಿ ನೀವು ಅಪೇಕ್ಷಿಸುವುದು ಏನನ್ನು?

೧೨. ದೂರದರ್ಶನದಲ್ಲಿ ಬಿತ್ತರವಾಗುವ ಕೃಷಿ ಕಾರ್ಯಕ್ರಮಗಳನ್ನು ವೀಕ್ಷಿಸುತ್ತೀರೆಯೆ?

ಅ. ಅವು ಉಪಯುಕ್ತವಾಗಿವೆಯೆ? ಹೌದು/ಇಲ್ಲ

ಆ. ನಿಮಗೆ ಅರ್ಥವಾಗುವ ರೀತಿಯಲ್ಲಿ ವಿವರಿಸಲಾಗಿರುತ್ತದೆಯೆ? ಹೌದು/ಇಲ್ಲ

ಇ. ಭಾಷೆ ಸರಳವಾಗಿರುತ್ತದೆಯೆ? ಹೌದು/ಇಲ್ಲ

ಈ. ನೀವು ಅವುಗಳನ್ನು ಅನುಸರಿಸುತ್ತೀರೆಯೆ? ಹೌದು/ಇಲ್ಲ

ಉ. ಅವುಗಳನ್ನು ಅನುಸರಿಸುವುದು ಸುಲಭವೆ? ಹೌದು/ಇಲ್ಲ

ಊ. ಅವುಗಳನ್ನು ಅನುಸರಿಸುವುದರಿಂದ ಲಾಭವಾಗಬಹುದೆ? ಹೌದು/ಇಲ್ಲ

ಋ. ವಿಷಯಗಳು ಸಮಯೋಚಿತವಾಗಿರುತ್ತದೆಯೆ? ಹೌದು/ಇಲ್ಲ

ಎ. ಆ ಕಾರ್ಯಕ್ರಮಗಳಲ್ಲಿ ನೀವು ಅಪೇಕ್ಷಿಸುವುದು ಏನನ್ನು?

೧೩. (ಅ) ವಿಸ್ತರಣಾ ಚಟುವಟಿಕೆಗಳಲ್ಲಿ ಭಾಗವಹಿಸುವಿಕೆ:

| ಕ್ರ. ಸಂ. | ವಿವರಗಳು | ಭಾಗವಹಿಸುವಿಕೆ | | |
|---|---|---|---|---|
| | | ನಿಯತವಾಗಿ | ಆಗಾಗ | ಇಲ್ಲವೇ ಇಲ್ಲ |
| ೧ | ತರಬೇತಿಗಳು | | | |
| ೨ | ಸಭೆಗಳು | | | |
| ೩ | ಕೇತ್ರೋತ್ಸವಗಳು | | | |
| ೪ | ವಸ್ತು ಪ್ರದರ್ಶನ | | | |
| ೫ | ಪ್ರಾತ್ಯಕ್ಷಿಕೆ | | | |
| ೬ | ಪ್ರವಾಸ | | | |
| ೭ | ಚಲನಚಿತ್ರ | | | |
| ೮ | ಇತರೆ | | | |

<u>ಅನುಬಂಧ ೨:</u>

## ಕೃಷಿ ಗಾದೆಗಳು

೧. ಅಕ್ಕಸಾಲೆಗಿಂತ ಕಳ್ಳನಿಲ್ಲ, ಮಕ್ಕಿಗದ್ದೆಗಿಂತ ಬೆಳೆಯಿಲ್ಲ.
೨. ಅಕಾಲದ ಮಳೆ, ನೀರಿಲ್ಲದ ಹೊಳೆ.
೩. ಅಕಾಲದಲ್ಲಿ ಬಿತ್ತಿದ ಬೆಳೆ ಮುದಿಯನ ಮಕ್ಕಳಂತೆ.
೪. ಅಡಿಕೆ ಆಹಾರವಲ್ಲ, ಕಾಲಕ್ಕೆ ಆಗದಮಳೆ ಮಳೆ ಅಲ್ಲ.
೫. ಅಡಿಗೆಯ ಗುಣ ಸಾರಿನಲ್ಲಿ ನೋಡು, ಮಡಿಗೆಯ ಗುಣ ಫಲದಲ್ಲಿ ನೋಡು.
೬. ಅತ್ತದ ಮಳೆ ಎತ್ತೆತ್ತಾಗೊ?
೭. ಅನುರಾಧ ಸುರಿದರೆ ಮನೋರೋಗ ಹೋಗುತ್ತೆ.
೮. ಅನುರಾಧ ಬಂದರೆ ನಮ್ಮ ರಾಗಿ ನಮ್ಮದೆ.
೯. ಅಶ್ಲೇಷ ಮಳೆ ಬಿದ್ದರೆ ನಿಶ್ಶೇಷ ಕಳೆ.
೧೦. ಅಶ್ವಿನಿ ಸಸ್ಯ ನಾಶಿನಿ.
೧೧. ಅಶ್ವಿನಿ ಮಳೆ ಬಿದ್ದರೆ ಅರಿಸಿನಕ್ಕೆ ಮೇಲು, ಅಡಿಕೆಗೆ ಕೇಡು.
೧೨. ಅಸಲೇ ಮಳೆ ಕೈತುಂಬ ಬೆಳೆ.
೧೩. ಅಸ್ತದ ಮಳೆಯಲ್ಲಿ ಆರಂಭ ಬೇಡ.
೧೪. ಅಂಗಲಾಗಿ ಬಿತ್ತಿದ್ದು ಅಗಲವಾಗಿ ಏಳುವುದು.
೧೫. ಅಂಗೈನಂತೆ ಹೊಲ ಮಾಡಿದ್ರೆ ಮುಂಗೈ ತುಂಬ ತುಪ್ಪ.
೧೬. ಅಂಜನ ಹಚ್ಚಿದ ಕಣ್ಣು ಚೆಂದ, ಗೊಬ್ಬರ ಹಾಕಿದ ಹೊಲ ಚೆಂದ.
೧೭. ಅಂತ್ಯವಿಲ್ಲದ ಕಡೆ ಇಲ್ಲ
೧೮. ಆಕಾಶದ ಮಳೆ ಭೂಮಿತಾಯಿಯ ಬೆಳೆ.
೧೯. ಆದಿಯಿಲ್ಲದ ಆರಂಭ ಇಲ್ಲ.
೨೦. ಆದಿತ್ಯವಾರ ಬಂದ ಹಸ್ತ ಮಾಡಿತೆಲ್ರ ಸುಸ್ತ.
೨೧. ಆಕಳು ಕಪ್ಪಾದರೆ ಹಾಲು ಕಪ್ಪೇ?
೨೨. ಆಗೋದು ಹೋಗೋದು ದೇವರ ಇಚ್ಛೆ ಹೂಡೋದು ಬಿತ್ತೋದು ನನ್ನ ಇಚ್ಛೆ.
೨೩. ಆದಷ್ಟು ಆಯಿತು ಬರಡೆಮ್ಮೆ ಹಾಲು.
೨೪. ಆದರೆ ಒಂದು ಅಡಿಕೆ ಮರ, ಹೋದರೆ ಒಂದು ಗೋಟಡಿಕೆ.
೨೫. ಆರಂಭ ವರ್ಷ ವ್ಯಾಪಾರ ನಿಮಿಷ.
೨೬. ಆರಂಭ ಆರುಕಾಲ ವ್ಯಾಪಾರ ಮೂರು ಕಾಲ.
೨೭. ಆರಂಭಗಾರ ಕೂತು ಕೆಟ್ಟ, ದೊಂಬ ಆಡದೆ ಕೆಟ್ಟ.

೨೮. ಆರಿದ ನೀರಿಗೆ ನೆಲವೇ ಸಾಕ್ಷಿ.

೨೯. ಆರಿದ್ರ ಇಲ್ದಿದ್ರೆ ದರಿದ್ರ ಖಂಡಿತ.

೩೦. ಆರಿದ್ರ ಮಳೆಗೆ ಆಗಿರುವ ಉಕ್ಕೆಗೆ ಬಿತ್ತಿಬಿಡು.

೩೧. ಆರಿದ್ರ ಸಕಾಲದ ಮಳೆ.

೩೨. ಆರಿದ್ರೆ ಗುಡುಗಿದರೆ ಆರು ಮಳೆ ಬರುವುದಿಲ್ಲ.

೩೩. ಆರುಗಾಲ ಮಳೆ ಹುಯ್ದರೂ ಮುತ್ತುಗಕ್ಕೆ ಮೂರೇ ಎಲೆ.

೩೪. ಆಶ್ವೀಜದಲ್ಲಿ ಹೊನ್ನು ಕರುಗುವ ಬಿಸಿಲು, ಮಣ್ಣು ಕರಗುವ ಮಳೆ.

೩೫. ಆಶ್ಲೇಷ ಮಳೆ ನಿಶ್ಶೇಷ ಕೂಳೆ.

೩೬. ಆಶ್ಲೇಷ ಮಳೆ ಕೈತುಂಬ ಬೆಳೆ.

೩೭. ಆಶ್ಲೇಷ ಆವಿಯಾಗಿ ಹೋಗುತ್ತೆ.

೩೮. ಆಶ್ಲೇಷ ಮಳೆಗೆ ಸಸಿ ಗುಡ್ಡವೇರುತ್ತೆ.

೩೯. ಆಳಕ್ಕುಳು, ಅಗಲಕ್ಕೆ ಬೇಡ.

೪೦. ಈಡಿದ್ದವನ ಹೊಲ ತೋಟ ನೋಡಬೇಕು.

೪೧. ಉಕ್ಕೆ ಪಸುಮೆ ತಾಯ ಒಲುಮೆ.

೪೨. ಉತ್ತ ಹೊಲ ಬಿತ್ತಿಸಿಕೊಂಡೀತು, ಸತ್ತ ಹೆಣ ಸುಡಿಸಿಕೊಂಡೀತು.

೪೩. ಉತ್ತರ ಗುಡುಗಿದರೆ ಮಳೆ ಇಲ್ಲ.

೪೪. ಉತ್ತು ಬಾಳುವವನ ಬದುಕು ಎತ್ತಲೂ ಲೇಸು.

೪೫. ಉದ್ದು ಮದ್ದಿಗೆ ಸಲ್ಲ, ನಿದ್ದೆ ಯೋಗಿಗೆ ಸಲ್ಲ.

೪೬. ಉದ್ದು ಉರುಳಿದರೆ ಹೆದ್ದಾರಿ ದಾಟೀತೇ?

೪೭. ಉದ್ಯೋಗವಿಲ್ಲದ ಊರಲ್ಲಿ ಉದ್ದು ಉರುಳುವಷ್ಟು ಹೊತ್ತಿರಬೇಡ.

೪೮. ಉದ್ಯೋಗ ಕೆಟ್ಟರೆ ಮಧ್ಯಾಹ್ನಕ್ಕಿಲ್ಲ, ಆರಂಭ ಕೆಟ್ಟರೆ ಆರು ತಿಂಗಳಿಲ್ಲ.

೪೯. ಉಬ್ಬೇ ಮಳೆ ಗುಬ್ಬೀ ತಲೆ ನೆನೆಯುವುದಿಲ್ಲ.

೫೦. ಉಬ್ಬೇ ಮಳೆ ಅಬ್ಬೇ ಹಾಲು.

೫೧. ಊರ ಮುಂದೆ ನೇಗಿಲ ಹೂಡಿದರೆ ಕಂಡ ಕಂಡವರಿಗೆ ಒಂದೊಂದು ಮಾತು.

೫೨. ಎಣ್ಣೆ ಹಾಕಿದರೆ ಕಣ್ಣಿಗೆ ಗುಣ, ಮಣ್ಣು ಹಾಕಿದರೆ ಬುಡಕ್ಕೆ ಗುಣ.

೫೩. ಎತ್ತಿಗೆ ರೋಗ ಬಂದರೆ ಎಮ್ಮೆಗೆ ಬರೆ ಹಾಕಿದರು.

೫೪. ಎತ್ತಿಲ್ಲದೋನಿಗೆ ಎದೆಯಿಲ್ಲ.

೫೫. ಎತ್ತು ಹೇರಿಗೆ ಎಳೆದರೆ, ಎಮ್ಮೆ ನೀರಿಗೆ ಎಳೆಯುತ್ತದೆ.

೫೬. ಎಮ್ಮೆಯ ಮೇಲೆ ಮಳೆಗರೆದ ಹಾಗೆ.

೫೭. ಎಮ್ಮೆ ಕರೀತೋ, ಪುಣ್ಯ ಕರೀತೋ?

೫೮. ಎಮ್ಮೆ ಕರು ಸಾಯಬೇಕು, ಹಿರೇ ಮಗಳ ಗಂಡ ಸಾಯಬೇಕು.

೫೯. ಎಮ್ಮೆಗಿಮ್ಮೆ ತಂದರೆ ಗಿಂದರೆ ತವರ ಮನೆಗೆ ಕೊಟ್ಟೀಯಾ? ನನಗೆ ಇಕ್ಕೀಯಾ?

೬೦. ಎರೆ ನಂಬಿದೊ ದೊರೆ ನಂಬಿದೊ.

೬೧. ಎರೇ ಹೊಲ ಕರಿ ಬಂಗಾರ, ಮರಳು ಹೊಲ ಬರೀ ಶೃಂಗಾರ.

೬೨. ಒಕ್ಕಲಿಗನ ಓಡಾಟ ನಾಯಿ ಒಡನಾಟ.

೬೩. ಒಕ್ಕಲ ಮನೆ ಸುಟ್ಟು ಹೋದಮೇಲೆ, ಕಕ್ಕುಲತೆ ಪಟ್ಟು ಪ್ರಯೋಜನವೇನು?

೬೪. ಒಕ್ಕಲಿಗನ ನೆಂಟು ಒಡವೆಗೇಡು.

೬೫. ಒಗ್ಗರಣೆ ಇಲ್ಲದ ಸಾರು, ಉಳುಮೆಯಿಲ್ಲದ ಹೊಲ.

೬೬. ಒತ್ತಾದ ಬಿತ್ತನೆ ಕೈ ಹತ್ತದು.

೬೭. ಒಂದು ಅಗೆತ, ಹತ್ತು ಉಳುಮೆ.

೬೮. ಓಣಿ ಪಕ್ಕದ ಹೊಲ ಮಾಡಬೇಡ, ನೆಗೆಯೋ ಎತ್ತನು ಮನೆಗೆ ತರಬೇಡ.

೬೯. ಕಣ್ಣಿನಷ್ಟು ಪ್ರಕಾಶವಿಲ್ಲ, ಮಣ್ಣಿನಷ್ಟು ಆಧಾರವಿಲ್ಲ.

೭೦. ಕಟ್ಟೋಕೆ ಎತ್ತಿಲ್ಲ, ಬಿತ್ತೋಕೆ ರಾಗಿಯಿಲ್ಲ.

೭೧. ಕರೆಯುವ ಹಸಾ ಕೊಟ್ಟು, ಒದೆಯುವ ಕತ್ತೆ ತಂದ ಹಾಗೆ.

೭೨. ಕಲ್ಲು ಹೊಲಕ್ಕೆ ಹುರುಳಿ ಬಿತ್ತು.

೭೩. ಕುಪ್ಪನ ನಂಬಿ ಕೊಳಕೇ ಬಿತ್ತಿದೆ, ಕುಪ್ಪ ಓಡಿ ಹೋದ ಕೊಳಗೆ ಹೊತ್ತಿ ಹೋಯಿತು.

೭೪. ಕುಡೀ ಕಿತ್ತರೂ ಅಡಿ ಸಾಯುವುದೇ?

೭೫. ಕುರುಡು ಚಿತ್ತೆ.

೭೬. ಕುರುಬನಿಗೆ ತೋರಿದೆ ರಾಗಿ ಕುಕ್ಕೆ; ಆತ ತೋರಿದ ಕುರಿ ಹಿಕ್ಕೆ.

೭೭. ಕೃತ್ತಿಕೆ ಮಳೆಯಲ್ಲಿ ಬಿತ್ತಿದರೆ ಕುರಿತಷ್ಟು ಎಳ್ಳು.

೭೮. ಕೆಟ್ಟ ಗದ್ದೆಗೆ ಮನೇ ನೆಲ್ಲು ಏರ ಹಾಕಿದರು.

೭೯. ಕೆಟ್ಟ ಭೂಮಿಗೆ ಮನೇ ದವಸಾ ಕೊಟ್ಟು ಕೂಲಿ ಮಾಡಿಸಿದ.

೮೦. ಕೆಬ್ಬೆ ನೆಲ ಮೈ ತುಂಬ ಸಾಲ.

೮೧. ಕೆಂಗಲು ಹೊಲಕೆ ಅಂಗುಲ ಬಿತ್ತನೆ.

೮೨. ಕೊಟ್ಟ ಸಾಲ ಕೇಳದೆ ಹೋಯಿತು, ಮಾಡಿದ ಆರಂಬ ನೋಡದೆ ಹೋಯಿತು.

೮೩. ಕೋಣ ಗದ್ದೆ ಉತ್ತರೆ, ಮೊಸರೋಗರಾ ಇಕ್ಕೋರೋ?

೮೪. ಗದ್ದೆಗೆ ಬಿಟ್ಟ ನೀರೂ, ಪರರಿಗೆ ಕೊಟ್ಟ ಮಾತೂ, ಬೆನ್ನಿಗೆ ಕೊಟ್ಟ ಪೆಟ್ಟೂ ಹಿಂದಕ್ಕೆ ಬಾರದು.

೮೫. ಗಾಣಿಗನ ಮನೆಯೆತ್ತು ಒಯ್ಯಬೇಡ, ಪೂಜಾರೀ ಮನೆಯ ಹೆಣ್ಣು ಒಯ್ಯಬೇಡ.

೮೬. ಗಿಡನಾಗಿ ಬೊಗ್ಗದ್ದು ಮರನಾದ ಮೇಲೆ ಬೊಗ್ಗೀತೇ?
೮೭. ಗುತ್ತಿಗೆ ಕೊಟ್ಟು ಹೋಯಿತು, ಸುತ್ತಿಗೆ ಮುಣಿಗಿ ಹೋಯಿತು.
೮೮. ಗುದ್ದಿದ ಗುದ್ದೂ ಗದ್ದೆಗೆ ಬಿಟ್ಟ ನೀರೂ ಸರಿ.
೮೯. ಗೌರಿ ಹೊತ್ತೆ ಗರಿ ಮೇಯಬೇಕು.
೯೦. ಚಿತ್ತೆ ಮಳೆ ಬರುವಾಗ ಚಿಟ್ಟೆಗಳು ಬಂದಾವಂತೆ.
೯೧. ಚಿತ್ರೆ ಮಳೆ ಎತ್ಲಿಂದಾದ್ರೂ ಬತ್ತದೆ.
೯೨. ಚೌಳು ಭೂಮಿ ಮಣ್ಣು, ಅಣಬೆ ಬೆಳೆ ಕಣ್ಣು.
೯೩. ಚೌಳು ಭೂಮಿಗೆ ಬಿತ್ತನೆ ದಂಡ.
೯೪. ಚೌಳು ನೆಲದ ಬೆಳೆ, ನೀರಿಲ್ಲದ ಬೊಳೆ.
೯೫. ಜಾಲಿ ಬಿತ್ತಲು ಕಾಲಿಗೆ ಮೂಲ.
೯೬. ಜೋಳ ಹೊಸದಾದರೆ ಮುತ್ತು ಆದೀತೇ?
೯೭. ತಗ್ಗು ದವಸಕ್ಕಾಗಿ ಹಗ್ಗಾ ಕೊಂಡ ಹಾಗೆ.
೯೮. ತಗ್ಗು ಗದ್ದೆಗೆ ಮೂರು ಬೆಳೆ ಎತ್ತರದ ಗದ್ದೆಗೆ ಒಂದೇ ಬೆಳೆ.
೯೯. ತಂದೆಯಂತೆ ಮಗ, ಚಿತ್ತೆಯಂತೆ ಸ್ವಾತಿ.
೧೦೦. ತಾಳು ಬಡಿದರೆ ಕಾಳು ಸಿಕ್ಕೀತೇ?
೧೦೧. ತಾಯಿ ಮಡಿಲು, ಹೊಂಗೆ ನೆಳಲು.
೧೦೨. ತುಳಿದ ಧಾನ್ಯ ಮಳಲು ಸಮ.
೧೦೩. ತೆಕ್ಕೆಯಿಲ್ಲದ ಎತ್ತು ಬಿಕ್ಕಿ ಪಲ್ಕಿರಿದಂತೆ.
೧೦೪. ತೆನೆ ತಿಂದ ಎತ್ತು ತೆವರಿಯನ್ನು ಏರಿತು.
೧೦೫. ತೆಳ್ಳಗೆ ಬಿತ್ತು, ಬಳ್ಳದಲ್ಲಿ ಅಳಕೊ.
೧೦೬. ತೋಟದ ಮೂಳನಿಗೆ ಯಾತರ ಸಿರಿ ಅಂದರೆ ನೇತಾಡುವ ಎರಡು ಬದನೇಕಾಯಿ ಸಿರಿ.
೧೦೭. ತೋಟ ಮೂರು ಮೊಳ, ಕಾಯಿ ಆರು ಮೊಳ.
೧೦೮. ತೋಟ ಸೊಕ್ಕಿದರೆ ಆಡನಿರಿಸು ನಾಡು ಸೊಕ್ಕಿದರೆ ಕೊಂಕಣಿಯನಿರಿಸು.
೧೦೯. ತೋಟ ಹಾಳಾಗುವ ಕಾಲಕ್ಕೆ ಕೋತಿ ಮೋರೆ ಕಾಯಿ ಹುಟ್ಟಿತು.
೧೧೦. ತೆಂಕಣ ಗಾಳಿ ಮಂಕುಮಳೆ ಬರಸೀತು.
೧೧೧. ತೆಂಗಿನ ಮರ ತೆಂಕಲಾಗಿ ಹೆಚ್ಚು.
೧೧೨. ತೆಂಗನ್ನು ತೇಲಿಸಿ ನೆಡು, ಬಾಳೆ ಬಿಗಿದು ನೆಡು.
೧೧೩. ತೊಂಬತ್ತರ ಮೇಲೆ ತೊಗರಿ ಬೇಳೆ.
೧೧೪. ದನದ ಗೊಬ್ಬರ ಹೊಲಕ್ಕೆ; ಎಲೆ ಗೊಬ್ಬರ ಗದ್ದೆಗೆ.

೧೧೫. ದನದ ಮನಸ್ಸನ್ನೂ ದಾಯಾದಿಯ ಮನಸ್ಸನ್ನೂ ಯಾರು ಬಲ್ಲರು?
೧೧೬. ದನದ ಮುಂದೆ ಹೋಗಬೇಡ, ಕುದುರೆ ಹಿಂದೆ ಹೋಗಬೇಡ.
೧೧೭. ದುಡಿಯೋ ಎತ್ತು ಮಡಿದು ಬಿತ್ತು.
೧೧೮. ದೋರೆ ಹಣ್ಣು ನೋಡಕ್ಕೆ ಚೆನ್ನ, ಮಾಗಿದ ಹಣ್ಣು ತಿನ್ನೋಕೆ ಚೆನ್ನ.
೧೧೯. ಧನವಿಲ್ಲದಿದ್ದರೂ ದನವಿದ್ದರೆ ಸಾಕು.
೧೨೦. ನವಧಾನ್ಯ ಬೆಳೆದವನಿಗೆ ವ್ಯವಧಾನವಿಲ್ಲ.
೧೨೧. ನಾಡು ಬೆಳದರೆ ಹಾಡಿ ಉಣ್ಣಬಹುದು.
೧೨೨. ನೀರ ಕಡೆ ನಾಟಿದ ಮರ ಚಿಗುರದೆ ಬಿಟ್ಟೀತೇ?
೧೨೩. ನೀರುಳ್ಳಿ ನೀರಲ್ಲಿ ತೊಳದರೆ ನಾರೋದು ತಪ್ಪೀತೇ?
೧೨೪. ನೆಚ್ಚಿದ ಎಮ್ಮೆ ಕೋಣನಾಯಿತು.
೧೨೫. ನೆರಮನೆ ಹಾಳಾದರೆ ಕರುಗಳ ಕಟ್ಟುವೆನು.
೧೨೬. ನೆಲಕ್ಕೆ ಹಲ, ರಾಜ್ಯಕ್ಕೆ ಬಲ.
೧೨೭. ನೆಲ ಬಲವಂತನಿಗೆ, ಕುಲ ನೇಮವಂತನಿಗೆ.
೧೨೮. ನೆಲ ನೋಡಿ ಬಾವಿ ತೆಗಿ, ಕುಲ ನೋಡಿ ಹೆಣ್ಣು ತಾ.
೧೨೯. ನೇಗಲು ಉತ್ತರೆ ಹೊಲ, ಹಾಲು ಇದ್ದರೆ ಗೋವು.
೧೩೦. ನೊಗ ಇದ್ದರೆ ನೇಗಿಲು, ಮಗ ಇದ್ದರೆ ತಂದೆ.
೧೩೧. ಪರರನ್ನು ಕಾಯೋಕ್ಕಿಂತ ಪಶುಗಳ ಕಾಯೋದು ಲೇಸು.
೧೩೨. ಪೋಲೀ ದನಕ್ಕೆ ಹಾಲು ಹೆಚ್ಚು, ಕೂಲೀ ಮುಂಡೆಗೆ ನಾಲಿಗೆ ಹೆಚ್ಚು.
೧೩೩. ಫಲಕ್ಕೆ ತಕ್ಕ ಬೀಜ, ನೆಲಕ್ಕೆ ತಕ್ಕ ನೀರು.
೧೩೪. ಫಲಾ ನೋಡದೆ ಕೆಟ್ಟಿತು ಹೊಲ ಹೂಡದೆ ಕೆಟ್ಟಿತು.
೧೩೫. ಫಲಾ ಬಿತ್ತಿ ಪಾಪ ಕಳೆ.
೧೩೬. ಬತ್ತಿದ ಕೆರೇಲಿ ಬದನೆ ಹಾಕಿದರೆ ಕದನಕ್ಕೆ ಕಾರಣ.
೧೩೭. ಬರಡೆಮ್ಮೆಗೆ ಕರಡು ಹುಲ್ಲು.
೧೩೮. ಬಲವಿದ್ದರೆ ನೆಲ.
೧೩೯. ಬಳ್ಳಿ ಹಿಡಿದು ಕಾಯಿ ಕೊಯ್ಯಬೇಕು.
೧೪೦. ಬಾಳೆಗೊಂದು ಗೊನೆ.
೧೪೧. ಬಾಳೆ ಬಗದುಹಾಕು, ತೆಂಗು ತೇಲಿಸಿ ಹಾಕು.
೧೪೨. ಬಾಳೆಗೆ ಕಡಗು, ಸೂಳೆಗೆ ಬೆಡಗು.
೧೪೩. ಬ್ರಾಹ್ಮಣರಿಗೆ ತುಪ್ಪ, ಭೂಮಿಗೆ ಗೊಬ್ಬರ.

೧೪೪. ಬಿತ್ತ ಬೀಜ ಹತ್ತು ಸಾರಿ ಒಣಗಿಸು.

೧೪೫. ಬಿತ್ತದೆ ಬೆಳೆಯೆ?

೧೪೬. ಬಿತ್ತಲಿಲ್ಲ ಬೆಳೆಯಲಿಲ್ಲ ಎತ್ತಲಾಗಿಂದ ಬಂದಿಯೋ ಹಕ್ಕಿ ರಾಜ.

೧೪೭. ಬಿತ್ತಿ ಕೆಟ್ಟರೂ ಕೆಡು, ಬಿತ್ತದೆ ಕೆಡಬೇಡ.

೧೪೮. ಬಿತ್ತಿದ ಪಯ್ರು ಕೆತ್ತಿದರೆ ಆದೀತೇ?

೧೪೯. ಬಿತ್ತಿದ ಬೀಜಕ್ಕೆ ಸತ್ತಿಗೆ ಹಿಡಿದ ಹಾಗೆ.

೧೫೦. ಬಿತ್ತುವಾಗ ಮಲಗಿದರೆ ಕೊಯ್ಯುವಾಗ ಹಗುರವಾಯಿತು.

೧೫೧. ಬೀಜ ಬಲ್ಲವ ಬೇಸಾಯ ಬಲ್ಲ.

೧೫೨. ಬೆಳಗ್ಗೆ ಬಂದ ಮಳೆ, ಬೆಳಗ್ಗೆ ಬಂದ ನೆಂಟ ಹೆಚ್ಚು ಹೊತ್ತು ಇರೋದಿಲ್ಲ.

೧೫೩. ಬೆಳೆ ಹೊಗಳಿಸಿ ಉಣ್ಣ ಬೇಕು, ಹಯನು ಹಂಗಿಸಿ ಉಣ್ಣ ಬೇಕು.

೧೫೪. ಬೆಳೆ ಗುಣ ಉಳುಮೇಲಿ ನೋಡು.

೧೫೫. ಬೆಳೆಗೆ ಸಾಕ್ಷಿ ಕೂಳೆ.

೧೫೬. ಬೆಳೆಯ ಸಿರಿ ಮೊಳೆಯಲ್ಲಿ.

೧೫೭. ಬೆಳೆದರೆ ಉಳಿವು ಇಲ್ಲದಿದ್ದರೆ ಅಳಿವು.

೧೫೮. ಬೇವಿನ ಬೀಜ ಮಾವಿನ ಮರ ಕೊಟ್ಟೀತೆ?

೧೫೯. ಬೋದು ಹೊಲ ಬಾಧೆಗೆ ಕಾರಣ.

೧೬೦. ಬಂದರೆ ಮಘೆ, ಹೋದರೆ ಹೊಗೆ.

೧೬೧. ಭರಣಿ ಬಿಸಲು ಭರಿಸೋಕೆ ಆಗೋದಿಲ್ಲ.

೧೬೨. ಭರಣಿ ಮಳೆ ಧರಣಿ ಎಲ್ಲಾ ಬೆಳೆ.

೧೬೩. ಭೂಮಿಯಂತೆ ಬೆಳೆ

೧೬೪. ಭೂತಾಯಿ ಮಾತಾಯಿ.

೧೬೫. ಮಕ್ಕಳ ಕೆಲಸ ತಿಳಿಯದು, ಮಕ್ಕೀ ಗದ್ದೇ ಬೆಳೆ ತಿಳಿಯದು.

೧೬೬. ಮಖೆ ಮಳೆ ಆದರೆ ಮೊಕ ತೊಳೆಯುವುದಕ್ಕೇ ಆಗದೇ?

೧೬೭. ಮಗೆ ಮಳೆ ಬಿದ್ದರೆ ಮಗೆ ಗಾತ್ರ ತೆನೆ.

೧೬೮. ಮಘೇ ನೀರು ಮೊಗೇಲಿಡು ಅಂದ ಹಾಗೆ.

೧೬೯. ಮಡ್ಡಿ ತಿನ್ನದ ಎಮ್ಮೆ ಗೊಡ್ಡು ಆದೀತೆ?

೧೭೦. ಮಣ್ಣಿಗೆ ಹೆಣ್ಣಿಗೆ ಆರೈಕೆ ಎಷ್ಟು ಮಾಡಿದರೂ ಸಾಲದು.

೧೭೧. ಮಣ್ಣು ಪರೀಕ್ಷೆ, ಕಣ್ಣು ಪರೀಕ್ಷೆ.

೧೭೨. ಮಣ್ಣು ರೈತನ ಕಣ್ಣು.

೧೭೩. ಮಣ್ಣು ಬಡವಾದರೆ ಕಣ್ಣು ಕುರುಡಾಯಿತು.

೧೭೪. ಮನೆ ನೋಡಿ ಹೆಣ್ಣು ಕೊಡು, ಮೆದೆ ನೋಡಿ ಎತ್ತು ಕೊಡು.

೧೭೫. ಮರ ನೆಟ್ಟು ಬರ ಅಟ್ಟು.

೧೭೬. ಮಳೆ ಬೀಳೆ ಬರವಿಲ್ಲ, ಗಂಡನಿರೆ ಭಯವಿಲ್ಲ.

೧೭೭. ಮಳೆ ಆಗೆ ಕೇಡಿಲ್ಲ.

೧೭೮. ಮಳೆಯಿಲ್ಲದ ಬೆಳೆ ಮಾತೆಯಿಲ್ಲದ ಕೂಸು ಸಮ.

೧೭೯. ಮಳೆಯಾದರೆ ಕೇಡಲ್ಲ, ಮಗನುಂಡರೆ ಕೇಡಲ್ಲ.

೧೮೦. ಮಳೆಗಾಲದ ಬಿಸಿಲು ನಂಬಬಾರದು, ನಗೆಗಾರನ ಮಾತು ನಂಬಬಾರದು.

೧೮೧. ಮಿಕ್ಕ ಎಳ್ಳು ಮಿಷ್ಕಿರೀಲಿ ಚೆಲ್ಲು.

೧೮೨. ಮೂಡಭಕ್ತಿಗೆ ಕೇಡಿಲ್ಲ, ಮೂಡೆ ರಾಗಿಗೆ ಭಯವಿಲ್ಲ.

೧೮೩. ಮೃಗಶಿರ ಹೊಯ್ಯಲು ಮುದಿ ಎತ್ತು ಗರ್ಜಿಸಿತು.

೧೮೪. ಮೃಗಶಿರ ಹೊಯ್ಯೋಕೆ, ಮುಖ ಗುಡುಗೋಕೆ.

೧೮೫. ಮೃಗಶಿರ ಮಳೆ, ಮುಂಗಾರು ಬೆಳೆ.

೧೮೬. ಮೇಟಿ ಬಲವಿದ್ದರೆ ಕೋಟಿ ಗೆಲಬಹುದು.

೧೮೭. ಮುಂಜಾನೆ ಮಳೆ ಅಲ್ಲ, ಮಧ್ಯಾಹ್ನದ ನೆಂಟನಲ್ಲ.

೧೮೮. ಯಾರು ಕೈಕೊಟ್ಟರೂ ಭೂಮ್ತಾಯಿ ಕೈಬಿಡೋಲ್ಲ.

೧೮೯. ರಟ್ಟೆ ಮುರಿಯಬೇಕು, ರೊಟ್ಟಿ ತಿನ್ನಬೇಕು.

೧೯೦. ರೋಹಿಣಿ ಮಳೆ ಬಂದರೆ ಓಣಿ ಎಲ್ಲ ಜೋಳ.

೧೯೧. ರೈತನ ಮುಗ್ಗು ನಾಡಿನ ಕುಗ್ಗು.

೧೯೨. ವಿಶಾಖೆ ಹಿಡಿದರೆ ಪಿಶಾಚಿ ಹಿಡಿದಂತೆ.

೧೯೩. ಸತ್ತು ಹೋದ ಕಳೆ, ಕೈತುಂಬ ಬೆಳೆ.

೧೯೪. ಸಾಲ ಕೇಳದೆ ಹೋಯಿತು, ಹೊಲ ನೋಡದೆ ಹೋಯಿತು.

೧೯೫. ಸಿಸ್ತು ಇಲ್ಲದ ಭೂಮಿಗೆ, ಶಾಮಿಲಾತು ಕೂಡೀತೋ?

೧೯೬. ಸ್ವಾತಿ ಮಳೆ ಹುಯ್ದರೆ ಮುತ್ತಿನಂಥ ಜೋಳ.

೧೯೭. ಹತ್ತೋಕೆ ಮೊದಲು ಕುದುರೆ ನೋಡು, ಬಿತ್ತೋಕೆ ಮೊದಲು ಹೊಲ ನೋಡು.

೧೯೮. ಹನಿ ಕೂಡಿದರೆ ಹಳ್ಳ, ತೆನೆ ಕೂಡಿದರೆ ಭತ್ತ.

೧೯೯. ಹಸ್ತಮಳೆ ಬೀಳದಿದ್ದರೆ ಹೆತ್ತ ತಾಯಿ ಹಿಟ್ಟು ಇಕ್ಕೋದಿಲ್ಲ.

೨೦೦. ಹಸ್ತ ಹಿಟ್ಟು ಇಕ್ಕುತ್ತೆ.

೨೦೧. ಹಸ್ತಕ್ಕೆ ಆರುಕಾಲು, ಚಿತ್ತಕ್ಕೆ ಮೂರು ಕಾಲು.

೨೦೨. ಹಸ್ತಕ್ಕೆ ಹದ, ಚಿತ್ತಕ್ಕೆ ಬೆಳೆ.

೨೦೩. ಹಾಳಾಯ್ತು ಚಿತ್ತ ಗಾಳಿತಂದು ಹಸ್ತ.

೨೦೪. ಹಿಟ್ಟಿನಂತೆ ದೋಸೆ, ಮೆಲುವಿನಂತೆ ದನ, ಗೊಬ್ಬರದಂತೆ ಧಾನ್ಯ.

೨೦೫. ಹುಣಿಸೆ ಮುಪ್ಪಾದರೆ ಹುಳಿ ಮುಪ್ಪೇ?

೨೦೬. ಹುಚ್ಚು ಮಳೆ ಆದರೂ ಲೇಸು.

೨೦೭. ಹುಬ್ಬೇ ಮಳೆ ಅಬ್ಬೇ ಹಾಲು.

೨೦೮. ಹುಬ್ಬೇ ಮಳೇಗೆ ಗುಬ್ಬಿ ತಲೇನೂ ನೆನೆಯದು.

೨೦೯. ಹುಬ್ಬ ಹುಚ್ಚು ಮಳೆ- ಗುಬ್ಬಿ ಪುಕ್ಕ ನೆನೆಯೋದಿಲ್ಲ.

೨೧೦. ಹುಲ್ಲು ಕೊಡವಿದವ ಉಂಡು ಬಂದ, ಗೋಣಿ ಕೊಡವಿದವ ಹಸಿದು ಬಂದ.

೨೧೧. ಹೂಡುವ ಎತ್ತು ಕೊಟ್ಟು ಆಡುವ ಹೋರಿ ತಂದ.

೨೧೨. ಹೆಡ್ಡನ ಆರಂಬ ಗೊಬ್ಬರದಲ್ಲಿ.

೨೧೩. ಹೆಣ್ಣು ದೂರದಿಂದ ತರಬೇಕು,ದನ ಹತ್ತರದಿಂದ ತರಬೇಕು.

೨೧೪. ಹೆತ್ತವರಿಗೆ ಮಕ್ಕಳು, ಬಿತ್ತಿದವರಿಗೆ ಬೆಳೆ.

೨೧೫. ಎತ್ತಿದಕ್ಕನ ಕೈ ಬಲಗೈ.

೨೧೬. ಹೊಲ ಬಿತ್ತಿ ನೋಡು, ನೆಲ ಸಾರಿಸಿ ನೋಡು.

೨೧೭. ಹೊಲೆಯನ ನಂಬಿ ಹೊಲವ ಹೊಗಬಾರದು, ಕುಳ್ಳನ ನಂಬಿ ನೀರಿಗಿಳಿಯಬಾರದು.

೨೧೮. ಹೋರಿ ನೆಚ್ಚಿ ಹೊಲ ಮಾಡಬಾರದು, ಪೋರಿ ನೆಚ್ಚಿ ಬೇರೆ ಆಗಬಾರದು.

೨೧೯. ಹೋರಿ ನಡೆಯದಿದ್ದರೆ ಹಾದಿ ಉದ್ದ ಅಂದ ಹಾಗೆ.

೨೨೦. ಹೋರಿ ಬಾಳುವುದಕ್ಕಿಂತ ಸೇರಿ ಬಾಳಬೇಕು.

೨೨೧. ಕ್ಷೇತ್ರಕ್ಕೆ ತಕ್ಕ ಬೀಜ, ಪಾತ್ರಕ್ಕೆ ತಕ್ಕ ದಾನ.

